'ವಿಜಯ ಕರ್ನಾಟಕ'ದಲ್ಲಿ ಪ್ರಕಟಗೊಂಡ ಅಂಕಣ ಬರಹಗಳ ಸಂಗ್ರಹ

# ಬೆತ್ತಲೆ ಜಗತ್ತು

ಪ್ರತಾಪ್ ಸಿಂಹ





# ಬೆತ್ತಲೆ ಜಗತ್ತು

ಭಾಗ: 2

ಪ್ರತಾಪ್ ಸಿಂಹ



ಸಾಹಿತ್ಯ ಪ್ರಕಾಶನ

ಕೊಪ್ಪೀಕರ್ ಬೀದಿ, ಹುಬ್ಬಳ್ಳಿ: ೫೮೦ ೦೨೦

ಸಾಹಿತ್ಯ ಪ್ರಕಾಶನ
ಕೊಪ್ಪೀಕರ್ ಬೀದಿ, ಹುಬ್ಬಳ್ಳಿ: ೫೮೦ ೦೨೦
☎ : (0836) 236 76 76.
Email : sahithyaprakashana@yahoo.co.in

ಸಂಪಾದನ-ಪ್ರಕಾಶನ:
ಎಂ.ಎ. ಸುಬ್ರಹ್ಮಣ್ಯ



ವಿಮರ್ಶೆ-ಮಾರ್ಗದರ್ಶನ :
ಸರ್ವಶ್ರೀ ನಿರಂಜನ ವಾಲಿಶೆಟ್ಟರ, ಹುಬ್ಬಳ್ಳಿ
ಡಾ. ಜಿ. ಎಂ. ಹೆಗಡೆ, ಧಾರವಾಡ
ಎಸ್.ಕೆ. ದೇಸಾಯಿ, ಹುಬ್ಬಳ್ಳಿ

**Bettale Jagattu - 2 (A collection of articles) : by Pratap Simha;**
**Published by: Sahitya Prakashana, Koppikar Road, Hubli:580 020.**



ಮುದ್ರಣ : 2006, 2007, 2008, 2010, 2011

N.S.M/L ಡೆಮಿ 1/8 ಪುಟಗಳು: 200

ಮುಖಪುಟ : ಲಕ್ಷ್ಮೀಕಾಂತ

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೨, ೨೬೬೧ ೮೭೫೩

# ಅರ್ಪಣೆ

ಮಕ್ಕಳು, ಮಕ್ಕಳು
ಅಂತಾ ತನ್ನನ್ನೇ ಮರೆತಿರುವ
ಅಮ್ಮ ಹಾಗೂ ಅಪ್ಪಯ್ಯ
ಮತ್ತು ತಂಗಿ-ತಮ್ಮಂದಿರಿಗೆ

# ಕೃತಜ್ಞತೆಗಳು

ಕಳೆದ ಆರೂ ಚಿಲ್ಲರೆ ವರ್ಷಗಳಲ್ಲಿ ನಾನು ಮುಖಾಮುಖಿಯಾಗಿ ಮಾತನಾಡಿದ್ದು ಒಮ್ಮೆ ಮಾತ್ರ. ಅದೂ ನನಗೆ ಕಾಂಪ್ಲಿಮೆಂಟ್ಸ್ ಹೇಳಲು ಚೇಂಬರ್‌ಗೆ ಕರೆಸಿದ್ದರು. ಕೆಲವೊಮ್ಮೆ ಸಂಪಾದಕರ ಮೂಲಕ ಕಿವಿಮಾತು ಹೇಳಿದ್ದನ್ನು ಬಿಟ್ಟರೆ ಮೆಚ್ಚುಗೆ ಸೂಚಿಸಿದ್ದೇ ಹೆಚ್ಚು. ಹೀಗೇ ಬರೆಯಬೇಕು, ಇಂಥದ್ದೇ ಬರೆಯಬೇಕು, ಇಂತಹವರನ್ನು ಟೀಕಿಸ ಕೂಡದು ಅಂತಾ ಒಮ್ಮೆಯೂ ಹೇಳಿಲ್ಲ. ಬರೆಯುವುದಕ್ಕೆ ಸದಾ ಮುಕ್ತ ಸ್ವಾತಂತ್ರ್ಯ. ನಾನು ಹೇಳುತ್ತಿರುವುದು ನನ್ನ ಮಾಲೀಕರಾದ ಶ್ರೀ ವಿಜಯ ಸಂಕೇಶ್ವರ ಅವರ ಬಗ್ಗೆ. ಒಬ್ಬ ಪತ್ರಕರ್ತನಾದವನಿಗೆ ನಿರ್ಭೀತಿಯಿಂದ ಬರೆಯಲು, ಪರಿಣಾಮವನ್ನು ಲೆಕ್ಕಿಸದೆ ತಪ್ಪನ್ನು ಎತ್ತಿತೋರಿಸಲು, ಟೀಕಿಸಲು ಸಂಕೇಶ್ವರ ಅವರಂತಹ ಮಾಲೀಕರು ಬೇಕೇ ಬೇಕು. ನನ್ನ ಏಳಿಗೆಯಲ್ಲಿ ಮಹತ್ವದ ಪಾತ್ರ ಹೊಂದಿರುವ ಅವರಿಗೆ,

ಸ್ನೇಹದ ಸಲುಗೆ ನೀಡಿರುವ, ಆಗಾಗ್ಗೆ ಮಾರ್ಗದರ್ಶನ ನೀಡುವ ಹಾಲ್ದೊಡ್ಡೇರಿ ಸುಧೀಂದ್ರ ಸರ್‌ಗೆ, ತಮ್ಮ ಅಂಕಣದಲ್ಲಿ ನನ್ನ ಹೆಸರು ಪ್ರಸ್ತಾಪಿಸಿ, ಮೆಚ್ಚುಗೆಯ ಮಾತನಾಡಿ ನನ್ನ ಜವಾಬ್ದಾರಿಯನ್ನು ಹೆಚ್ಚಿಸಿರುವ ಸಿ.ಆರ್. ಸಿಂಹ ಅವರಿಗೆ,

ಸದಾ ಸಲಹೆ ಕೊಡುವ ನಮ್ಮ ಪತ್ರಿಕೆಯ ವ್ಯಂಗ್ಯಚಿತ್ರ ಬರಹಗಾರರಾದ ಎಸ್.ವಿ. ಪದ್ಮನಾಭ್‌ಗೆ, ಬರವಣಿಗೆಯೆಂಬ ಕಸುಬಿನ ಮಹತ್ವದ ಘಟ್ಟದಲ್ಲಿ ಅಮೂಲ್ಯ ಸಲಹೆ ನೀಡಿ, ಅಂಕಣಗಳಿಗೆ ಹೊಸ ಹೊಳಪು ನೀಡಿದ ಸ್ನೇಹಿತ ಚಕ್ರವರ್ತಿ ಸೂಲಿಬೆಲೆಗೆ,

ಕೋಳಿ ಜಗಳದಿಂದಲೂ ಮುರಿಯದ 'ಗರ್ವ' ಪತ್ರಿಕೆಯ ಸಂಪಾದಕ ಸುಧೀಂದ್ರ ಕಂಚೀತೋಟ ಎಂಬ ಸ್ನೇಹ ಮತ್ತು ಪ್ರೀತಿಗೆ, ಅಣ್ಣಂದಿರಂತಿರುವ ಕೆ.ಎಸ್. ಜಗನ್ನಾಥ್ ಮತ್ತು 'ವಿಜಯ್ ಟೈಮ್ಸ್'ನ ಹೇಮಂತ್ ಕುಮಾರ್‌ಗೆ, ಸ್ನೇಹಿತರಾದ ವೇಣು, ಮಂಜು, ಕೊಪ್ಪನಿಗೆ,

ಚಲನಚಿತ್ರವಾಗಲಿ, ಸಂಗೀತವಾಗಲಿ ಅದನ್ನು ವೈಭವೀಕರಿಸಿ, ಕಲ್ಪನೆಯ ವಿಸ್ತಾರವನ್ನು ಹಿಗ್ಗಿಸಿ ಬರೆಯಲು ಎಲ್ಲೋ ಒಂದು ಕಡೆ ಪ್ರೇರಣೆಯಾಗುವ ವಿಜಯ್ ಲೋಂಡೆಗೆ,

ಅಕ್ಕನ ಪ್ರೀತಿ, ವಾತ್ಸಲ್ಯ ಕೊಟ್ಟಿರುವ ಶಶಿರೇಖಾ ಹೆಗಡೆಗೆ,

ಕಿರಿಯ ಸೋದರನಂತಿರುವ ಶ್ರೀಶ ಪುಣಚನಿಗೆ, ಮುಖಪುಟ ವಿನ್ಯಾಸ ಮಾಡಿಕೊಟ್ಟ ಸ್ನೇಹಿತ 'ಅಪಾರ'ಗೆ, ನಮ್ಮ ಪ್ರೂಫ್ ರೀಡರ್ ಶಿವಕುಮಾರ್‌ಗೆ,

ಈ ಪುಸ್ತಕವನ್ನು ಹೊರತರಲು ನೆರವಾಗಿರುವ ಹುಬ್ಬಳ್ಳಿಯ ಸುಜಾತ ಸರ್ದೇಶ್‌ಪಾಂಡೆ, ಬೆಂಗಳೂರಿನ ಕಾಮಾಕ್ಷಿಪಾಳ್ಯದ ಬೆಟ್ಟೇಗೌಡ್ರು, ಉಜಿರೆ ಎಸ್‌ಡಿಎಂ ಕಾಲೇಜಿನ ಉಪನ್ಯಾಸಕರಾದ ಅಜಯ್ ಮತ್ತು ಶೈಲೇಶ್ ಅವರಿಗೆ

ಮತ್ತು....

ಮುಖಾಮುಖಿಯಾಗದೆ, ಮುಖತೋರದೆ 'ಕರೆ'ಯಲ್ಲೇ ನನ್ನ ಎಲ್ಲ ದೌರ್ಬಲ್ಯಗಳನ್ನೂ ಅರ್ಥಮಾಡಿಕೊಂಡಿರುವ, 'ಮಾರಲ್ ಪೊಲೀಸ'ನಂತೆ ತಪ್ಪು ಹುಡುಕಿ ತಿದ್ದುವ, Pratap, rise above ಎಂದು ಪ್ರೇರೇಪಿಸುವ ಮೆಹೆಕ್ ಕುಮಾರ್‌ಗೆ,

ಹಾಗೂ ನಿಮಗೆ.

ಪ್ರತಾಪ್ ಸಿಂಹ

# ಮುನ್ನುಡಿ

ಕಳೆದ ಐದು ವರ್ಷಗಳಿಂದ ಪ್ರತಾಪ್ 'ವಿಜಯ ಕರ್ನಾಟಕ'ದ ಓದುಗರಿಗೆ ಸುಪರಿಚಿತರು. ಜಗತ್ತಿನಲ್ಲಿ ನಡೆದ ಯಾವುದೋ ಸಂಗತಿಯನ್ನು ಹೆಕ್ಕಿ ತಂದು ವಿಶ್ಲೇಷಕ ದೃಷ್ಟಿಯಿಂದ ಹರವಿಕೊಂಡು ಚಿಕಿತ್ಸಕ ನೋಟದಿಂದ ಬರೆಯುವ ಇವರು ಈ ಅತ್ಯಲ್ಪ ಅವಧಿಯಲ್ಲಿ ಅಪಾರ ಓದುಗರ ಮೆಚ್ಚುಗೆಯನ್ನು ಸಂಪಾದಿಸಿದ್ದಾರೆ. ನನಗೆ ತಿಳಿದ ಮಟ್ಟಿಗೆ ಪ್ರತಾಪ್ ಕನ್ನಡದ ಅತಿ ಕಿರಿಯ ಅಂಕಣಕಾರ. ಅಂಕಣಕಾರರಿಗೆ ಇರಲೇಬೇಕಾದ ಬಿಳಿಗಡ್ಡ, ಬಿರುನೋಟ ಯಾವುದೂ ಇಲ್ಲ. ಮೂಲತಃ ಮೀಸೆ ಗಟ್ಟಿಯಾಗಿ ಮೂಡಿರುವ ಬಗ್ಗೆ ಅನುಮಾನವಿದೆ. ಆದರೆ ಇವರ ಒಳನೋಟ, ವಿಷಯ ಗ್ರಹಿಕೆ, ತಿಳಿವಳಿಕೆ, ನಿರೂಪಣೆ, ವಿಷಯ ವಿಮರ್ಶೆಗೆ ಇವ್ಯಾವುವೂ ನೆಪವಾಗಲಿಲ್ಲ. ವಾರಕ್ಕೊಂದು ವಿಷಯ ಹುಡುಕಿಕೊಂಡು ಬಂದು ಬರೆಯುವ ದರ್ದು ಏನೆಂಬುದು ಅಂಕಣಕಾರನಾದವನಿಗೇ ಗೊತ್ತು. ಅದರಲ್ಲೂ ವಿದೇಶ ವಿದ್ಯಮಾನದಂಥ ಗಹನ ವಿಷಯದ ಬಗ್ಗೆ ವಾರಕ್ಕೊಮ್ಮೆ ಹೊಸ ಹುರುಪಿನಿಂದ ಬರೆಯಲು ಕುಳಿತುಕೊಳ್ಳುವುದು ಸಣ್ಣ ಸಂಗತಿ ಅಲ್ಲ.

ಪ್ರತಾಪ್ ಅವರ ಎಲ್ಲ ಅಂಕಣ ಬರಹಗಳಿಗೆ ಬಹುಶಃ ಮೊದಲ ಓದುಗ ನಾನೇ. ಪ್ರತಿ ಅಂಕಣವನ್ನೂ ಕಣ್ಣರಳಿಸಿ ನೋಡಿದ್ದೇನೆ. ಗ್ರಹಿಕೆಯ ಕದ ತೆರೆದುಕೊಂಡು ಅರಿವಿನ ಕವಾಟ ಸರಿಸಿ ಓದಿದ್ದೇನೆ. ಪೂರ್ತಿ ಓದಿದ ಸ್ವಾದ ಅನುಭವಿಸುತ್ತಾ ಮೆಲುಕು ಹಾಕಿದ್ದೇನೆ. ನಮಗೆ ಹೊಳೆಯದ ಹೊಸ ಅರ್ಥ, ಚಬುಕು, ವಿಸ್ತಾರ, ಆಳ ಕಂಡು ದಿಮ್ಮಗೆ ಅಚ್ಚರಿಪಟ್ಟಿದ್ದೇನೆ. ಕೋಫಿ ಅನ್ನಾನ್, ಬುಶ್, ಬ್ಲೇರ್, ಮುಷರ್ರಫ್ ಮೇಲೊಂದು ಛಾಟಿ ಬೀಸಿದಾಗ 'ಎಲಾ ಇಂವನಾ?' ಎಂದು ಒಳಗೊಳಗೇ ಅಂದುಕೊಂಡಿದ್ದೇನೆ. ಪ್ರತಿ ಅಂಕಣವೂ ಒಂದಿಲ್ಲೊಂದು ರೀತಿಯಲ್ಲಿ, ತನ್ನದೇ ಆದ ವೈಶಿಷ್ಟ್ಯಗಳಿಂದ ಗಮನ ಸೆಳೆದಿದೆ. ಈ ವೈಶಿಷ್ಟ್ಯಗಳು ಹಾಗೇ ಅನ್ನಿಸಲು ಕಾರಣ ನೇರ ನಿರೂಪಣೆ ಹಾಗೂ ಅಗ್ದಿ ಸಿಂಪಲ್ಲು ಭಾಷೆ. ಅಲ್ಲಲ್ಲಿ ಆವೇಶ, ಜಡ್ಜ್‌ಮೆಂಟು ಕೊಡುವ ಧಾವಂತವನ್ನು ಕೇವಲ ಒಂದು ಗುಣವನ್ನಾಗಿ ಪರಿಗಣಿಸಿದರೆ ಈ ದೋಷವನ್ನು ಸಹ ಸಹಿಸಿಕೊಳ್ಳಬಹುದು. ಪ್ರಸ್ತುತ ಸಂದರ್ಭದಲ್ಲಿ ಅಂಥ ಪ್ರಯೋಗ ಅಂಕಣಕಾರನ ಸೊಗಸು ಅಥವಾ ಶೈಲಿಯೆನಿಸಿಕೊಳ್ಳುವುದರಿಂದ ಅಂಥ ಧಾವಂತವೂ ಈ ಅಂಕಣದ ಸತ್ವವಾಗಿರುವುದು ಹೆಚ್ಚುಗಾರಿಕೆಯೇ.

ಇಲ್ಲಿನ ಎಲ್ಲ ಬರಹಗಳು ಆಯಾ ಕಾಲಘಟ್ಟದಲ್ಲಿ ನಡೆದವುಗಳಾದರೂ ಇಡಿಯಾಗಿ ಓದುವಾಗ, ವಾರದಿಂದ ವಾರಕ್ಕೆ ಜಗತ್ತು ಹೊರಳಿದ, ಉರುಳಿದ ಮಗ್ಗುಲುಗಳನ್ನು ತೋರಿಸುತ್ತದೆ. ಅಂಥ ಹೊರಳಾಟ ಈ ಪುಟಗಳಲ್ಲಿ ದಾಖಲೆಯಾಗಿರುವುದು ಗಮನಾರ್ಹ. ಹೀಗಾಗಿ ಇಲ್ಲಿನ ಬರಹಗಳು ಯಾವುದೋ ಒಂದು ದೇಶದ ಬಿಡಿ ಘಟನೆಯೆಂದು ಅನಿಸುವುದಿಲ್ಲ. ಬಿಡಿ

ಘಟನೆಯೂ ಒಟ್ಟಾರೆ ವಿದ್ಯಮಾನಗಳ ಪ್ರಮುಖ ತುಕಡಿಯಾಗುತ್ತದೆ.

ಪ್ರತಾಪ್ ತಮ್ಮ ಕೃತಿಯಲ್ಲಿ ಭರವಸೆ, ವಿಸ್ಮಯಗಳನ್ನು ಮೂಡಿಸಿದ್ದಾರೆ. ಅಂತಾರಾಷ್ಟ್ರೀಯ ವಿಷಯಗಳ ಬಗ್ಗೆ ಬರೆಯುವವರು ಕೆಲವು ಇಸಮ್ಮುಗಳಿಗೆ ಅಂಟಿಕೊಂಡು ಬರಹಗಳಲ್ಲಿ ಅವುಗಳ ತಾಕಲಾಟದಿಂದ ನರಳುತ್ತಾರೆ. ಆದರೆ ಪ್ರತಾಪ್ ಅವರ ಬರಹಗಳಲ್ಲಿ ಇಂಥ ಇಸಮ್ಮುಗಳ ನೆರಳು ಹಾಯುವುದಿಲ್ಲ. ಇತ್ತೀಚಿನ ದಿನಗಳಲ್ಲಿ ಅಂತಾರಾಷ್ಟ್ರೀಯ ಸಂಬಂಧಗಳು ಈಗ ಸೂತ್ರ-ಫಾರ್ಮುಲ-ತರ್ಕದಿಂದ ಏರ್ಪಡುವುದಿಲ್ಲ. ಮಾರುಕಟ್ಟೆ ಸಂಬಂಧಿತ ಶಕ್ತಿಗಳು ಇಂಥ ಮೈತ್ರಿಯನ್ನು ನಿರ್ಧರಿಸುವ ಅಂಶಗಳಾಗಿವೆ. ಈ ವಿಷಯದ ಬಗ್ಗೆ ಬರೆಯುವವರು ಈ ಸಂಗತಿಯನ್ನು ಗಮನಿಸಬೇಕು. ಆಗ ಇನ್ನಷ್ಟು ಸ್ತರಗಳು ಬಿಚ್ಚಿಕೊಂಡು ಓದುಗರಿಗೆ ಹೊಸ ಸಾಧ್ಯತೆಗಳ ಅನಾವರಣವಾಗುತ್ತದೆ. ಪ್ರತಾಪ್‌ಗೆ ಇಂಥ ಎಳೆ ಗುರುತಿಸುವ ಸಾಮರ್ಥ್ಯ ಸಿದ್ಧಿಸಲಿ. ಅವರು ಬರೆಯುವ ವಾರದ ಕೈಫಿಯತ್ತು ಹೀಗೇ ಜಾರಿಯಲ್ಲಿರಲಿ.

ನನ್ನಾಸೆ ಇದೇ!

ವಿಶ್ವೇಶ್ವರ ಭಟ್

# ಅವರೇ ಎಲ್ಲ....

ಒಂದೂ ಗೊತ್ತಾಗುತ್ತಿಲ್ಲ!

ಅನಿರೀಕ್ಷಿತ ಅನ್ನಬೇಕೋ, ಅದೃಷ್ಟ ಎಂದು ದೈವಕ್ಕೆ ನಮಿಸಬೇಕೋ.. ಊಹುಂ.. ಒಂದೂ ತೋಚುತ್ತಿಲ್ಲ.

1999, ಮೇ.22ರಂದು ಮಂಗಳೂರಿನಿಂದ ನೇರವಾಗಿ ಬೆಂಗಳೂರಿಗೆ ಬಂದಿಳಿದಾಗ ಭವಿಷ್ಯವೇ ಒಂದು ದೊಡ್ಡ ಪ್ರಶ್ನೆಯಾಗಿತ್ತು. ಅಂತೂ ಇಂತೂ ಡೆಕ್ಕನ್ ಹೆರಾಲ್ಡ್ ಪತ್ರಿಕೆಯಲ್ಲಿ ಎರಡು ತಿಂಗಳು ಇಂಟರ್ನ್‌ಶಿಪ್ ಮುಗಿಸಿದ್ದಾಯಿತು. ಮೂರನೇ ಕ್ಲಾಸಲ್ಲೇ ಊರು ಬಿಟ್ಟವನಿಗೆ ಮನೆ ಎಂದೋ ದೂರವಾಗಿತ್ತು. ವಾಪಸ್ ಹೋಗುವ ಪ್ರಶ್ನೆಯೇ ಇರಲಿಲ್ಲ. ಅದೇ ವೇಳೆಗೆ ಶ್ರೀ ವಿಜಯ ಸಂಕೇಶ್ವರ ಕನ್ನಡ ಪತ್ರಿಕೆಯೊಂದನ್ನು ಪ್ರಾರಂಭಿಸುತ್ತಿದ್ದಾರೆ ಎಂಬ ವಿಷಯ ಗೊತ್ತಾಯಿತು. ಕನ್ನಡನೋ, ಇಂಗ್ಲಿಷೋ ಒಟ್ಟಿನಲ್ಲಿ ಬೆಂಗಳೂರಲ್ಲೇ ಉಳಿಯಬೇಕು. ಅದಕ್ಕೊಂದು ಕೆಲಸ ಬೇಕು. ಅರ್ಜಿ ಹಿಡಿದು ಬಂದಿದ್ದಾಯಿತು. ಮರು ದಿನವೇ ಟೆಸ್ಟ್. ಎಷ್ಟೋ ಜನರಿಗೆ ಅನ್ನದ ಮಾರ್ಗ ತೋರಿದ್ದ ಶ್ರೀ ಈಶ್ವರ ದೈತೋಟ ನನಗೂ ಕೆಲಸ ಕೊಟ್ಟರು. ಇನ್ನೂ ಹೊಸಬ ಎನ್ನದೆ ವಿಶ್ವಾಸ ತೋರಿದರು. ಅಕ್ಟೋಬರ್‌ನಲ್ಲಿ ಪತ್ರಿಕೆಯೂ ಪ್ರಾರಂಭವಾಯಿತು. ಈ ನಡುವೆ 'ಈ ಟೀವಿ' ಎಂಬ ಕನ್ನಡ ಚಾನೆಲ್ ಪ್ರಾರಂಭವಾಗುವ ಸುದ್ದಿ ಹಬ್ಬಿತು. ನೇಮಕಾತಿಯೂ ಆರಂಭವಾಯಿತು. ವಿಜಯ ಕರ್ನಾಟಕದಲ್ಲಿ 'ವಿಶ್ವ ವಿಹಾರ' ಎಂಬ ಅಂಕಣ ಬರೆಯುತ್ತಿದ್ದ ಶ್ರೀ. ಬಿ.ವಿ. ಶಿವಶಂಕರ್ 'ಈ ಟೀವಿ' ಸೇರಿದರು. ಆಗಿನ ಸಹ ಸಂಪಾದಕರಾಗಿದ್ದ ಶ್ರೀ ಸೂ. ರಮಾಕಾಂತ್ ಅಂದ್ರೆ ಇಡೀ ಕಚೇರಿಯೇ ಸಣ್ಣಗೆ ನಡುಗುತ್ತಿತ್ತು. ಅಷ್ಟೊಂದು ಕಟ್ಟುನಿಟ್ಟು. ಆದರೆ ನನ್ನ ಮೇಲೆ ಅದೇನೋ 'ಸಾಫ್ಟ್‌ಕಾರ್ನರ್'. ಇತ್ತ ಹೆಸರಿಗೆ ಉಪಸಂಪಾದಕನಾದರೂ ನಾನು ಮಾಡುತ್ತಿದ್ದುದು ಪೇಜಿನೇಟರ್ ಕೆಲಸ. ರಮಾಕಾಂತ್ ಸಾರಥ್ಯದಲ್ಲಿದ್ದ ಸಂಪಾದಕೀಯ ಪುಟದ ವಿನ್ಯಾಸಕಾರ ನಾನೇ ಆಗಿದ್ದೆ(ಇಂದಿಗೂ). ಹಾಗಾಗಿ ಅವರ ಸಾಮಿಪ್ಯ ದೊರೆತಿತ್ತು. ಅದುವರೆಗೂ ಪಿಟಿಐ ಕಾಪಿಗಳನ್ನೇ ಟ್ರಾನ್ಸ್ಲೇಟ್ ಮಾಡದ ನಾನು, ''ಸರ್, ಶಿವಶಂಕರ್ ಬರೆಯುತ್ತಿದ್ದ ಕಾಲಮ್ಮನ್ನು ನಾನು ಬರೆಯಲಾ?'' ಎಂದು ಕೇಳಿಯೇ ಬಿಟ್ಟೆ.

ಕ್ಷಣವೂ ಯೋಚಿಸಲಿಲ್ಲ!

ಒಂದು ಅಂಕಣವನ್ನು ಬರೆದು ತನ್ನಿ, ನೋಡಿ ಪ್ರಕಟಿಸುತ್ತೇನೆ ಎಂದರು. ಮರುದಿನವೇ ಬರೆದುಕೊಂಡು ಬಂದೆ. ಒಮ್ಮೆ ಕಣ್ಣಾಯಿಸಿದರು. ''ತುಂಬಾ ಚೆನ್ನಾಗಿದೆ. ಆದರೆ ಈಗಲೇ

'ವಿಶ್ವವಿಹಾರ' ಎಂಬ ಟೈಟಲ್ ಕೊಡುವುದಿಲ್ಲ. ನಾನು ಪಾರ್ಷಿಯಾಲಿಟಿ ಮಾಡುತ್ತಿದ್ದೇನೆ ಎಂದು ಈಶ್ವರ್‌ಗೆ ಅನಿಸಬಾರದು. ಎರಡು ವಾರ ಬರೆಯಿರಿ. ಆ ಮೇಲೆ ಟೈಟಲ್ ಕೊಡುತ್ತೇನೆ'' ಎಂದರು!!

ಎರಡು ವಾರ ಕಳೆಯಿತು. 'ವಿಶ್ವವಿಹಾರ' ಟೈಟಲ್ ಕೆಳಗೆ ನನ್ನ ಹೆಸರು ಬರುವ ಸಂದರ್ಭವೂ ಬಂತು. ಆದರೆ ಅದರ ಹಿಂದಿನ ದಿನ ರಾತ್ರಿಯೇ ಹೃದಯಾಘಾತಕ್ಕೊಳಗಾದ ರಮಾಕಾಂತ್ ಬೆಳಗಾಗುವಷ್ಟರಲ್ಲಿ ಕಣ್ಣು ಮುಚ್ಚಿದ್ದರು. ಟೈಟಲ್ ಸಿಕ್ಕು, ಅದರ ಕೆಳಗೆ ನನ್ನ ಹೆಸರೂ ಬಂತು. ಆದರೆ ಅತ್ಯಂತ ಕಳಪೆಯಾಗಿ ಬರೆದಿದ್ದ ನನ್ನ ಮೊದಲ ಲೇಖನವನ್ನು ''ತುಂಬಾ ಚೆನ್ನಾಗಿದೆ'' ಎಂದು ಹಸಿಸುಳ್ಳು ಹೇಳಿ, ಬೆನ್ನುತಟ್ಟಿ ಬರೆಯಲು ಹಚ್ಚಿದ ದೈವವೇ ನನ್ನಿಂದ ದೂರವಾಗಿತ್ತು. ಹೌದು, ರಮಾಕಾಂತ್ ನನ್ನ ಮಟ್ಟಿಗಂತೂ ದೇವರು. ಮುಂದೆ ಸಂಪಾದಕರಾದ ಶ್ರೀ ಮಹಾದೇವಪ್ಪ ಸರ್ ಮತ್ತು ಸುದ್ದಿ ಸಂಪಾದಕರಾಗಿದ್ದ ಶ್ರೀ ಮನೋಹರ್ ಯಡವಟ್ಟಿಯವರೂ ಸಹ ಎಲ್ಲ ಪ್ರೋತ್ಸಾಹ, ವಾತ್ಸಲ್ಯದೊಂದಿಗೆ ಮಾರ್ಗ ತೋರಿದರು.

ಇನ್ನು, ಇನ್ನೆಲ್ಲ ವಿಶ್ವೇಶ್ವರ ಭಟ್.

ಎಷ್ಟೋ ಜನ ಕೇಳಿದ್ದಾರೆ-''ಇಷ್ಟೊಂದು ನೇರವಾಗಿ ಬರೆಯುತ್ತೀಯಲ್ಲಾ, ಟೀಕಿಸುತ್ತೀಯಲ್ಲಾ ಧೈರ್ಯ ಎಲ್ಲಿಂದ ಬರುತ್ತೆ? ಹೆದರಿಕೆಯಾಗಲ್ವಾ? ಬೆದರಿಕೆ ಹಾಕಲ್ವಾ?''. ಇಂತಹ ಪ್ರಶ್ನೆಗಳನ್ನು ನನಗೆ ನಾನೇ ಕೇಳಿಕೊಂಡಿದ್ದುಂಟು. ಆದರೆ ಉತ್ತರ ಮಾತ್ರ ಒಂದೇ-''ಭಟ್ಟರು ಇರುವಾಗ ಚಿಂತೆಯೇಕೆ''!

ಬಹುಶಃ ನನ್ನ ಕಲ್ಪನೆಗೆ ನಿಲುಕದ, ಮತ್ತೆ ಮತ್ತೆ ಪ್ರಶ್ನೆಯಾಗಿ ನಿಲ್ಲುವ, ವಾದದಲ್ಲಿ ಗೆಲ್ಲಲಾಗದ ವ್ಯಕ್ತಿ ಅವರು ಮಾತ್ರ. ''ಸರ್, ವಿಜಯ ಕರ್ನಾಟಕ ಆರಂಭವಾಗಿ ಆರು ವರ್ಷಗಳಾದವು. ಮೊದಲ ದಿನದಿಂದಲೂ ಕೆಲಸ ಮಾಡುತ್ತಿದ್ದೇನೆ. ಅವತ್ತೂ ಉಪ ಸಂಪಾದಕನಾಗಿದ್ದೆ. ಇವತ್ತೂ ಉಪಸಂಪಾದಕನಾಗಿಯೇ ಇದ್ದೇನೆ. ಭಡ್ತಿ ಪಡೆಯುವ ಅರ್ಹತೆ ನನಗಿಲ್ಲವೆ? ನಿನ್ನೆ-ಮೊನ್ನೆ ಬಂದವರು ನನಗಿಂತ ಹೆಚ್ಚಿಗೆ ಸಂಬಳ ಪಡೆಯುತ್ತಿದ್ದಾರೆ? ನನಗೇಕೆ ಬರೀ ಇಷ್ಟೇ?'' ಎಂಬ ಹತ್ತಾರು ಪ್ರಶ್ನೆಗಳನ್ನು ಮನದಲ್ಲಿ ತುಂಬಿಕೊಂಡು, ವಾದದಲ್ಲಿ ಗೆದ್ದೇ ತೀರುತ್ತೇನೆ ಅಂದುಕೊಂಡು ಭಟ್ಟರ ಚೇಂಬರ್‌ಗೆ ಹೋದವನು, ಸೋತು ಹೊರಬಂದಿರುತ್ತಿದ್ದೆ. ಅವರ ಸ್ಥಾನದಲ್ಲಿ ಬೇರೆ ಯಾರೇ ಇರುತ್ತಿದ್ದರೂ ನನ್ನ ಹುಂಬತನ, ಹುಚ್ಚಾಟಿಕೆ, ಮುಂಗೋಪಗಳು ಕೆಲಸಕ್ಕೇ ಕುತ್ತು ತಂದಿರುತ್ತಿದ್ದವು.

ಭಟ್ಟರನ್ನು ನನ್ನ ಬರವಣಿಗೆಯ ಮೇಲೆ ಗಾಢ ಪ್ರಭಾವ ಬೀರಿದ ರೋಲ್ ಮಾಡೆಲ್ ಅನ್ನಲೋ, ಶೈಲಿಯನ್ನೇ ಬದಲಿಸಿದ ಜಾದೂಗಾರ ಎಂದು ಕರೆಯಬೇಕೋ, ತಿದ್ದಿ ತೀಡುವ

ಗುರು ಎನ್ನಬೇಕೋ, ಬೆನ್ನುತಟ್ಟಿ ಪ್ರೋತ್ಸಾಹಿಸುವ ಸಂಪಾದಕ ಅನ್ನಬೇಕೋ, ಈ-ಮೇಲ್‌ನಿಂದ ಫೀಮೇಲ್‌ವರೆಗೂ ಮಾತನಾಡುವ ಸಲುಗೆ ಕೊಟ್ಟಿರುವ ಸ್ನೇಹಿತ ಎಂದು ಹೇಳಲೋ, ಕಟು ಅಂಕಣಗಳನ್ನು ಬರೆದು ಕೆಲಸಕ್ಕೇ ಕುತ್ತು ತಂದುಕೊಂಡಾಗ ಬೆಂಗಾವಲಿಗೆ ನಿಲ್ಲುವ ಅಣ್ಣ ಅಂತಾ ಕರೆಯಬೇಕೋ?

ಎಲ್ಲ ಸ್ಥಾನಗಳಲ್ಲೂ ಕಾಣುವುದು ಅವರೊಬ್ಬರೇ.

ನೀವು ಪ್ರತಿ ಶನಿವಾರ ನನ್ನ ಅಂಕಣವನ್ನು ಓದುತ್ತಿದ್ದರೆ, ಇನ್ನು ಮುಂದೆಯೂ ಓದುವುದಿದ್ದರೆ ಅದಕ್ಕೆ ಕಾರಣ ಭಟ್ಟರೇ.

ಅವರೇ ಎಲ್ಲ!

ಪ್ರತಾಪ್ ಸಿಂಹ



ಗಾಂಧೀಜಿ!

ಇವತ್ತು ನಿಮ್ಮ ಹುಟ್ಟುಹಬ್ಬ. ಈ ದೇಶದಲ್ಲಿ ನೀವು ಜನ್ಮವೆತ್ತಿದ್ದೀರಲ್ಲಾ ಎಂಬುದನ್ನು ನೆನಪಿಸಿಕೊಂಡಾಗಲೇ ನಮಗೆ ಹೆಮ್ಮೆಯಾಗುತ್ತದೆ. ಮಾರ್ಟಿನ್ ಲೂಥರ್ ಕಿಂಗ್, ನೆಲ್ಸನ್ ಮಂಡೇಲಾ, ಜೂಲಿಯಸ್ ಕೆ. ನೈರೇರೆ, ಆ್ಯಂಗ್ ಸ್ಯಾನ್ ಸೂಕಿ ಅವರಂತಹ ಮಹಾನ್ ನೇತಾರರು, 'ಗಾಂಧೀಜಿಯವರೇ ತಮ್ಮ ಆದರ್ಶ ವ್ಯಕ್ತಿ, ತಮ್ಮ ಸ್ಫೂರ್ತಿ' ಎಂದಾಗಲಂತೂ ಭಾರತೀಯರಾದ ನಮ್ಮ ತಲೆಯ ಮೇಲೆರಡು ಕೋಡು ಮೂಡುತ್ತವೆ. ಎಂತಹ ಅದ್ಭುತ ವ್ಯಕ್ತಿ ನೀವು! ದೇಶದುದ್ದಗಲಕ್ಕೂ ಹರಡಿದ್ದ ಸ್ವಾತಂತ್ರ್ಯ ಹೋರಾಟಗಾರರನ್ನು

ಒಂದೇ ಸೂರಿನಡಿ ಒಟ್ಟು ಗೂಡಿಸಿದ ನಿಮ್ಮ ಸಾಧನೆ ಸಾಮಾನ್ಯವೇ? ಅದೂ ಎಲ್ಲ ಜಾತಿ, ಪಂಗಡ ಮತ್ತು ಧರ್ಮಗಳನ್ನು ಒಂದುಗೂಡಿಸುವುದು ಹುಡುಗಾಟಿಕೆಯ ಮಾತೇ? ಇದನ್ನೆಲ್ಲ ನೆನಪಿಸಿಕೊಂಡಾಗ ನಿಮ್ಮ ಮೇಲಿನ ಗೌರವ ಇಮ್ಮಡಿಯಾಗುತ್ತದೆ. ನಿಜಕ್ಕೂ ನೀವೊಬ್ಬ ಆದರ್ಶ ವ್ಯಕ್ತಿ.

ಗಾಂಧೀಜಿ, ಈ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ.54ರಷ್ಟಿರುವ ನಾವು, ತುರ್ತು ಪರಿಸ್ಥಿತಿಯ ನಂತರ ಜನಿಸಿದವರು. ನಿಮ್ಮ ಬಗ್ಗೆ ತಿಳಿದುಕೊಳ್ಳಲು ಇರುವ ಮಾರ್ಗವೆಂದರೆ ಪುಸ್ತಕಗಳು ಮಾತ್ರ. ಆದರೆ ಆ ಪುಸ್ತಕಗಳನ್ನು ಓದಿದಾಗಲೆಲ್ಲಾ ನಿಮ್ಮ ಬಗ್ಗೆ ಗೌರವ ಮೂಡುವ ಜತೆಗೆ ಮನದಲ್ಲಿ ಹತ್ತಾರು ಪ್ರಶ್ನೆಗಳೇಳುತ್ತವೆ, ಸಂಶಯಗಳು ಕಾಡುತ್ತವೆ. ಸ್ವತಃ ನಿಮ್ಮನ್ನೇ ಪ್ರಶ್ನಿಸೋಣವೆಂದರೆ ನೀವು ನಮ್ಮನ್ನಗಲಿ 56 ವರ್ಷಗಳಾಗಿವೆ. ಒಂದು ವೇಳೆ, ಮನದಲ್ಲಿರುವ ಅನುಮಾನಗಳನ್ನು ವ್ಯಕ್ತಪಡಿಸುವ ಧೈರ್ಯ ತೋರಿದರೆ, 'ದೇಶದ್ರೋಹಿ'ಗಳೆಂದು ಕರೆಸಿ ಕೊಳ್ಳಬೇಕಾಗುತ್ತದೆ. ಹಾಗಂತ ಅಂಜಿಕೊಂಡು, ಅನುಮಾನಗಳನ್ನು ನುಂಗಿಕೊಂಡು ಎಷ್ಟು ದಿನ ಸುಮ್ಮನಿರುವುದು?

ಗಾಂಧೀಜಿ, ನೀವು ಹುಟ್ಟುವುದಕ್ಕಿಂತ 12 ವರ್ಷ ಮೊದಲೇ ಸ್ವಾತಂತ್ರ್ಯದ ಕಹಳೆ ಮೊಳಗಿತ್ತು. ನೀವು ಹ್ಯಾಟು, ಬೂಟು, ಕೋಟು ಧರಿಸಿಕೊಂಡು ಬ್ಯಾರಿಸ್ಟರ್ ಪದವಿ ಪಡೆಯಲು ಇಂಗ್ಲೆಂಡ್‌ಗೆ ತೆರಳಿದ್ದಾಗಲಂತೂ ವೀರ ಸಾವರ್ಕರ್ ಲಂಡನ್‌ನಲ್ಲೇ ಕ್ರಾಂತಿಯ ಕಹಳೆ ಮೊಳಗಿಸಿದ್ದರು. ಆದರೆ ನೀವು, ಜಿನ್ನಾ, ನೆಹರೂ...ಹೀಗೆ ಹೋದವರಿಗೆಲ್ಲ ಬ್ಯಾರಿಸ್ಟರ್ ಪದವಿ ದೊರೆಯಿತು. ಸಾವರ್ಕರ್ ಮಾತ್ರ ಬರಿಗೈಲಿ ಮರಳಬೇಕಾಯಿತು. ಆದರೂ ಚಿಂತಿಸಲಿಲ್ಲ. ಏಕೆಂದರೆ ಸಾವರ್ಕರ್‌ಗೆ ಬ್ಯಾರಿಸ್ಟರ್ ಪದವಿಗಿಂತ ಲಂಡನ್‌ನಲ್ಲಿದ್ದ ಭಾರತೀಯರನ್ನು ಒಗ್ಗೂಡಿಸಿ ಸ್ವಾತಂತ್ರ್ಯ ಚಳವಳಿಗೆ ಧುಮುಕುವಂತೆ ಪ್ರೇರೇಪಿಸುವುದೇ ಮುಖ್ಯವಾಗಿತ್ತು. ಆದರೆ ವೃತ್ತಿ ಅರಸಿ ದಕ್ಷಿಣ ಆಫ್ರಿಕಾಕ್ಕೆ ತೆರಳಿದ್ದ ನೀವು, ದೇಶದ ಸ್ವಾತಂತ್ರ್ಯಕ್ಕಾಗಿ ಪ್ರಾಣವನ್ನೇ ಒತ್ತೆಯಿಟ್ಟಿದ್ದ ಸಾವಿರಾರು ಕ್ರಾಂತಿಕಾರಿಗಳನ್ನು 'ದಾರಿ ತಪ್ಪಿದ ದೇಶಭಕ್ತರು' ಎಂದು ಅಣಕಿಸಿದ್ದು ಸರಿಯೇ? 'ತಲೆಕೆಟ್ಟವರು'

ಎಂದು ಕೀಳಾಗಿ ಕರೆದಿದ್ದನ್ನು ನಾವು ಹೇಗೆ ತಾನೇ ಸಹಿಸಿಕೊಳ್ಳುವುದು? ಬ್ರಿಟಿಷರ ಬಂದೂಕಿಗೆ ಎದೆಕೊಟ್ಟವರು ದಾರಿ ತಪ್ಪಿದ ದೇಶಭಕ್ತರೇ? ನಿಮ್ಮಂತೆಯೇ ಅವರೂ ಸ್ವಾತಂತ್ರ್ಯಕ್ಕಾಗಿ ಹೋರಾಡುತ್ತಿರಲಿಲ್ಲವೇ? ಕ್ರಾಂತಿಕಾರಿಗಳು ಹಿಂಸಾ ಮಾರ್ಗವನ್ನು ಹಿಡಿದಿದ್ದರೂ ಗುರಿ ಒಂದೇ ಆಗಿರಲಿಲ್ಲವೆ? ಎಲ್ಲರೂ ನಿಮ್ಮಂತೆಯೇ ಅಹಿಂಸಾ ಮಾರ್ಗವನ್ನು ತುಳಿಯಬೇಕೆಂದು ಬಯಸಿದ್ದು ಸರಿಯೇ? ಇತರ ಸ್ವಾತಂತ್ರ್ಯ ಹೋರಾಟಗಾರರಿಗೆ ನೀವು ಕೊಟ್ಟ ಗೌರವ ಇದೇನಾ?

ಗಾಂಧೀಜಿ, ನಿಮ್ಮ ಜೀವನ ಮತ್ತು ಹೋರಾಟದ ಪ್ರತಿಪುಟಗಳನ್ನು ತಿರುವಿದಾಗಲೂ ನಮ್ಮ ಮುಂದೆ ಇಂತಹ ಪ್ರಶ್ನೆಗಳೇಳುತ್ತವೆ. ಅಂದು ನಿಮ್ಮ ಅಸಹಕಾರ ಚಳವಳಿಗೆ ಓಗೊಟ್ಟ ಸಾಮಾನ್ಯ ಜನರ ಮೇಲೆ ಪೊಲೀಸರು ಕ್ರೂರವಾಗಿ ನಡೆದುಕೊಂಡರು. ಹಿಂಸೆ, ದೌರ್ಜನ್ಯವನ್ನು ತಾಳಲಾರದೆ ರೊಚ್ಚಿಗೆದ್ದ ಜನ ಚೌರಿಚೌರ ಎಂಬಲ್ಲಿ 21 ಪೊಲೀಸರನ್ನು ಹತ್ಯೆಗೈದರು. ಆದರೆ ಹತ್ಯೆಯನ್ನು ಖಂಡಿಸಿ ನೀವು ಚಳವಳಿಯನ್ನೇ ಕೈಬಿಟ್ಟಿದ್ದು ಸರಿಯೆ? ಜನ ತುಟಿಕಚ್ಚಿಕೊಂಡು ಹಿಂಸೆಯನ್ನು ಸಹಿಸಿಕೊಳ್ಳಬೇಕೆಂದು ನೀವು ಬಯಸಿದ್ದು ಎಷ್ಟರಮಟ್ಟಿಗೆ ಸರಿ? ಸತ್ಯ, ಪ್ರೀತಿ ಮತ್ತು ಅಹಿಂಸೆಯಲ್ಲಿ ನಿಮಗಿದ್ದ ಅಚಲ ವಿಶ್ವಾಸವನ್ನು ಖಂಡಿತಾ ಪ್ರಶ್ನಿಸಲು ಸಾಧ್ಯವಿಲ್ಲ. ಆದರೆ ಕನಿಷ್ಠಪಕ್ಷ ದೌರ್ಜನ್ಯಕ್ಕೊಳಗಾದವರ ನೋವನ್ನು, ಹತಾಶೆಯನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವೂ ನಿಮಗಿರಲಿಲ್ಲವೇ? ಇನ್ನು ಭಗತ್ ಸಿಂಗ್, ಚಂದ್ರಶೇಖರ್ ಆಜಾದ್, ಸುಖದೇವ್... ಅಷ್ಟೇಕೆ ಲಾಲಾ ಲಜಪತ್ ರಾಯ್ ಅವರಂತಹ ವಯೋವೃದ್ಧರನ್ನೂ ಬ್ರಿಟಿಷರು ಒಂದೋ ನೇಣಿಗೇರಿಸಿದರು, ಇಲ್ಲವೇ ಕೊಂದರು. ಆದರೆ ನಿಮ್ಮ ವಿರುದ್ಧ ಕನಿಷ್ಠ ಲಾಟಿಯನ್ನೂ ಎತ್ತಲಿಲ್ಲವೇಕೆ? ನಿಮ್ಮಿಂದ, ನೆಹರೂ ಅವರಿಂದ ಬ್ರಿಟಿಷ್ ಸಾಮ್ರಾಜ್ಯಕ್ಕೆ ಯಾವುದೇ ಕುತ್ತಿಲ್ಲ ಎಂಬುದು ಗೊತ್ತಿದ್ದರಿಂದಲ್ಲವೇ ನಿಮ್ಮನ್ನು ಕೊಲ್ಲಲಿಲ್ಲ? ಕಿರುಬೆರಳಿನಿಂದಲೂ ತಿವಿಯಲಿಲ್ಲ? ನೀವೂ ಕೂಡ ಬ್ರಿಟಿಷರ ವಿರುದ್ಧ ಹುಲ್ಲುಕಡ್ಡಿಯನ್ನೂ ಎತ್ತಲಿಲ್ಲ. ಆದರೂ ಸ್ವಾತಂತ್ರ್ಯ ಹೋರಾಟಗಾರರನ್ನು ನೇಣಿಗೇರಿಸುತ್ತಿದ್ದ ಬ್ರಿಟಿಷರ ವಿರುದ್ಧ ಬಂದೂಕು ಹಿಡಿದವರನ್ನು ನೀವು ಟೀಕಿಸುತ್ತಿದ್ದುದೇಕೆ? ಶೋಷಣೆ ಯಲ್ಲಿ ತೊಡಗಿದ್ದ ಬ್ರಿಟಿಷರ ವಿರುದ್ಧ ಕ್ರಾಂತಿಕಾರಿಗಳು ಬಂದೂಕು ಹಿಡಿದಿದ್ದು ತಪ್ಪು ಎನ್ನುವುದಾದರೆ ಕ್ರಾಂತಿಕಾರಿಗಳನ್ನು ಬ್ರಿಟಿಷರು ನೇಣಿಗೇರಿಸುತ್ತಿದ್ದುದು ಸರಿಯೆ? ಚಕಾರವೆತ್ತದೆ ನೇಣಿಗೆ ತಲೆ ಕೊಡಬೇಕಿತ್ತೇ? ಕ್ರಾಂತಿಕಾರಿಗಳನ್ನು ಖಂಡಿಸುತ್ತಿದ್ದ ನಿಮಗೆ ಬೇಕಿದ್ದು ಸ್ವಾತಂತ್ರ್ಯದ ದಯಾ ಭಿಕ್ಷೆಯೇ?

ಅಂದು ಸುಭಾಷ್‌ಚಂದ್ರ ಬೋಸ್ ಕ್ರಾಂತಿಯ ಹಾದಿ ತುಳಿದಿದ್ದರೂ ಮುಕ್ತಮನಸ್ಸಿನಿಂದ ನಿಮ್ಮ ಮುಂದಾಳತ್ವವನ್ನು ಒಪ್ಪಿಕೊಂಡಿದ್ದರು. ಅಷ್ಟೇಕೆ, 'ರಾಷ್ಟ್ರಪಿತ' ಎಂದು ನಿಮ್ಮನ್ನು ಕರೆದಿದ್ದೇ ಸುಭಾಷರು. ಆದರೆ ಅದೇ ಸುಭಾಷ್‌ಚಂದ್ರ ಬೋಸರ ವಿರುದ್ಧ ನೀವು ಕತ್ತಿ ಮಸೆದಿದ್ದೇಕೆ? 1938ರಲ್ಲಿ ಸುಭಾಷ್‌ಚಂದ್ರ ಬೋಸ್ ಕಾಂಗ್ರೆಸ್‌ನ ಅಧ್ಯಕ್ಷರಾದರು. ಆದರೆ 1939ರಲ್ಲಿ ಮರು ಆಯ್ಕೆ ಬಯಸಿದಾಗ, ಎಲ್ಲಿ ಉಗ್ರ ನಿಲುವು ಹೊಂದಿದ್ದವರ ಕೈ ಮೇಲಾಗುತ್ತದೋ ಎಂಬ ಭಯದಿಂದ ಸುಭಾಷ್‌ಚಂದ್ರ ಬೋಸ್ ವಿರುದ್ಧ ನೀವೇ ತೋಳೇರಿಸಿದ್ದೂ ಆಯಿತು.

ಸುಭಾಷ್‌ರ ವಿರುದ್ಧ ಪಟ್ಟಾಭಿ ಸೀತಾರಾಮಯ್ಯನವರನ್ನು ಚುನಾವಣೆಗೆ ನಿಲ್ಲಿಸಿ, 'ಒಂದು ವೇಳೆ ಸೀತಾರಾಮಯ್ಯನವರು ಸೋತರೆ ಅದು ನನ್ನ ಸೋಲು' ಎಂದು ಸಾರ್ವಜನಿಕವಾಗಿ ಘೋಷಣೆ ಮಾಡಿದ್ದೂ ಆಯಿತು. ಆದರೂ ಸೀತಾರಾಮಯ್ಯನವರು ಹೀನಾಯವಾಗಿ ಸೋತರು! ಅದು ನಿಮ್ಮ ಸೋಲೂ ಆಗಿತ್ತು. ಜನ ನೀಡಿದ ತೀರ್ಪನ್ನು ಗೌರವಯುತವಾಗಿ ಸ್ವೀಕರಿಸುವ ಬದಲು ನೀವು ಮಾಡಿದ್ದೇನು? ಮುನಿಸಿಕೊಂಡು ಸುಭಾಷ್ ವಿರುದ್ಧ ಕಾಂಗ್ರೆಸ್‌ನಲ್ಲಿ ಅಸಹಕಾರ ಚಳವಳಿ ಆರಂಭಿಸಿದ್ದು ಸರಿಯೇ? ಕೊನೆಗೆ ಬೋಸರು ನೊಂದು ಅಧ್ಯಕ್ಷ ಸ್ಥಾನಕ್ಕೆ ರಾಜೀನಾಮೆ ನೀಡಿದರು. ಕಾರಣ ನೀವಲ್ಲವೇ? ಹಾಗಾದರೆ ಕಾಂಗ್ರೆಸ್ ಎಂಬುದು ನಿಮ್ಮ ಸ್ವಂತ ಆಸ್ತಿಯಾಗಿತ್ತೆ? ಅಥವಾ ಸುಭಾಷ್‌ರನ್ನು ಬೆಳೆಯಲು ಬಿಟ್ಟರೆ ನಿಮ್ಮ ಪಟ್ಟಕ್ಕೇ ಕುತ್ತು ಬರುತ್ತದೆಂಬ ಭಯವಿತ್ತೆ? ನಿಮಗೆ ಸ್ವಾತಂತ್ರ್ಯಕ್ಕಿಂತ ಮುಂದಾಳತ್ವವೇ ಮುಖ್ಯವಾಗಿತ್ತೆ? ಅಂತಹ ಅನುಮಾನಕ್ಕೆ ಅವಕಾಶ ಮಾಡಿಕೊಟ್ಟಿದ್ದು ನೀವೇ ಅಲ್ಲವೇ?

ಸಾಲದೆಂಬಂತೆ, ಅಂದು ಸುಭಾಷ್‌ಚಂದ್ರ ಬೋಸರು ದೇಶವನ್ನು ವಿಮೋಚನೆ ಮಾಡಲು ಭಾರತೀಯ ರಾಷ್ಟ್ರೀಯ ಸೇನೆಯನ್ನು ತರುತ್ತೇನೆಂದಾಗ, 'ಸುಭಾಷ್ ವಿರುದ್ಧ ನಾನೇ ಕತ್ತಿ ಹಿಡಿದು ಹೋರಾಡುತ್ತೇನೆ' ಎಂದರು ಚಾಚಾ ನೆಹರೂ! ಬ್ರಿಟಿಷರ ವಿರುದ್ಧ ಹುಲ್ಲುಕಡ್ಡಿ ಎತ್ತಲೂ ಅಂಜುತ್ತಿದ್ದ ಹೇಡಿ ನೆಹರೂ, ಬೋಸ್ ಅವರಂತಹ ಅಪ್ರತಿಮ ಸ್ವಾತಂತ್ರ ಹೋರಾಟಗಾರನ ವಿರುದ್ಧ ಕತ್ತಿ ಹಿಡಿಯುತ್ತೇನೆಂದಾಗ ನೀವೇಕೆ ನೆಹರೂ ಅವರನ್ನು ಖಂಡಿಸಲಿಲ್ಲ? ಸುಭಾಷ್ ಚಂದ್ರ ಬೋಸರೇನಾದರೂ ಹೋರಾಟದ ಮೂಲಕ ದೇಶಕ್ಕೆ ಸ್ವಾತಂತ್ರ್ಯ ತಂದುಕೊಟ್ಟರೆ, ಪ್ರಧಾನಿಪಟ್ಟ ಕೈತಪ್ಪಿ ಹೋಗುತ್ತದೆಂಬ ಭಯ ನೆಹರೂಗಿತ್ತು. ಅದು ನಿಮಗೂ ಗೊತ್ತಿತ್ತು. ಆದರೂ ಸ್ವಾರ್ಥಿ ನೆಹರೂ ಅವರನ್ನು ಖಂಡಿಸುವ ಧೈರ್ಯವನ್ನೇಕೆ ತೋರಲಿಲ್ಲ? ಸ್ವಾತಂತ್ರ್ಯಕ್ಕಿಂತ ನೆಹರೂ ಮೇಲೆ ನಿಮಗಿದ್ದ ಒಲವೇ ಮುಖ್ಯವಾಗಿತ್ತೇ? ನಿಜ ಹೇಳಿ ಗಾಂಧೀಜಿ, ಅದು ಅಂಗೈ ಅಗಲ ಜಾಗವೇ ಆಗಿರ ಬಹುದು. ಆದರೆ ಈ ದೇಶಕ್ಕೆ ಮೊದಲು ಸ್ವಾತಂತ್ರ್ಯ ತಂದುಕೊಟ್ಟಿದ್ದು ಯಾರು? ಅಂಡಮಾನ್ ಮತ್ತು ನಿಕೋಬಾರ್ ದ್ವೀಪಗಳನ್ನು ಶಹೀದ್ ಮತ್ತು ಸ್ವರಾಜ್ ಎಂದು ಮರುನಾಮಕರಣ ಮಾಡಿದ ಸುಭಾಷ್ ಚಂದ್ರ ಬೋಸರಲ್ಲವೇ? ಅದಿರಲಿ, ಬ್ರಿಟಿಷರು ಅಂಜಿದ್ದು ನಿಮ್ಮ ಅಹಿಂಸಾ ಚಳವಳಿಗೋ ಅಥವಾ ಕ್ರಾಂತಿಕಾರಿಗಳಿಗೋ? ಲಾಟಿ ಎತ್ತುವ ಮೊದಲೇ ಕೋಳಕ್ಕೆ ಕೈ ನೀಡುತ್ತಿದ್ದ ಕಾಂಗ್ರೆಸಿಗರಿಗೆ ಅಂಜುವಷ್ಟು ಪುಕ್ಕಲರೇ ಬ್ರಿಟಿಷರು?

ಇತ್ತ ಮುಸ್ಲಿಮರು ಏಕಾಏಕಿ ಖಿಲಾಫತ್ ಚಳವಳಿ ಆರಂಭಿಸಿದರು. ಆದರೆ ನಿಮ್ಮನ್ನಾಗಲಿ, ನಿಮ್ಮ ಕಾಂಗ್ರೆಸ್ ಪಕ್ಷವನ್ನಾಗಲಿ ಆಹ್ವಾನಿಸಲಿಲ್ಲ. ಬೆಂಬಲವನ್ನೂ ಕೇಳಲಿಲ್ಲ. ಆದರೂ ನೀವಾಗಿಯೇ ಬೆಂಬಲ ಸೂಚಿಸಿದ್ದೇಕೆ? ಇಷ್ಟಾಗಿಯೂ ನೀವೇ ಆರಂಭಿಸಿದ ಕ್ವಿಟ್ ಇಂಡಿಯಾ ಚಳವಳಿಯನ್ನು ಮುಸ್ಲಿಮರೇಕೆ ಬೆಂಬಲಿಸಲಿಲ್ಲ? ಜಿನ್ನಾ ಅವರ ಮುಸ್ಲಿಂ ಲೀಗ್ ಇಂತಹ ದ್ರೋಹ ಬಗೆದರೂ, ವಿಶ್ವಾಸಘಾತುಕ ಕಾರ್ಯ ಮಾಡಿದರೂ ನೀವೇಕೆ ಖಂಡಿಸಲಿಲ್ಲ? ಆನಂತರವೂ ಮುಸ್ಲಿಮರನ್ನು ಓಲೈಸಲು ಯತ್ನಿಸಿದ್ದೇಕೆ? ಮುಸ್ಲಿಂ ತುಷ್ಟೀಕರಣವನ್ನು ಆರಂಭಿಸಿದ್ದು ನೀವೇ ಅಲ್ಲವೆ? ಈ ಮಧ್ಯೆ

ಮುಸ್ಲಿಮರಿಗೆ ಪ್ರತ್ಯೇಕ ರಾಷ್ಟ್ರ ಬೇಕೇಬೇಕೆಂದು ಜಿನ್ನಾ ಪಟ್ಟು ಹಿಡಿದರು. ಅಂತಹ ವ್ಯಕ್ತಿಗೆ ದೃಢ ಮಾತಿನ ಮಾತಿನ ಮೂಲಕ ಬಿಸಿ ಮುಟ್ಟಿಸುವುದನ್ನು ಬಿಟ್ಟು, 'ದೇಶ ಒಡೆಯುವುದು ಬೇಡ. ಬೇಕಾದರೆ ನೀನೇ ಪ್ರಧಾನಿಯಾಗು' ಎಂದು ಧರ್ಮಾಂಧ ಜಿನ್ನಾಗೆ ಆಹ್ವಾನ ನೀಡಿದ್ದು ತಪ್ಪಲ್ಲವೇ? ಈ ಮಧ್ಯೆ, 'ನನ್ನ ದೇಹವನ್ನು ಬೇಕಾದರೆ ತುಂಡು, ತುಂಡು ಮಾಡಿಕೊಳ್ಳಿ. ಆದರೆ ಭಾರತ ಇಬ್ಭಾಗವಾಗುವುದನ್ನು ನಾನು ಒಪ್ಪುವುದಿಲ್ಲ' ಎಂದು ನೀವು ಸಾರ್ವಜನಿಕವಾಗಿ ಘೋಷಣೆಯನ್ನೇನೋ ಮಾಡಿದ್ದಾಯಿತು. ಆದರೆ ಪ್ರಧಾನಿಯಾಗಲು ಆತುರ ಪಡುತ್ತಿದ್ದ ನೆಹರೂ ಮತ್ತು ನೀವು ದೇಶವಾಸಿಗಳಿಗೆ ಕೊಟ್ಟ ಮಾತಿಗೆ ತಪ್ಪಿ ನಡೆದಿದ್ದೇಕೆ?

ಅಂತೂ ಇಂತೂ, ಧರ್ಮದ ಆಧಾರದ ಮೇಲೆ ದೇಶ ಚೂರಾಯಿತು. ಇತ್ತ, ದೇಶದ ಮೊದಲ ಪ್ರಧಾನಿಯಾಗಿ ನಿಮ್ಮ ಕಾಂಗ್ರೆಸ್ ಕಾರ್ಯಕಾರಣಿ ಸಭೆ ಸರ್ದಾರ್ ಪಟೇಲ್ ಅವರನ್ನು ಆಯ್ಕೆ ಮಾಡಿತು. ಆದರೆ ಕೇವಲ ಒಂದು ಮತ ಗಳಿಸಿದ್ದ ನೆಹರೂ ಅವರನ್ನು ಪ್ರಧಾನಿಯಾಗಿ ಮಾಡುವ ಸಲುವಾಗಿ ನೀವು ಕಾರ್ಯಕಾರಣಿ ಸಭೆಯ ನಿರ್ಧಾರವನ್ನೇ ತಳ್ಳಿಹಾಕಿದ್ದು ಸರಿಯೇ? ನೆಹರೂ ಅವರ ಸ್ತ್ರೀಲೋಲ ಬುದ್ಧಿ ನಿಮಗೆ ಗೊತ್ತಿದ್ದರೂ ಈ ದೇಶದ ಚುಕ್ಕಾಣಿಯನ್ನು ಅಂತಹ ವ್ಯಕ್ತಿಯ ಕೈಗೆ ನೀಡುವಂತೆ ಪಟ್ಟು ಹಿಡಿದಿದ್ದು ತಪ್ಪಲ್ಲವೇ?

ಇನ್ನು ನಿಮ್ಮ ವೈಯಕ್ತಿಕ ಜೀವನವನ್ನೇ ತೆಗೆದುಕೊಳ್ಳಿ. ಸ್ವಾತಂತ್ರ್ಯ ಚಳವಳಿಗೆ ಕಾಯಾ, ಮನಸಾ ಅರ್ಪಿಸಿಕೊಂಡಿದ್ದೇನೆ ಎನ್ನುತ್ತಿದ್ದ ನೀವು ಇಳಿ ವಯಸ್ಸಿನಲ್ಲಿ ಬ್ರಹ್ಮಚರ್ಯವನ್ನು ಅಪ್ಪಿಕೊಂಡಿದ್ದಾಯಿತು. ಆದರೆ ನೀವು ಆ ಬ್ರಹ್ಮಚರ್ಯವನ್ನು ಪರೀಕ್ಷಿಸಿಕೊಳ್ಳುವ ಸಲುವಾಗಿ ಇಬ್ಬರು ಹೆಣ್ಣುಮಕ್ಕಳ ಮಧ್ಯೆ ನಗ್ನವಾಗಿ ಮಲಗಿಕೊಳ್ಳುವಂತಹ ಮಾರ್ಗವನ್ನು ಅನುಸರಿಸಿದ್ದು ಸರಿಯೇ?

ಗಾಂಧೀಜಿ, ಇಂತಹ ನೂರಾರು ಪ್ರಶ್ನೆಗಳು, ಅನುಮಾನಗಳು ಮನದಲ್ಲಿ ತುಂಬಿವೆ. ಆದರೂ ನಿಮ್ಮ ಮೇಲಿರುವ ಗೌರವಕ್ಕೆ ಯಾವತ್ತೂ ಚ್ಯುತಿ ಬಂದಿಲ್ಲ. ಕಡಿಮೆಯೂ ಆಗಿಲ್ಲ. ಪ್ರತಿ ವರ್ಷ ಅಕ್ಟೋಬರ್ 2 ಬಂತೆಂದರೆ ಅದೇ ಭಕ್ತಿಭಾವದಿಂದ ನಿಮ್ಮನ್ನು ಆರಾಧಿಸುತ್ತೇವೆ. ದೇಶಕ್ಕೆ ಆಪತ್ತು ಬಂದಾಗಲೂ ನೆನಪಾಗುವುದು ನೀವೇ. ವಿದೇಶಿಯರ ಎದುರು 'ನಾವು ಗಾಂಧಿ ಜನಿಸಿದ ನಾಡಿನವರು' ಎಂದು ಹೆಮ್ಮೆಯಿಂದ ಹೇಳಿಕೊಳ್ಳುತ್ತೇವೆ. ಆದರೆ ಕೆಲವರು ನಿಮ್ಮ ಹೆಸರು ಹೇಳಿಕೊಂಡು ಇತರ ಸ್ವಾತಂತ್ರ್ಯ ಹೋರಾಟಗಾರರ ನಿಷ್ಠೆಯನ್ನೇ ಪ್ರಶ್ನಿಸುವುದನ್ನು, ದೇಶದ್ರೋಹಿಗಳೆಂದು ಕೆಸರೆರಚುವುದನ್ನು ಕಂಡು, ಮನಸ್ಸಿಗೆ ನೋವಾದಾಗ ಬರುವುದು ನಿಮ್ಮ ಬಳಿಗೇ.

ಹೇ ರಾಮ್!

'ಬೆತ್ತಲೆ ಜಗತ್ತು' ಅಂಕಣದಲ್ಲಿ ಇನ್ನೂ ಮುಸುಕಿನೊಳಗಿದ್ದ ಕೆಲವು ಸತ್ಯ ಸಂಗತಿಗಳನ್ನು ಬೆತ್ತಲಾಗಿಸುತ್ತಿರುವ ಯುವ ಉದಯೋನ್ಮುಖ ಬರಹಗಾರರಾದ ಪ್ರತಾಪ್ ಸಿಂಹ ಅವರ ಲೇಖನಗಳನ್ನು ಮೆಚ್ಚಲೇಬೇಕು: ಗಾಂಧೀಜಿಯನ್ನು 'ಇನ್ನಾದರೂ ಮಾತಾಡಿ' ಎಂದು ಪಟ್ಟುಹಿಡಿದಿರುವ ಪರಿ ಸರಿ ಮತ್ತು ಸ್ವಾತಂತ್ರ್ಯ ಹೋರಾಟದಲ್ಲಿ ನಡೆದ ಕೆಲವು ಚಮಚಾಗಿರಿಗಳನ್ನು ಪರಿಣಾಮಕಾರಿಯಾಗಿ ಹೊರಗೆಡವಿದ್ದಾರೆ.

ಸುಚೇತನಾ ಅ.ರಾ.
ಅಚ್ಚನಹಳ್ಳಿ

ಡಾಲಿ!

ಅದು ಅಕ್ಕರೆಯಿಂದ ಇಟ್ಟ ಅಡ್ಡ ಹೆಸರು. ಗೆಳತಿಯರು ಮತ್ತು ಅಣ್ಣಂದಿರು ಚಂದಾಳನ್ನು ಕರೆಯುತ್ತಿದ್ದುದೇ ಡಾಲಿ ಎಂದು. ಚಂದಾ 1968ರಲ್ಲಿ ಒರಿಸ್ಸಾದ ನುವಾಮುಂಡಿಯಲ್ಲಿ ಜನಿಸಿದಳು. ಅಪ್ಪ ಅಲ್ಲಿನ ಟಾಟಾ ಸ್ಟೀಲ್ ಕಂಪನಿಯಲ್ಲಿ ಉದ್ಯೋಗಿಯಾಗಿದ್ದರು. ಚಂದಾ ಅಲ್ಲಿಯೇ ತನ್ನ ಶಾಲಾ ವ್ಯಾಸಂಗವನ್ನು ಮುಗಿಸಿದಳು. ನಂತರ ಜಿಮ್‌ಷೆಡ್‌ಪುರದ ಶಾಮಪ್ರಸಾದ್ ಕಾಲೇಜು ಸೇರಿದಳು. ಆದರೆ ಕಾಲೇಜು ಶಿಕ್ಷಣ ಪೂರೈಸುವ ಮೊದಲೇ ನುವಾಮುಂಡಿಯಲ್ಲೇ ಇದ್ದ ಟಾಟಾ ಕಂಪನಿಯ ಮುಖ್ಯ ಆಸ್ಪತ್ರೆಯಲ್ಲಿ ನರ್ಸ್ ಕೆಲಸ ದೊರೆಯಿತು. ವ್ಯಾಸಂಗಕ್ಕೆ ತೆರೆಬಿತ್ತು.

ಇತ್ತ ಸ್ನೇಹಿತರೆಲ್ಲರಿಗೂ ಪ್ರೀತಿಯ 'ಜಾನಿ'ಯಾಗಿದ್ದ ಪಿ. ರತ್ನಾ ರಾವ್ ಬ್ಯಾಸ್ಕೆಟ್‌ಬಾಲ್ ಆಟಗಾರ. ಸ್ಪೋರ್ಟ್ಸ್ ಕೋಟಾದಡಿ ಉದ್ಯೋಗ ಪಡೆದು ನುವಾಮುಂಡಿಯ ಟಾಟಾ ಸ್ಟೀಲ್ ಕಂಪನಿ ಸೇರಿದ್ದ. ಆತ ಆಂಧ್ರಪ್ರದೇಶದವನು. ಉದ್ಯೋಗ ಅರಸಿಕೊಂಡು ಕುಟುಂಬವೇ ಅಲ್ಲಿಗೆ ಬಂದಿತ್ತು. ಈ ನಡುವೆ ಆರೋಗ್ಯಾಧಿಕಾರಿಯಾಗಿ ಬಡ್ತಿ ಪಡೆದ ಜಾನಿ, ಟಾಟಾ ಕಂಪನಿಯ ಮುಖ್ಯ ಆಸ್ಪತ್ರೆಗೆ ವರ್ಗವಾಗಿ ಬಂದ. ಅಲ್ಲಿ ಚಂದಾಳ ಭೇಟಿಯಾಯಿತು. ಆ ಮಿಲನ ಪ್ರೇಮಾಂಕುರಕ್ಕೆ ಕಾರಣವಾಯಿತು. ವಿವಾಹವಾಗುವ ನಿರ್ಧಾರಕ್ಕೆ ಬಂದರು. ಇಬ್ಬರ ಮನೆಯವರಿಗೂ ಇಷ್ಟವಿಲ್ಲದಿದ್ದರೂ ಮದುವೆಗೆ ಅಡ್ಡಿಪಡಿಸಲಿಲ್ಲ. 1996ರಲ್ಲಿ ವಿವಾಹವೂ ಆಯಿತು. ಕ್ರಮೇಣ ತೆಲುಗು ಮತ್ತು ಬೆಂಗಾಲಿ ಕುಟುಂಬಗಳು ಹತ್ತಿರವಾದವು. ಜಿಮ್‌ಷೆಡ್‌ಪುರದ ಮನೆಯಲ್ಲೇ ಜಾನಿ ಸಂಸಾರ ಆರಂಭಿಸಿದ. 1999ರಲ್ಲಿ ಮೋಹಿತ್ ರಾಜ್ ಜನಿಸಿದ. ಆನಂತರವಂತೂ ಎರಡೂ ಕುಟುಂಬಗಳು ಮತ್ತಷ್ಟು ಹತ್ತಿರವಾದವು. ಬೆಸುಗೆ ಗಟ್ಟಿಯಾಯಿತು. ಆದರೆ ಅದೇ ವರ್ಷ ಜಾನಿಯ ಅಮ್ಮ ತೀರಿಕೊಂಡರು. ಕುಟುಂಬದ ಹೊರೆ ಹೆಚ್ಚಾಯಿತು. ಜತೆಗೆ ಪುಟ್ಟ ಮಗನ ಆರೈಕೆಯ ಜವಾಬ್ದಾರಿ. ಕೆಲಸಕ್ಕೆ ರಾಜೀನಾಮೆ ನೀಡಿದ ಚಂದಾ, ಕುಟುಂಬ ನಿರ್ವಹಣೆಗೆ ನಿಂತಳು.

ಇನ್ನು ಬಡ ಕುಟುಂಬದಿಂದ ಬಂದಿದ್ದ ಜಾನಿ ಒಬ್ಬ ಮಹತ್ವಾಕಾಂಕ್ಷಿ. ಕಷ್ಟಪಟ್ಟು ದುಡಿಯುತ್ತಿದ್ದ. ಕಾರ್ಯಶ್ರದ್ಧೆಯೇ ಆತನ ಬಲವಾಗಿತ್ತು. ಹಾಗಾಗಿಯೇ ಯಶಸ್ಸು ಬೆನ್ನಟ್ಟಿತ್ತು. ಟಾಟಾ ಸ್ಟೀಲ್ ಕಂಪನಿಯ ಕ್ರೀಡಾ ಇಲಾಖೆಯ ಮ್ಯಾನೇಜರ್ ಸ್ಥಾನಕ್ಕೇರಿದ. ವೃತ್ತಿಯಲ್ಲಿ ಯಶಸ್ಸೇನೋ ದೊರೆಯಿತು. ಆದರೆ ವೈವಾಹಿಕಜೀವನ ಕವಲು ದಾರಿಯತ್ತ ಸಾಗ ತೊಡಗಿತು. ಏಕೆಂದರೆ ಕೆಲಸದ ಒತ್ತಡದಿಂದಾಗಿ ಕುಟುಂಬದ ಜತೆ ಕಾಲ ಕಳೆಯಲು ಜಾನಿಗೆ ಸಮಯವೇ ಸಿಗುತ್ತಿರಲಿಲ್ಲ. ಮೀಟಿಂಗ್ಸ್, ಫಂಕ್ಷನ್ಸ್ ಅಂತಾ ನಡುರಾತ್ರಿವರೆಗೂ ಮನೆಗೇ ಬರುತ್ತಿರಲಿಲ್ಲ. ಗಂಡನ ಮೊಬೈಲ್‌ಗೆ ಫೋನ್ ಮಾಡಿ ಮಾಡಿ ಚಂದಾ ಸೋತು ಸುಣ್ಣಾದಳು. ದಿನವಿಡೀ ಮನೆಯಲ್ಲೇ ಇದ್ದು, ಗಂಡನಿಗಾಗಿ ದಾರಿ ಕಾಯ್ದು ಬೇಸತ್ತಳು. ಒಂಟಿತನ ಕಾಡತೊಡಗಿತು. 'ಗಂಡನಿಗೆ, ತನಗಿಂತಲೂ ಕೆಲಸವೇ ಮುಖ್ಯ' ಎಂಬ ಭಾವನೆ ಆಕೆಯಲ್ಲುಂಟಾಯಿತು.

ಆಗ ಶಿವನಾರಾಯಣ ಯಾದವ್‌ನ ಪರಿಚಯವಾಯಿತು. ಪಕ್ಕದ ಮನೆಯಲ್ಲೇ ವಾಸವಾಗಿದ್ದ. ಆತನ ಅಕ್ಕರೆಯ ಮಾತುಗಳಿಗೆ ಮೈಮರೆತಳು. ಅದು ದೈಹಿಕ ಸಂಪರ್ಕಕ್ಕೆ ದಾರಿಮಾಡಿಕೊಟ್ಟಿತು. ಒಂದು ದಿನವಂತೂ ಮನೆಯ ಮೇಲ್ಛಾವಣಿ ಮೇಲೆ ಚಂದಾ ಮತ್ತು ಯಾದವ್ ಗಂಡ ಜಾನಿ ಕೈಗೇ ಸಿಕ್ಕಿಬಿದ್ದರು. ಮನೆಯಲ್ಲಿ ರಾದ್ಧಾಂತವೇ ನಡೆದು ಹೋಯಿತು. ಚಂದಾಳಿಗೆ ಚೆನ್ನಾಗಿ ಥಳಿಸಿದ್ದೂ ಆಯಿತು. ಅಪಾಯವನ್ನರಿತ ಅಣ್ಣಂದಿರಾದ ದೇಬಾಸಿಶ್ ಮತ್ತು ಸುಬ್ರತಾ ಮುಖರ್ಜಿ ಧಾವಿಸಿ ಬಂದರು. ಸಂಸಾರವನ್ನು ಸರಿದಾರಿಗೆ ತರಲು ಯತ್ನಿಸಿದರು. ಹಲವಾರು ತಿಂಗಳ ಪ್ರಯತ್ನದ ನಂತರ ಚಂದಾ ಮತ್ತು ಜಾನಿ ಮೊದಲಿನಂತಾದರು. ನಗುವಿನ ಕೋಲ್ಮಿಂಚು ಮತ್ತೆ ಕಾಣಿಸಿತು. ಜಾನಿ ಕೂಡ ಸರಿಯಾದ

ಸಮಯಕ್ಕೆ ಮನೆಗೆ ಬರಲಾರಂಭಿಸಿದ. ಅವಳಿ ಹೆಣ್ಣುಮಕ್ಕಳು ಹುಟ್ಟಿದ ಮೇಲಂತೂ ಚಂದಾಳ ಅಣ್ಣಂದಿರು ನಿಟ್ಟುಸಿರುಬಿಟ್ಟರು. ಅಪ್ಪ ರಾಮಚಂದ್ರ ರಾವ್ ಕೂಡ ತನ್ನ ಮಗ ಮತ್ತು ಸೊಸೆ ಮೊದಲಿನಂತಾದುದನ್ನು ಕಂಡು ಹಿಗ್ಗಿದರು. ಆದರೆ ವಿವಾಹೇತರ ಸಂಬಂಧವನ್ನು ಕಡಿದುಕೊಂಡ ಚಂದಾಳ ಬಗ್ಗೆ ಶಿವನಾರಾಯಣ ಯಾದವ್ ಕುಪಿತಗೊಂಡಿದ್ದ. ಫೋನ್ ಮಾಡಿ ಪೀಡಿಸಲಾರಂಭಿಸಿದ. ಗಂಡನಿಗೆ ಚಂದಾ ವಿಷಯ ತಿಳಿಸಿದಳು. ಇಬ್ಬರೂ ಠಾಣೆಗೆ ತೆರಳಿ ದೂರು ನೀಡಿದರು. ಯಾದವ್ ಅರೆಸ್ಟ್ ಆದ. ಒಂದು ರಾತ್ರಿ ಪೊಲೀಸರ ಆತಿಥ್ಯವನ್ನೂ ಸ್ವೀಕರಿಸಿದ. ಆದರೆ ಪೆಟ್ಟು ತಿಂದ ಮೇಲೂ ಬುದ್ಧಿ ಕಲಿಯಲಿಲ್ಲ. 'ತಕ್ಕ ಪಾಠ ಕಲಿಸುತ್ತೇನೆ' ಎಂದು ಚಂದಾಳಿಗೆ ಬೆದರಿಕೆ ಹಾಕಿದ. ಈ ನಡುವೆ ಯಾದವ್‌ನ ವಿವಾಹವೂ ಆಯಿತು. ಆದರೂ ಆತನ ಕೋಪ ತಣ್ಣಗಾಗಲಿಲ್ಲ.

ಮೊನ್ನೆ, 2004, ಜೂನ್ 19ರಂದು ಜಾನಿ ಎಂದಿನಂತೆ ಆಫೀಸಿಗೆ ಹೊರಟು ನಿಂತಿದ್ದ. ಚಂದಾ ಹೊಸ್ತಿಲಿಗೆ ಬಂದು ಬೀಳ್ಕೊಟ್ಟಳು. ಇನ್ನೇನು ಜಾನಿ ತನ್ನ ಮಾರುತಿ ಎಸ್ಟೀಮ್ ಕಾರನ್ನು ಸ್ಟಾರ್ಟ್ ಮಾಡಬೇಕು. ಅಷ್ಟರಲ್ಲಿ ಇಬ್ಬರು ಎದುರಾದರು. ಒಬ್ಬ ಕೈಯಲ್ಲಿ ಚೀಟಿ ಹಿಡಿದುಕೊಂಡಿದ್ದ. ಹತ್ತಿರ ಬಂದವನೇ ಅಡ್ರೆಸ್ ಕೇಳಿದ. ಚೀಟಿಯನ್ನು ಕೈಗೆತ್ತಿಕೊಂಡು ನೋಡುತ್ತಿರುವಾಗಲೇ ರಿವಾಲ್ವಾರ್ ತೆಗೆದ ಮತ್ತೊಬ್ಬ ವ್ಯಕ್ತಿ, ಜಾನಿಯ ಬಲ ಹಣೆಗೆ ಶೂಟ್ ಮಾಡಿದ. ಹೊಸ್ತಿಲಲ್ಲೇ ನಿಂತಿದ್ದ ಚಂದಾ, ಚೀರಿಕೊಂಡು ಓಡಿ ಬಂದಳು. ಹಂತಕರು ಬೈಕ್ ಏರಿ ಪರಾರಿಯಾದರು. ರಕ್ತದ ಮಡುವಿನಲ್ಲಿದ್ದ ಜಾನಿಯನ್ನು ಆಸ್ಪತ್ರೆಗೆ ಕೊಂಡೊಯ್ದಳು. ಆದರೆ ಗಂಡನ ಜೀವ ಉಳಿಯಲಿಲ್ಲ.

ಇತ್ತ, ಯಾದವ್ ಜತೆ ಸೇರಿ ಚಂದಾಳೇ ತನ್ನ ಗಂಡನನ್ನು ಕೊಲ್ಲಿಸಿದ್ದಾಳೆಂದು ಜೆಮ್‌ಷೆಡ್‌ಪುರದ ಎಸ್ಪಿ ಅರುಣ್ ಕುಮಾರ್ ಒರನ್ ಷರಾ ಬರೆದಿದ್ದಾರೆ. ಯಾವುದೇ ಸಾಕ್ಷ್ಯಾಧಾರವಿಲ್ಲದಿದ್ದರೂ ಆಕೆಯ ಚಾರಿತ್ರ್ಯದ ಮೇಲೆ ಬೆರಳು ತೋರುತ್ತಿರುವ ಪೊಲೀಸರು, ತಮ್ಮ ಊಹೆಯೇ ಸಾರ್ವಕಾಲಿಕ ಸತ್ಯ ಎಂಬಂತೆ ವರ್ತಿಸುತ್ತಿದ್ದಾರೆ. ನೆರೆಹೊರೆಯವರೂ

ಕೂಡ ಚಂದಾಳೇ ಕೊಲೆಗಾರಿಣಿ ಎಂಬ ನಿರ್ಧಾರಕ್ಕೆ ಬಂದಿದ್ದಾರೆ. ಅಣ್ಣಂದಿರೂ ಆಕೆಯನ್ನು ಮರೆತಿದ್ದಾರೆ. ಚಂದಾ ಜೆಮ್‌ಷೆಡ್‌ಪುರದ ಜೈಲು ಸೇರಿದ್ದಾಳೆ. ಆಕೆಯ ಪರವಾಗಿ ಯಾರೂ ಜಾಮೀನಿಗೆ ಅರ್ಜಿ ಸಲ್ಲಿಸಿಲ್ಲ. ಸಂತೈಸಲು ಜೈಲಿಗೂ ಬರುತ್ತಿಲ್ಲ. ಮಾನಸಿಕವಾಗಿ ಈಗಾಗಲೇ ಕುಣಿಕೆಗೆ ತಲೆಕೊಟ್ಟಿದ್ದಾಳೆ. ಇತರ 11 ಮಹಿಳಾ ಕೈದಿಗಳ ಜತೆ ನಾಲ್ಕು ಗೋಡೆಗಳ ಮಧ್ಯೆ ಕಾಲ ತಳ್ಳುತ್ತಿದ್ದಾಳೆ. ಅವರು ಮಾತ್ರ ಆಕೆಯ ಮಾತನ್ನು ನಂಬುತ್ತಿದ್ದಾರೆ. ಆದರೆ 'ಗಂಡನನ್ನು ಕೊಲ್ಲಿಸಿದ್ದು ನಾನಲ್ಲ' ಎಂದು ಚಂದಾ ಗೋಗರೆಯುತ್ತಿದ್ದರೂ ಸಮಾಜ ಮಾತ್ರ ಅದನ್ನು ಒಪ್ಪಿಕೊಳ್ಳಲು ಸಿದ್ಧವಿಲ್ಲ. ಏಕೆಂದರೆ ನಮ್ಮ ಮನಸ್ಥಿತಿಯೇ ಅಂಥದ್ದು! ಒಂದು ಹೆಣ್ಣಿನ ಚಾರಿತ್ರ್ಯದ ಮೇಲೆ ಬೆರಳು ತೋರಿಸಿ ಸ್ವಂತ ಹುಳುಕನ್ನು ಮುಚ್ಚಿಕೊಳ್ಳುವುದರಲ್ಲಿ ನಾವು ನಿಸ್ಸೀಮರು. ಆಕೆಯ ಕ್ಯಾರೆಕ್ಟರ್ ಸರಿಯಿಲ್ಲ ಅಂತಾ ಸರ್ಟಿಫಿಕೇಟ್ ನೀಡುವುದಕ್ಕೆ ಸದಾ ಮುಂದಿರುತ್ತೇವೆ. ಏಕೆಂದರೆ ಮಹಿಳೆಯರು 'Soft targets'! (ಗೂಬೆ ಕೂರಿಸುವುದು ಬಹಳ ಸುಲಭ). ಅದೂ ಅಲ್ಲದೆ ಒಮ್ಮೆ ಕಾಲು ಜಾರಿದವಳ ಬಗ್ಗೆ ಕಥೆ ಕಟ್ಟುವುದಂತೂ ಇನ್ನೂ ಸುಲಭ. ಇದೇ ಕೆಲಸವನ್ನು ಜೆಮ್‌ಷೆಡ್ ಪುರದ ಪೊಲೀಸರೂ ಮಾಡುತ್ತಿದ್ದಾರೆ.

ಪೊಲೀಸರ ಕೈಲಿ ಚಚ್ಚಿಸಿ, ಅವಮಾನಿಸಿದ ಸೇಡಿಗಾಗಿ ಯಾದವ್ ಬಾಡಿಗೆ ಹಂತಕರನ್ನು ಬಿಟ್ಟು ಜಾನಿಯನ್ನು ಕೊಲ್ಲಿಸಿದ್ದಾನೆಂಬುದು ನಗ್ನಸತ್ಯವಾಗಿದ್ದರೂ, ಚಂದಾಳನ್ನು ದೂರುವುದರಲ್ಲೇ ಪೊಲೀಸರು ಮತ್ತು ಸಮಾಜ ಸುಖ ಕಾಣುತ್ತಿದೆ. ಆದರೆ ಚಂದಾ ಅಥವಾ ಚಂದಾಳಂತೆ ಕೈದಿಯಾಗಿ ನಿಂತಿರುವ ಹೆಣ್ಣಿನ ಬಗ್ಗೆ ಸಂಶಯದ ಪೊರೆ ಸರಿಸಿ, ಪೂರ್ವಗ್ರಹವನ್ನು ಬದಿಗಿಟ್ಟು ನಾವೆಂದಾದರೂ ಯೋಚಿಸಿದ್ದೇವೆಯೇ? ಸಾಕ್ಷ್ಯ ಹುಡುಕುವ ಬದಲು, ಜಾನಿಯನ್ನು ವಿವಾಹವಾಗುವುದಕ್ಕಿಂತ ಮೊದಲು ತಾನು ಕೆಲಸ ಮಾಡುತ್ತಿದ್ದ ಆಸ್ಪತ್ರೆಯಲ್ಲೇ ಇದ್ದ ವೈದ್ಯರೊಬ್ಬರ ಜತೆ ಚಂದಾ ಸರಸವಾಡುತ್ತಿದ್ದಳು ಎಂದು ಪೊಲೀಸರು ಗೂಬೆ ಕೂರಿಸುತ್ತಿದ್ದಾರೆ.

ಚಂದಾಳನ್ನು ಜಾರಿಣಿ ಎಂದು ದೂರುವುದೇನೋ ಸರಿ. ಆದರೆ ಒಂದು ವೇಳೆ ಸೆಕ್ಸ್ ಅನ್ನೋದೆ ಜೀವನವಾಗಿದ್ದರೆ ಬಾಂಬೆಯ ಕಾಮಾಟಿಪುರ, ಪೂನಾದ ಬುಧವಾರಪೇಟೆ ಮತ್ತು ದೇಶಾದ್ಯಂತ ಇರುವ ಎಲ್ಲ ರೆಡ್‌ಲೈಟ್ ಏರಿಯಾಗಳಲ್ಲೂ ಸುಖಿ ಸಂಸಾರಗಳಿರಬೇಕಿತ್ತು, ಅಲ್ಲವೆ? ಚಂದಾಳನ್ನು ದೂರುವ ಮೊದಲು ಕಣ್ಣೆದುರಿಗೇ ಇರುವ ಇಂತಹ ವಾಸ್ತವವನ್ನು ಸಮಾಜ ಅರ್ಥಮಾಡಿಕೊಳ್ಳಬೇಕು. ಏಕೆಂದರೆ ಸೆಕ್ಸೊಂದೇ ಜೀವನವಲ್ಲ. ಹಾಗಾಗಿಯೇ ಹಾಸಿಗೆ ಮೇಲೆ ಅಸಮರ್ಥ ಗಂಡನಿದ್ದರೂ ಎಷ್ಟೋ ಭಾರತೀಯ ಮಹಿಳೆಯರು ಗೌರವದಿಂದ ಜೀವನ ನಡೆಸುತ್ತಿದ್ದಾರೆ. ಏಕೆಂದರೆ ಗಂಡನ ಅನನ್ಯ ಪ್ರೀತಿಯಲ್ಲೇ ಜೀವನದ ಸುಖ ಕಾಣುತ್ತಾರೆ. ಒಂದು ವೇಳೆ, ಆ ಪ್ರೀತಿಗೂ ಕೊರತೆಯುಂಟಾದಾಗ ಏನಾಗುತ್ತದೆ? ಚಂದಾಳಂತೆ ಬೇರೆಡೆ ಕಂಡುಕೊಳ್ಳಲು ಯತ್ನಿಸುತ್ತಾರೆ, ಅರಸುತ್ತಾರೆ. ದಿನವಿಡೀ ಕೆಲಸ ಕೆಲಸ ಎನ್ನುತ್ತಾ ಜಾನಿ ತನ್ನ ಹೆಂಡತಿ ಮತ್ತು ಮಕ್ಕಳನ್ನು ಮರೆತ ಕಾರಣದಿಂದಲೇ ಚಂದಾ, ಯಾದವನ ಬಣ್ಣದ ಮಾತಿಗೆ ಮರುಳಾಗಿದ್ದು. ಆಮೇಲೆ ಮೈಮರೆತಿದ್ದು.

ಚಂದಾ ಮಾಡಿದ್ದೆಲ್ಲಾ ಸರಿ ಎಂದು ಹೇಳುತ್ತಿಲ್ಲ. ಆದರೆ ಬೇಸರ ಕಳೆದುಕೊಳ್ಳಲು ಮನೆಯಲ್ಲಿ ಟೀವಿ ಇದೆ, ಸಿ.ಡಿ.ಗಳಿವೆ, ದುಡ್ಡೂ ಇದೆ, ಸಕಲ ಸವಲತ್ತುಗಳಿವೆ ಎಂಬಂತೆ ವರ್ತಿಸುವ ಗಂಡಂದಿರ ಧೋರಣೆ ಎಷ್ಟರಮಟ್ಟಿಗೆ ಸರಿ? ಏಕೆಂದರೆ ಈ ಭೌತಿಕ ಸುಖಗಳೇ ಜೀವನವಲ್ಲ. ಅದನ್ನು ಮೀರಿದ ಪ್ರೀತಿಯಿದೆ. ಒಂದು ಹೊತ್ತು ಊಟ ಕಡಿಮೆಯಾದರೂ, ಕೇಳಿದ್ದೆಲ್ಲವನ್ನೂ ಕೊಡಿಸದಿದ್ದರೂ, ಬಯಸಿದ್ದೆಲ್ಲ ಸಿಗದಿದ್ದರೂ, ಕಾರು-ಬಂಗಲೆಯಿಲ್ಲದಿದ್ದರೂ ಗಂಡನ ಪ್ರೀತಿಯಲ್ಲೇ ಸರ್ವಸ್ವ ಕಾಣುವವರು ನಮ್ಮ ಭಾರತೀಯ ಮಹಿಳೆಯರು. ಆದರೆ ಅಂತಹ ಬತ್ತದ ಪ್ರೀತಿಗೂ ಕೊರತೆಯುಂಟಾದರೆ ಅದು ಯಾರ ತಪ್ಪು?

ಖಂಡಿತಾ ಚಂದಾ ಹೊಂದಿದ್ದಂತಹ ಸಂಬಂಧಗಳು ಸಮಾಜದ ಸ್ವಾಸ್ಥ್ಯವನ್ನು ಕೆಡಿಸುತ್ತವೆ. ಆದರೆ ಹೆಣ್ಣನ್ನು ಮಾತ್ರ ಸಂಶಯದಿಂದ ನೋಡುವ ಸಮಾಜ ಕೂಡ, ಕಂಠಪೂರ್ತಿ ಕುಡಿದು ಬರುವ, ಹೆಂಡತಿ ಮೇಲಷ್ಟೇ ಪೌರುಷ ತೋರುವ, ಹಾಸಿಗೆ ಮೇಲೆ ಗೊರಕೆ ಹೊಡೆಯುವ ಡೊಳ್ಳೊಟ್ಟೆ ಗಂಡಂದಿರ ಜತೆ, ಜೀವನ ನಡೆಸುತ್ತಿರುವ ಮಹಿಳೆಯರ ಮಾನಸಿಕ ಯಾತನೆಯನ್ನೂ ಅರ್ಥ ಮಾಡಿಕೊಳ್ಳಬೇಕು. ಏಕೆಂದರೆ ಚಾರಿತ್ರ್ಯ ಅನ್ನೋದು, ಕೇವಲ ಹೆಣ್ಣಿನ ಮೇಲೆ ಆರೋಪ ಹೊರಿಸಲು ಇರುವ ವಸ್ತುವಲ್ಲ.

ಅದು ಸಮಾಜದ ಆಸ್ತಿ.



ಚಂದಾ ತಪ್ಪು ಮಾಡಿದ್ದಾಳೆ ಹಾಗೂ ತನ್ನ ಗಂಡನ ಕೊಲೆಯಲ್ಲಿ ಆಕೆಯ ಕೈವಾಡ ಇದೆಯೆಂದು ಶಿಕ್ಷೆ ನೀಡಲಾಗಿದೆ. ಕೆಲವೊಮ್ಮೆ ಏನೂ ತಪ್ಪು ಮಾಡದ ಅಮಾಯಕ ಹೆಣ್ಣು ಹಲವಾರು ಅಮಾನವೀಯ ಮತ್ತು ಅವಮಾನಕರ ಕ್ಷಣಗಳನ್ನು ಎದುರಿಸಬೇಕಾಗುತ್ತದೆ.

ಎಂ.ಎ. ರಾಧಾಕೃಷ್ಣ
ಹಿರಿಯೂರು



3

# ಗೊಣಗುವವರಿಗೊಂದು ಪಾಠ ದೇಶ ಕಟ್ಟುವ ಈ ಟಾಟಾ!

ಆಗ ಇಡೀ ದೇಶಕ್ಕೇ ಸ್ವಾತಂತ್ರ್ಯದ ಜ್ವರ ಬಂದಿತ್ತು!

ಆದರೆ ಜೆ.ಎನ್. ಟಾಟಾ ಮಾತ್ರ ಬ್ರಿಟಿಷರ ವಿರುದ್ಧ ಸಿಡಿದೇಳಲಿಲ್ಲ, ಘೋಷಣೆ ಕೂಗಲಿಲ್ಲ, ಪ್ರತಿಭಟನೆಗಿಳಿಯಲಿಲ್ಲ, ಸತ್ಯಾಗ್ರಹ ನಡೆಸಲಿಲ್ಲ, ಸ್ವದೇಶಿ ಉತ್ಪನ್ನಗಳನ್ನೇ ಕೊಳ್ಳಿ ಎಂದು ಕರೆ ನೀಡಲಿಲ್ಲ, ಜನಾಂದೋಲನವನ್ನೂ ಮಾಡಲಿಲ್ಲ. ಆದರೂ ಟಾಟಾ ವಿರುದ್ಧ ಬೆರಳೆತ್ತಲು ಸಾಧ್ಯವಿಲ್ಲ.

ಹೋಟೆಲ್ ಮೆಜೆಸ್ಟಿಕ್!

ಒಮ್ಮೆ ಇಬ್ಬರು ಬ್ರಿಟಿಷರ ಜತೆ ಜೆ.ಎನ್. ಟಾಟಾ ಈ ಪ್ರತಿಷ್ಠಿತ ಹೋಟೆಲ್‌ಗೆ ಹೋಗಿದ್ದರು. ಬಿಳಿ ತೊಗಲಿನ ಬ್ರಿಟಿಷರಿಗೇನೋ ನಗುಮುಖದ ಸ್ವಾಗತ ದೊರೆಯಿತು. ಆದರೆ ಭಾರತೀಯನೆಂಬ ಏಕೈಕ ಕಾರಣಕ್ಕೆ ಟಾಟಾ ಅವರನ್ನು ಹೊರದಬ್ಬಲಾಯಿತು. ಅಂದು ಅವಮಾನಿತರಾಗಿದ್ದರು, ಸ್ವಾಭಿಮಾನಕ್ಕೇ ಪೆಟ್ಟು ಬಿದ್ದಿತ್ತು. ಮನನೊಂದಿತ್ತು. ಹಾಗೆಂದು ಸುಮ್ಮನೆ ಕುಳಿತುಕೊಳ್ಳಲಿಲ್ಲ. ವಿಶ್ವದರ್ಜೆಯ ಹೋಟೆಲ್‌ಗಳನ್ನು ನಿರ್ಮಿಸುವ, ನಡೆಸುವ ತಾಕತ್ತು ಭಾರತೀಯರಿಗೂ ಇದೆ ಎಂಬುದನ್ನು ಸಾಬೀತುಪಡಿಸುವ ಸಂಕಲ್ಪ ಮಾಡಿದರು. ಆಗ ಜನ್ಮತಳೆದಿದ್ದೇ 'ಹೋಟೆಲ್ ತಾಜ್‌ಮಹಲ್'! 1902ರಲ್ಲಿ 'ತಾಜ್ ಗ್ರೂಪ್ ಆಫ್ ಹೋಟೆಲ್ಸ್' ಪ್ರಾರಂಭವಾಯಿತು. ಇಂದು ದೇಶದ ಮೂಲೆ ಮೂಲೆಗಳಲ್ಲಿ ತಾಜ್ ಹೋಟೆಲ್‌ಗಳನ್ನು ಕಾಣಬಹುದು.

1868ರಲ್ಲಿ ಖಾಸಗಿ ವ್ಯಾಪಾರ ಸಂಸ್ಥೆಯೊಂದನ್ನು ಪ್ರಾರಂಭಿಸಿದಾಗ ಜೆ.ಎನ್. ಟಾಟಾಗೆ 29 ವರ್ಷ. ಕೈಯಲ್ಲಿದ್ದುದು 21 ಸಾವಿರ ರೂ. ಆದರೆ ಪರಿಶ್ರಮಕ್ಕೆ, ದೂರದೃಷ್ಟಿಗೆ, ಹಂಬಲಕ್ಕೆ, ಸಾಧಿಸುವ ಛಲಕ್ಕೆ ಎಂದಿಗೂ ಕೊರತೆಯಿರಲಿಲ್ಲ. ಇತ್ತ ಬ್ರಿಟಿಷರು ನಮ್ಮ ಗುಡಿಕೈಗಾರಿಕೆಗಳನ್ನು ವ್ಯವಸ್ಥಿತವಾಗಿ ಹೊಸಕಿ ಹಾಕುತ್ತಿದ್ದರು. ಏಕೆಂದರೆ ಬ್ರಿಟನ್ನಿನಲ್ಲಿ ತಯಾರಾದ ಹತ್ತಿಬಟ್ಟೆಗಳಿಗೆ ಭಾರತದಲ್ಲಿ ಮಾರುಕಟ್ಟೆ ಬೇಕಿತ್ತು. ಇಂತಹ ಘೋರ ಅನ್ಯಾಯದ ಬಗ್ಗೆ ಜೆ.ಎನ್. ಟಾಟಾ ಹೋರಾಟಕ್ಕಿಳಿಯಲಿಲ್ಲ. ಆದರೆ ಯುರೋಪ್ ಪ್ರವಾಸ ಕೈಗೊಂಡರು. ಜವಳಿ ಉದ್ಯಮಕ್ಕೆ ಹೆಸರಾಗಿದ್ದ ಬ್ರಿಟನ್‌ನ ಮ್ಯಾಂಚೆಸ್ಟರ್‌ಗೆ ಭೇಟಿ ನೀಡಿದರು. ಕಾರ್ಖಾನೆಗಳನ್ನು ಜಾಲಾಡಿದರು. ಸ್ವದೇಶಕ್ಕೆ ಮರಳಿದ್ದೇ ತಡ, 1877ರಲ್ಲಿ ಮಹಾರಾಷ್ಟ್ರದ ನಾಗಪುರದಲ್ಲಿ 'ಎಂಪ್ರೆಸ್ ಮಿಲ್ಸ್' ಕಾರ್ಖಾನೆ ಪ್ರಾರಂಭ ಮಾಡಿದರು. ಹೀಗೆ ಆಧುನಿಕ ತಂತ್ರಜ್ಞಾನ ಭಾರತಕ್ಕೆ ಬಂತು. 'ಸ್ವದೇಶಿ ಮಿಲ್'ಗಳೆಂದೇ ಖ್ಯಾತಿ ಪಡೆಯಿತು. ದೇಶದಲ್ಲೇ ಹತ್ತಿ ಬಟ್ಟೆಗಳು ಸಿದ್ಧಗೊಳ್ಳತೊಡಗಿದವು. ವಿದೇಶಿ ಸರಕುಗಳನ್ನು ತಿರಸ್ಕರಿಸಿ ಎಂಬ ಕರೆಯನ್ನು ಟಾಟಾ ನೀಡಿದ ವಿಧಾನ ಅದು. ಆದ್ದರಿಂದಲೇ ಸ್ವದೇಶಿ ಚಳವಳಿಯನ್ನು ಆರಂಭಿಸಿದ ಕೀರ್ತಿ ಜೆ.ಎನ್. ಟಾಟಾಗೆ ಸಲ್ಲಬೇಕೇ ಹೊರತು ಗಾಂಧೀಜಿಗಲ್ಲ!

ಅಷ್ಟಕ್ಕೇ ನಿಲ್ಲಲಿಲ್ಲ...

ಆಳುವ ಸರಕಾರಕ್ಕೇ ಇರದಿದ್ದ ಸಾಮಾಜಿಕ ಕಾಳಜಿ ಟಾಟಾ ಅವರಲ್ಲಿತ್ತು. ಆದ್ದರಿಂದಲೇ 1886ರಷ್ಟು ಹಿಂದೆಯೇ 'ನಿವೃತ್ತಿ ವೇತನ ನಿಧಿ'ಯನ್ನು ಆರಂಭಿಸಿದರು. 1895ರಲ್ಲಿ ಅಪಘಾತ ಪರಿಹಾರ ಯೋಜನೆ ಆರಂಭವಾಯಿತು. ಇಂತಹ ಪ್ರಯತ್ನ ಭಾರತದಲ್ಲೇ ಮೊದಲನೆಯದಾಗಿತ್ತು. ಈ ನಡುವೆ 1893ರಲ್ಲಿ 'ಎಂಪ್ರೆಸ್ ಆಫ್ ಇಂಡಿಯಾ' ಹಡಗು ಜಪಾನ್‌ನಿಂದ ಅಮೆರಿಕದತ್ತ ಪಯಣ ಆರಂಭಿಸಿತ್ತು. ಯಾವುದೇ ಕ್ಷೇತ್ರವಿರಬಹುದು, ಸ್ವದೇಶದಲ್ಲೇ ಉತ್ಪಾದನೆ ನಡೆಯಬೇಕು ಎಂಬ ಆಶಯ ಹೊಂದಿದ್ದ ಜೆ.ಎನ್. ಟಾಟಾ, ಕಬ್ಬಿಣ ಎಂದ ಕೂಡಲೇ ಎಲ್ಲರೂ ಮೂಗು ಮುರಿಯುತ್ತಿದ್ದ, ಸೋಟೆ ತಿರುವುತ್ತಿದ್ದ ಕಾಲದಲ್ಲಿ ಉಕ್ಕು ಕಾರ್ಖಾನೆ ಸ್ಥಾಪಿಸುವ ಆಸೆಯಿಂದ ತಾಂತ್ರಿಕ ಸಹಕಾರ ಯಾಚಿಸುವ ಸಲುವಾಗಿ ಅಮೆರಿಕಕ್ಕೆ ಹೊರಟು ನಿಂತಿದ್ದರು. ಇತ್ತ ವಿಶ್ವಧರ್ಮ ಸಮ್ಮೇಳನದಲ್ಲಿ ಪಾಲ್ಗೊಳ್ಳುವ ಸಲುವಾಗಿ ಸ್ವಾಮಿ ವಿವೇಕಾನಂದರು ಅದೇ ಹಡಗೇರಿದ್ದರು.

ಅಂದು ಎಂಪ್ರೆಸ್ ಆಫ್ ಇಂಡಿಯಾ ಹಡಗಿನಲ್ಲಿ ಒಬ್ಬ ಕಟ್ಟಾ ಉದ್ಯಮಿ ಮತ್ತು ಮೇರು ದಾರ್ಶನಿಕರಿಬ್ಬರು ಸಂಧಿಸಿದರು. ಅಮೆರಿಕದ ನೆಲಕ್ಕೆ ಕಾಲಿಡುವ ವೇಳೆಗೆ ಜೆ.ಎನ್. ಟಾಟಾ ವಿವೇಕಾನಂದರ ಸ್ವಾವಲಂಬನೆ ತತ್ವಕ್ಕೆ ಮಾರುಹೋಗಿದ್ದರು. ಅದು ಹೊಸ ಶಕೆಯ ಆರಂಭಕ್ಕೆ ನಾಂದಿಯಾಯಿತು. ವಿವೇಕಾನಂದರ ಆಶಯದಂತೆ ಎಲ್ಲ ವಿಧದ ವೈಜ್ಞಾನಿಕ ಸಂಶೋಧನೆಗೆ ಅವಕಾಶ ಕಲ್ಪಿಸುವಂತಹ ಸಂಶೋಧನಾ ಕೇಂದ್ರವನ್ನು ಸ್ಥಾಪಿಸುವ ನಿರ್ಧಾರ ಕೈಗೊಂಡಿದ್ದರು. 1898, ಡಿಸೆಂಬರ್ 31ರಂದು ಲಾರ್ಡ್ ಕರ್ಝನ್ ಮುಂದೆ ರೂಪುರೇಷೆಯನ್ನಿಟ್ಟರು. ಆದರೆ ಆತ ಅಡ್ಡಗಾಲು ಹಾಕಿದ. ಆದರೂ ಛಲ ಬಿಡದ ಟಾಟಾ ಬ್ರಿಟನ್‌ನ ರಾಯಲ್ ಸೊಸೈಟಿ ಮುಂದೆ ಪ್ರಸ್ತಾವವನ್ನಿಟ್ಟರು. ಮನವಿಯ ಮೇರೆಗೆ ಕೂಡಲೇ ಭಾರತ ಪ್ರವಾಸ ಕೈಗೊಂಡ ನೊಬೆಲ್ ಪ್ರಶಸ್ತಿ ವಿಜೇತ ವಿಲಿಯಂ ರಾಂಸೆ ಬೆಂಗಳೂರಿನ ಮಲ್ಲೇಶ್ವರ ಬಳಿ ಭಾರತೀಯ ವಿಜ್ಞಾನ ಮಂದಿರ(ಐಐಎಸ್‌ಸಿ)ವನ್ನು ನಿರ್ಮಿಸಲು ಸಮ್ಮತಿ ಸೂಚಿಸಿದ.

ದುರದೃಷ್ಟವಶಾತ್ ಆಸೆ ಕೈಗೂಡುವ ಮೊದಲೇ 1904, ಮೇ 19ರಂದು ಜೆ.ಎನ್. ಟಾಟಾ ನಮ್ಮನ್ನಗಲಿದರು. ಆದರೇನಂತೆ ಚುಕ್ಕಾಣಿ ಹಿಡಿದ ಜೆ.ಆರ್.ಡಿ. (ಜಹಾಂಗೀರ್ ರತನ್‌ಜಿ ದಾದಾ ಭಾಯಿ ಟಾಟಾ), ಟಾಟಾ ಪರಂಪರೆಯನ್ನು ಮುಂದುವರಿಸಿದರು. 1907ರಲ್ಲಿ ಬಿಹಾರದ ಜೆಮ್‌ಷೆಡ್‌ಪುರದಲ್ಲಿ ಟಾಟಾ ಉಕ್ಕು ಮತ್ತು ಕಬ್ಬಿಣ ಕಾರ್ಖಾನೆ(ಟಿಸ್ಕೋ) ಸ್ಥಾಪನೆ ಮಾಡುವುದರೊಂದಿಗೆ ಜೆ.ಎನ್. ಟಾಟಾ ಅವರ ಕನಸುಗಳಲ್ಲೊಂದನ್ನು ಸಾಕಾರಗೊಳಿಸಿದರು.

1910ರಲ್ಲಿ ಟಾಟಾ ಜಲವಿದ್ಯುತ್ ಪೂರೈಕೆ ಕಂಪನಿ ಜನ್ಮತಳೆಯುವುದರೊಂದಿಗೆ

ಬಾಂಬೆಗೆ ಸ್ವಚ್ಛ ಹಾಗೂ ಕೈಗೆಟುಕುವ ಬೆಲೆಯಲ್ಲಿ ವಿದ್ಯುತ್ ಪೂರೈಕೆ ಮಾಡಬೇಕೆಂಬ ಕನಸೂ ಈಡೇರಿತು. ಅಷ್ಟೇ ಅಲ್ಲ, 1911ರಲ್ಲಿ ಬೆಂಗಳೂರಿನ ಮಲ್ಲೇಶ್ವರ ಬಳಿ 372 ಎಕರೆ ವಿಸ್ತಾರದಲ್ಲಿ ಭವ್ಯ ಭಾರತೀಯ ವಿಜ್ಞಾನ ಮಂದಿರ ಹೊರಹೊಮ್ಮಿತು. ಅದು ಈ ದೇಶದ ವೈಜ್ಞಾನಿಕ ಶಕೆಯನ್ನೇ ಆರಂಭಿಸಿತು. ಈ ದೇಶ ಕಂಡ ಮಹಾನ್ ವಿಜ್ಞಾನಿಗಳಾದ ಸಿ.ವಿ. ರಾಮನ್, ಹೋಮಿ ಜೆ. ಭಾಭಾ, ವಿಕ್ರಂ ಸಾರಾಭಾಯ್, ಜೆ.ಸಿ. ಘೋಷ್, ಎಂ.ಎಸ್. ಥಾಕರ್, ಎಸ್. ಭಗವಂತವ್, ಸತೀಶ್ ಧವನ್, ಸಿ.ಎನ್.ಆರ್. ರಾವ್ ಮತ್ತು ನಮ್ಮ ರಾಜಾರಾಮಣ್ಣ ಇವರೆಲ್ಲರೂ ಟಾಟಾ ಕನಸಿನ ಕೂಸಾದ ಐಐಎಸ್‌ನ ಜತೆ ಗುರುತಿಸಿಕೊಂಡವರೇ ಆಗಿದ್ದಾರೆ.

ಇತ್ತ 1947ರಲ್ಲಿ ದೇಶಕ್ಕೆ ಸ್ವಾತಂತ್ರ್ಯ ಬಂತು. ನೆಹರೂ ಪ್ರಧಾನಿ ಗದ್ದುಗೆಯ ಕನಸು ಕಾಣುತ್ತಿದ್ದರು. 'ರಾಷ್ಟ್ರಪಿತ' ಗಾಂಧೀಜಿ ಕೋಮು ಸೌಹಾರ್ದತೆಯ ಮಂತ್ರ ಪಠಿಸುತ್ತಿದ್ದರು. ಆದರೆ ಜೆ.ಆರ್.ಡಿ. ಮತ್ತು ಅವರ ಪ್ರಾಣ ಸ್ನೇಹಿತ ಹೋಮಿ ಜೆ. ಭಾಭಾ 'ಅಣು ತಂತ್ರಜ್ಞಾನ' ರೂಪಿಸುವ ಬಗ್ಗೆ ಚಿಂತನೆ ನಡೆಸುತ್ತಿದ್ದರು. ಎಂತಹ ಉದಾತ್ತ ಯೋಚನೆ! ಎಲ್ಲರೂ ಹೊಟ್ಟೆ-ಬಟ್ಟೆ ಬಗ್ಗೆ ಯೋಚನೆ ಮಾಡುತ್ತಿದ್ದರೆ ಟಾಟಾ ಕಂಪನಿ ದೇಶದ 'ಬೇಲಿ' ಬಗ್ಗೆ ಚಿಂತಿಸುತ್ತಿತ್ತು. ಲಂಡನ್‌ನ ಕಿಂಗ್ ಕಾಲೇಜಿನಲ್ಲಿ ಭೌತಶಾಸ್ತ್ರ ಅಧ್ಯಯನ ಮಾಡುತ್ತಿದ್ದ ರಾಜಾರಾಮಣ್ಣನವರನ್ನು ಭೇಟಿ ಮಾಡಿದ ಹೋಮಿ ಭಾಭಾ, ನ್ಯೂಕ್ಲಿಯರ್ ಸೈನ್ಸ್ ಓದುವಂತೆ ಪ್ರೇರಣೆ ನೀಡಿದರು. ಅಷ್ಟೇ ಅಲ್ಲ, ಜೆ.ಎನ್. ಟಾಟಾ ಸ್ಕಾಲರ್‌ಷಿಪ್ ಕೊಡಿಸಿ ರಾಜಾರಾಮಣ್ಣನವರನ್ನು ಅಣುವಿಜ್ಞಾನಿಯಾಗಿಸಿ ಸ್ವದೇಶಕ್ಕೆ ಕರೆತಂದರು. ಅದೇ ರಾಮಣ್ಣ ಈ ದೇಶದ ನಿಜವಾದ ಅಣುಜನಕರಾದರು! (ದಯವಿಟ್ಟು ಅಣ್ವಸ್ತ್ರ ಜನಕ ಅಬ್ದುಲ್ ಕಲಾಂ ಎಂದು ತಪ್ಪಾಗಿ ತಿಳಿದುಕೊಳ್ಳಬೇಡಿ. ಆ ಕೀರ್ತಿ ರಾಜಾರಾಮಣ್ಣನವರಿಗೆ ಸಲ್ಲಬೇಕು. Only strength respects strength ಎಂದು ಹೇಳಿದ್ದೂ ಕೂಡ ರಾಜಾರಾಮಣ್ಣ).

ಕೇವಲ ಅಮೆರಿಕ, ರಷ್ಯಾಗಳಿಗೆ ಸಾಧ್ಯವಿದ್ದ 'ನ್ಯೂಕ್ಲಿಯರ್ ರಿಯಾಕ್ಟರ್' ಅನ್ನು ನಾವೇ ರೂಪಿಸುತ್ತೇವೆ ಎಂದು ಹೋಮಿ ಭಾಭಾ ಮುಂದಾದಾಗ ಸಕಲ ಪ್ರೋತ್ಸಾಹ ನೀಡುವುದನ್ನು ಬಿಟ್ಟು ಪ್ರಧಾನಿ ನೆಹರೂ ವಿರೋಧ ವ್ಯಕ್ತಪಡಿಸಿದರು. ಆದರೂ ಜೆ.ಆರ್.ಡಿ. ಟಾಟಾ ಧೃತಿಗೆಡಲಿಲ್ಲ. ಅಂತಹ ತಂತ್ರಜ್ಞಾನ ರೂಪಿಸಲು ಬೇಕಾಗಿದ್ದ ಸಕಲ ಸವಲತ್ತುಗಳನ್ನು, ಹಣಕಾಸು ಸೌಲಭ್ಯವನ್ನು ಸ್ವತಃ ಪೂರೈಸಿದರು. ಅಂತಹ ಪ್ರಯತ್ನದ ಫಲವಾಗಿ ಮೊದಲ ಅಣು ರಿಯಾಕ್ಟರ್ ರೂಪುಗೊಂಡಿತು. ಅದು ದೇಶದ ಅಣ್ವಸ್ತ್ರ ತಯಾರಿಕೆಗೆ ಭಾಷ್ಯ ಬರೆಯಿತು. ಇಂದು ಭಾರತ ಒಂದು ಅಣ್ವಸ್ತ್ರ ರಾಷ್ಟ್ರವಾಗಿ ಹೊರಹೊಮ್ಮಿದ್ದರೆ, ನಮ್ಮ ದೇಶದ ವಿರುದ್ಧ ದಾಳಿ ಮಾಡಲು ಶತ್ರುಗಳು ಹಿಂದೇಟು ಹಾಕುತ್ತಿದ್ದರೆ ಅದಕ್ಕೆ ಟಾಟಾ ಕಂಪನಿ ಕೂಡ ಕಾರಣ. ಅದಕ್ಕೇ ಹೇಳಿದ್ದು, ಟಾಟಾ ವಿರುದ್ಧ ಬೆರಳೆತ್ತಲು ಈ ದೇಶದ ಪ್ರಧಾನಿಗೂ ಸಾಧ್ಯವಿಲ್ಲ. ಏಕೆಂದರೆ ಅದು ಈ ದೇಶ ಕಟ್ಟುವ ಕಾರ್ಯದಲ್ಲಿ ಕೈಜೋಡಿಸಿದ ಕಂಪನಿ.

ಇಂದು ವಿಜ್ಞಾನ, ತಂತ್ರಜ್ಞಾನ, ಸಂಪರ್ಕ, ವಾಹನ ಉತ್ಪಾದನೆ, ಮಾಹಿತಿ ತಂತ್ರಜ್ಞಾನ ವಲ್ಲದೆ ಸೌಂದರ್ಯವರ್ಧಕ(ಲ್ಯಾಕ್ಮೆ)ದವರೆಗೂ ಎಲ್ಲ ವಿಧದ ಉತ್ಪನ್ನಗಳನ್ನೂ ರೂಪಿಸುತ್ತಿದ್ದು ಸುಮಾರು 80 ವಿವಿಧ ಕಂಪನಿಗಳ 11 ಶತಕೋಟಿ ಡಾಲರ್ ಬೆಲೆಯ ಮಹಾ ಒಕ್ಕೂಟವಾಗಿ ಟಾಟಾ ಗ್ರೂಪ್ ಹೊರಹೊಮ್ಮಿದೆ. 'ವ್ಯಾಪಾರಂ ದ್ರೋಹ ಚಿಂತನಂ' ಎಂಬ ಮಾತನ್ನು ಸುಳ್ಳಾಗಿಸಿ ದೇಶ ಚಿಂತನೆಯನ್ನು ಕೃತಿಯಲ್ಲಿ ತೋರುತ್ತಿದೆ. ಯಾವತ್ತೂ ಈ ದೇಶದ ನೆಲ, ಜಲ, ವ್ಯವಸ್ಥೆಯನ್ನು ತೆಗಳಿಲ್ಲ. ಲಾಬಿ ಮಾಡಿಲ್ಲ, ಕಾನೂನುಗಳನ್ನು ತಿರುಚಲು ಪ್ರಯತ್ನಿಸಿಲ್ಲ. ಜತೆಗೆ 1932ರಲ್ಲಿ ಟಾಟಾ ಏರ್‌ಲೈನ್ಸ್ ಸ್ಥಾಪನೆ ಮಾಡಿ ನಮ್ಮ ಕನಸುಗಳಿಗೆ ರೆಕ್ಕೆ ಕಟ್ಟಿದ್ದ ಜೆ.ಆರ್.ಡಿ. ಟಾಟಾ, ಅದೇ ಟಾಟಾ ಏರ್‌ಲೈನ್ಸ್ ಅನ್ನು 1953ರಲ್ಲಿ ನೆಹರೂ ರಾಷ್ಟ್ರೀಕರಣಗೊಳಿಸಿ ಇಂಡಿಯನ್ ಏರ್‌ಲೈನ್ಸ್ ಮತ್ತು ಏರ್ ಇಂಡಿಯಾ ಸಂಸ್ಥೆಗಳಾಗಿ ವಿಭಾಗಿಸಿದಾಗ ಮನನೊಂದರೂ ಸರಕಾರದ ವಿರುದ್ಧ ಧ್ವನಿಯೆತ್ತಲಿಲ್ಲ!

ಆದರೆ 90ರ ದಶಕದಲ್ಲಿ ತಲೆಯೆತ್ತಿದ ರಿಲಯನ್ಸ್ ಅಥವಾ ಇನ್ಫೋಸಿಸ್, ವಿಪ್ರೋದಂತಹ ಮಾಹಿತಿ ತಂತ್ರಜ್ಞಾನ ಕಂಪನಿಗಳು ಮಾಡುತ್ತಿರುವುದಾದರೂ ಏನು? ಒಂದು ಗಂಟೆ ವಿದ್ಯುತ್ ಕಡಿತವಾದರೆ ವಿಪ್ರೋ ಅಧ್ಯಕ್ಷ ಅಜೀಂ ಪ್ರೇಮ್‌ಜಿ ಪತ್ರಿಕಾಗೋಷ್ಠಿ ಕರೆದು ಕರ್ನಾಟಕ ಸರಕಾರ ವನ್ನು ಹಿಗ್ಗಾಮುಗ್ಗಾ ಬಯ್ಯುತ್ತಾರೆ. ಇನ್ನು ನಾರಾಯಣ ಮೂರ್ತಿಗಳಿಗಂತೂ ರಸ್ತೆ ತುಂಬಾ ಇನ್ಫೋಸಿಸ್ ವಾಹನಗಳೇ ಓಡಾಡಬೇಕು. ಇಲ್ಲದಿದ್ದರೆ ಟ್ರಾಫಿಕ್ ಜಾಮ್ ಎಂದು ಮುಖ್ಯಮಂತ್ರಿ ಮನೆಗೆ ಫೋನಾಯಿಸುತ್ತಾರೆ. ರಿಂಗ್ ರೋಡ್ ಸುತ್ತಮುತ್ತ ಇರುವ ಆಯಕಟ್ಟಿನ ಜಾಗದಲ್ಲಿ ಮಾರುಕಟ್ಟೆಗಿಂತ ಕಡಿಮೆ ಬೆಲೆಯಲ್ಲಿ ಸರಕಾರವೇ ಸೈಟು ನೀಡಬೇಕು. ಆದರೆ 24 ಗಂಟೆಗಳೂ ಕರೆಂಟ್ ಬೇಕು ಎಂದು ಒತ್ತಾಯಿಸುವ ಅಜೀಂ ಪ್ರೇಮ್‌ಜಿ ಅವರು ತಮಗೆ ಬರುವ ಲಾಭದಲ್ಲಿ ಸ್ವಲ್ಪ ಭಾಗವನ್ನಾದರೂ ವಿದ್ಯುತ್ ಸ್ಥಾವರ ನಿರ್ಮಾಣದಂತಹ ಜನಪರ ಕಾರ್ಯಕ್ಕೇಕೆ ವಿನಿ ಯೋಗಿಸಬಾರದು? ಟ್ರಾಫಿಕ್ ಜಾಮ್ ಬಗ್ಗೆ ದೂರುವ ನಾರಾಯಣ ಮೂರ್ತಿಗಳು ಕನಿಷ್ಠ ಫ್ಲೈ ಓವರ್‌ಗಳನ್ನೇಕೆ ನಿರ್ಮಿಸಿ ಕೊಡಬಾರದು?

ಆಗಾಗ್ಗೆ ತ್ರೈಮಾಸಿಕ, ದ್ವೈವಾರ್ಷಿಕ, ವಾರ್ಷಿಕ ವರದಿಗಳನ್ನು ಪ್ರಕಟಿಸಿ ಇಷ್ಟು ಕೋಟಿ ಡಾಲರ್ ಸಂಪಾದನೆ ಮಾಡಿದೆವೆಂದು ಬಡಾಯಿ ಕೊಚ್ಚಿಕೊಳ್ಳುವ ಐಟಿ ಕಂಪನಿಗಳು ಈ ದೇಶಕ್ಕೆ ನೀಡುತ್ತಿರುವ ಕೊಡುಗೆಯಾದರೂ ಏನು? ನಿಜವಾಗಿಯೂ ದೇಶದ ಶ್ರೇಯೋಭಿವೃದ್ಧಿಯ ಬಗ್ಗೆ ಕಾಳಜಿಯಿದ್ದರೆ ಗಳಿಸಿದ ಲಾಭದಲ್ಲಿ ಸ್ವಲ್ಪ ಮೊತ್ತವನ್ನಾದರೂ ವಿವಿಧ ಕ್ರಿಯಾ ಯೋಜನೆಗಳಲ್ಲಿ ತೊಡಗಿಸಬಹುದಲ್ಲವೇ? ಜತೆಗೆ ಸರಕಾರ ನಿರ್ಮಿಸಿರುವ 'ಐಐಟಿ'ಗಳನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಪ್ರಯತ್ನಿಸುವ ಮೂರ್ತಿಗಳು ತಾವೇ ವಿಶ್ವದರ್ಜೆಯ ಐಐಟಿಯನ್ನೇಕೆ ಸ್ಥಾಪಿಸಬಾರದು? ಬೆಂಗಳೂರನ್ನು ದೂರುವ ಬದಲು ಟಾಟಾ ಕಂಪನಿಯಂತೆ ಜೆಮ್‌ಷೆಡ್‌ಪುರದಂತಹ ಕುಗ್ರಾಮವನ್ನು ಆಧುನಿಕ ನಗರವಾಗಿ ರೂಪಿಸಿ ತೋರಿಸಬಾರದೇಕೆ? ಆದರೆ ಇವರಾರೂ ಟಾಟಾ ಅಲ್ಲ.

**ಬಹುಶಃ ಅದಕ್ಕೇ ಇರಬೇಕು, ''ಈ ದೇಶದಲ್ಲಿ ಇನ್ನಷ್ಟು 'ಟಾಟಾ'ಗಳಿದ್ದರೆ ಭಾರತ ಇನ್ನೂ ನೂರು ಪಟ್ಟು ಹೆಚ್ಚು ಬದಲಾಗುತ್ತಿತ್ತು'' ಎಂದು ಸ್ವಾಮಿ ವಿವೇಕಾನಂದರು ಹೇಳಿದ್ದು!**

**Let's salute TATA!**

ಎಲ್ಲದಕ್ಕೂ ಒಂದು ಕೊನೆಯಿದೆ. ಆದರೂ ಮನಸ್ಸು ಮಾತ್ರ ಸೂತಕದ ಮನೆಯಾಗಿದೆ. ನಿನ್ನೆವರೆಗೂ ಉತ್ಸಾಹದ ಚಿಲುಮೆಯಂತಿದ್ದ ಆ ಕವಿಯ ಮುಖದಲ್ಲಿ ನಗುವಿನ ಕೋಲ್ಮಿಂಚು ಶಾಶ್ವತವಾಗಿ ಮರೆಯಾಯಿತೇನೋ ಎಂಬಂತೆ ಭಾಸವಾಗುತ್ತಿದೆ. ಆತ ಕುಳಿತಿದ್ದ ಕುರ್ಚಿ ಖಾಲಿ ಖಾಲಿ. ಅನಿರೀಕ್ಷಿತ ಸೋಲಿನಿಂದ ನೊಂದು ದೂರ ಸರಿದಿದ್ದಾನೆ. ಖಂಡಿತಾ ಇನ್ನು ಕೆಲವೇ ದಿನ ಗಳಲ್ಲಿ ಮತ್ತೊಬ್ಬರು ಆ ಸ್ಥಾನವನ್ನು ಅಲಂಕರಿಸುತ್ತಾರೆ. ಆದರೆ ರಾಜಕಾರಣಿಯ ರೂಪದಲ್ಲಿದ್ದ, ಆ ಕವಿಯನ್ನು, ಕನಸುಗಾರನನ್ನು, 80ರ ಹರೆಯದಲ್ಲೂ ಜೀವನೋತ್ಸಾಹ ಉಳಿಸಿಕೊಂಡಿದ್ದ ಭಾವುಕ ಜೀವಿಯನ್ನು ಮತ್ತೆ ಪ್ರಧಾನಿ ಸ್ಥಾನದಲ್ಲಿ ಕಾಣುವ ಭರವಸೆಯೇ ಕಮರಿಹೋಗಿದೆ.

ಹಾರ್ ನಹೀ ಮಾನೂಂಗ<br>
ರಾರ್ ನಹೀ ಠಾನೂಂಗಟ<br>
ಕಾಲ್ ಕೇ ಕಪಾಲ್ ಪರ್<br>
ಲಿಖ್‌ತಾ-ಮಿಟಾತಾ ಹೂಂ<br>
ಗೀತ್ ನಯಾ ಗಾತಾ ಹೂಂ

ಅಂಥಾ ಆತ ಹೇಳಿದ್ದು ಇನ್ನೂ ಮನದೊಳಗೆ, ನೆನಪಿನ ಬುತ್ತಿಯೊಳಗೆ, ಹೃದಯದ ಗೂಡೊಳಗೆ ಬೆಚ್ಚಗೆ, ಹೊಚ್ಚಹೊಸದಾಗಿಯೇ, ಹಚ್ಚ ಹಸಿರಾಗಿಯೇ ಇದೆ. ನೆನಪುಗಳು ಮಾಸಿಲ್ಲ. ಆದರೂ ಅಭದ್ರತೆಯ ಭಾವನೆ ಕಾಡುತ್ತಿದೆ. ಮುಪ್ಪು ಹಿಡಿದಿರುವ ದೇಹ ಮತ್ತೆ ಅವಕಾಶ ನೀಡೀತೆ ಎಂಬ ಆತಂಕ ಬೆನ್ನು ಹತ್ತಿದೆ. ಜತೆಗೆ 'ಜಾಯೆ ತೋ ಜಾಯೆ ಕಹಾ' ಎಂಬ ಕವಿತೆಯಲ್ಲಿ ವ್ಯಕ್ತವಾಗಿದ್ದ ಆತನ ಹತಾಶೆ ಮತ್ತೆ ಮತ್ತೆ ನೆನಪಾಗುತ್ತಿದೆ.

ಪ್ರಳಯ ಬಂದಾದ ಮೇಲೆ ಭೂಮಿ ತಣ್ಣಗಾಗುತ್ತದೆ, ಒಂದು ಕ್ಷಣ ಮೌನ ಆವರಿಸು ತ್ತದೆ, ಕ್ರಮೇಣ ಚಿಲಿಪಿಲಿ ಧ್ವನಿ ಕೇಳಲಾರಂಭಿಸುತ್ತದೆ, ಭುವಿಗೆ ಜೀವಕಳೆ ತುಂಬುತ್ತದೆ, ಹಸಿರು ಮೊಳಕೆಯೊಡೆಯುತ್ತದೆ. ಆಗ ಹೊಸ ತುಡಿತ ಪ್ರಾರಂಭವಾಗುತ್ತದೆ. ಆದರೆ ಅಂತಹ ಯಾವುದೇ ಸೂಚನೆಗಳು ಈಗ ಕಾಣುತ್ತಿಲ್ಲ. 1947ಕ್ಕಿಂತ ಮೊದಲಿದ್ದ ಪರಿಸ್ಥಿತಿಯೇ ನೆನಪಾಗುತ್ತಿದೆ. 'ಆತನ' ಸ್ಥಾನದಲ್ಲಿ ರಾಬರ್ಟ್ ಕ್ಲೈವ್, ಲಾರ್ಡ್ ವೆಲ್ಲೆಸ್ಲಿ ಮತ್ತು ಮೆಕಾಲೆಗಳನ್ನು ಹೇಗೆ ತಾನೇ ಕಲ್ಪಿಸಿಕೊಳ್ಳುತ್ತೀರಿ? ಅಥವಾ ನಾವೇ ತಪ್ಪೆಸಗಿದ್ದೇವೆಯೇ?

ಬ್ರಿಟನ್‌ನಲ್ಲಿ ನೇಣುಗಂಬಕ್ಕೆ ತಲೆಕೊಟ್ಟ ಮದನಲಾಲ್ ದಿಂಗ್ರಾ, ತಾಯ್ನಾಡ ಮುಕ್ತಿಗಾಗಿ ಹೊರಟು ಆಗಸದಲ್ಲೇ ವಿದಾಯ ಹೇಳಿದ ಸುಭಾಷ್‌ಚಂದ್ರ ಬೋಸ್, 2388 ದಿನಗಳ ಕಾಲ ಜೈಲುವಾಸ ಅನುಭವಿಸಿದ ಗಾಂಧೀಜಿಯನ್ನು ಬ್ರಿಟಿಷರಿಂದ ಕೊಲ್ಲಲಾಗಲಿಲ್ಲ. ಆದರೆ ಗುಲಾಮಗಿರಿಗೆ ಗುರುವಾರ ಆಹ್ವಾನ ನೀಡುವ ಮೂಲಕ ನಾವು ಆ ಸ್ವಾತಂತ್ರ್ಯ ಹೋರಾಟ ಗಾರರನ್ನು ಕತ್ತು ಹಿಸುಕಿ ಸಾಯಿಸಿದ್ದೇವೆ! ಆದರೆ ಮಾರ್ಟಿನ್ ಲೂಥರ್ ಕಿಂಗ್, ನೆಲ್ಸನ್ ಮಂಡೇಲಾ, ಜೂಲಿಯಸ್ ಕೆ. ನೈರೇರೆ, ಆ್ಯಂಗ್ ಸ್ಯಾನ್ ಸೂಕಿಗೆ ಗಾಂಧೀಜಿ ಪ್ರೇರಕ ಶಕ್ತಿಯಾ ಗಿದ್ದು ತಮ್ಮ ಸ್ವಾತಂತ್ರ್ಯ ಹೋರಾಟ, ದಾಸ್ಯದ ವಿರುದ್ಧದ ಧ್ವನಿಯಿಂದಾಗಿಯೇ ಹೊರತು

ಅಡಿಯಾಳುತನದಿಂದಲ್ಲ. ಆದರೆ ನಾವು, ಗಾಂಧೀಜಿ ಯಾವ ದಾಸ್ಯದ ವಿರುದ್ಧ, ಗುಲಾಮಗಿರಿಯ ವಿರುದ್ಧ ಹೋರಾಡಿದರೋ ಅದೇ ದಾಸ್ಯಕ್ಕೆ ನೇಣು ಹಾಕಿಕೊಂಡಿದ್ದೇವೆ! "Indians are unfit to govern themselves" ಎಂಬ ವಿನ್‌ಸ್ಟನ್ ಚರ್ಚಿಲ್‌ನ ಮಾತನ್ನು ನಿಜವಾಗಿಸಿದ್ದೇವೆ!

ಅಷ್ಟಕ್ಕೂ ನಮ್ಮನ್ನಾಳುವ ಅಧಿಕಾರ ಅಟಲ್‌ಗಿಲ್ಲವೆ?

ಆರು ವರ್ಷಗಳ ಅಟಲ್ ಪರ್ವ ಅಂತ್ಯಗೊಂಡಿದೆ. ಅನಿರೀಕ್ಷಿತ ಸೋಲಿನಿಂದ ನೊಂದು ಪದತ್ಯಾಗ ಮಾಡಿದ್ದಾರೆ. ಆದರೆ ಈ ದೇಶ ಕಂಡ ಅತ್ಯಂತ ಜನಪ್ರಿಯ ಕಾಂಗ್ರೆಸ್ಸೇತರ ಪ್ರಧಾನಿ ಎಂಬ ಸ್ಥಾನವನ್ನು ಇತಿಹಾಸದಲ್ಲಿ ಕಾದಿರಿಸಲಾಗಿದೆ. ಏಕೆಂದರೆ ಅಟಲ್ ಸಾಧನೆ, ಅವರ ಮಹತ್ವ ಅಂಥದ್ದು. ದೇಶವನ್ನು ಆಳುವ ತಾಕತ್ತು ಕಾಂಗ್ರೆಸ್ ಬಿಟ್ಟರೆ ಬೇರಾವ ಪಕ್ಷಗಳಿಗೂ ಇಲ್ಲ ಎಂಬ ಮೂದಲಿಕೆ ಕೇಳುತ್ತಿದ್ದ ಕಾಲದಲ್ಲಿ ಆಶಾಕಿರಣವಾಗಿ ಹೊರಹೊಮ್ಮಿದ ವ್ಯಕ್ತಿ ಅವರು. 'ಯುನೈಟೆಡ್ ಫ್ರಂಟ್' ಎಂಬ ಪ್ರಹಸನದ ಮೂಲಕ ಪ್ರಧಾನಿ ಸ್ಥಾನಕ್ಕೇರಿದ ವಿ.ಪಿ. ಸಿಂಗ್, ಚಂದ್ರಶೇಖರ್, ಇಂದ್ರಕುಮಾರ್ ಗುಜ್ರಾಲ್ ಮತ್ತು ದೇವೇಗೌಡರು ತರಗೆಲೆಗಳಂತೆ ಉದುರಿದ ಕಾಲದಲ್ಲಿ ಮೈತ್ರಿಕೂಟ ಸರಕಾರವನ್ನು ರಚಿಸುವುದು ಮಾತ್ರವಲ್ಲ, ಯಶಸ್ವಿಯಾಗಿ ಮುನ್ನಡೆಸಬಹುದು ಎಂಬುದನ್ನು ಸಾಬೀತುಪಡಿಸಿದ ವ್ಯಕ್ತಿ ಅಟಲ್.

1996ರಲ್ಲಿ ಮೊದಲ ಬಾರಿಗೆ ಪ್ರಧಾನಿಯಾದ ಅವರು 13 ದಿನಗಳಲ್ಲೇ ನೋವುಂಡು ರಾಜೀನಾಮೆ ನೀಡಬೇಕಾಗಿ ಬಂತು. ಆಗ ಅತಂತ್ರ ಲೋಕಸಭೆ ಸೃಷ್ಟಿಯಾಗಿದ್ದರೂ ಜನಾದೇಶ ಅಟಲ್ ಪರವಾಗಿತ್ತು. ಆದರೆ ಪ್ರಜಾಪ್ರಭುತ್ವವೆಂಬ ಅಂಕಿ-ಸಂಖ್ಯೆಗಳ ಲೆಕ್ಕಕ್ಕೆ ತಲೆಬಾಗಬೇಕಾಯಿತು. ಒಂದು ವೇಳೆ, ಇನ್ನು ಕೆಲವೇ ದಿನಗಳ ಕಾಲ ಅಧಿಕಾರದಲ್ಲಿದ್ದರೂ 1996ರಲ್ಲೇ ಭಾರತ ಅಣ್ವಸ್ತ್ರ ಪರೀಕ್ಷೆ ನಡೆಸುತ್ತಿತ್ತು. 1998ರಲ್ಲಿ ಮತ್ತೆ ಪ್ರಧಾನಿಯಾದ ಅವರು ಅದೇ ವರ್ಷದ ಮೇ 11 ಮತ್ತು 13ರಂದು ಅಣ್ವಸ್ತ್ರ ಪರೀಕ್ಷೆಗೆ ಆದೇಶ ನೀಡುವ ಎದೆಗಾರಿಕೆ ತೋರಿದರು. ಕೊನೆಗೂ ತಮ್ಮ ಕನಸಿನ ಪ್ರಧಾನಿ ದೊರೆತನಲ್ಲಾ ಎಂದು ದೇಶವೇ ಸಂಭ್ರಮಪಟ್ಟಿತು. ಆದರೆ ಖಳ ನಾಯಕನಾಗಿ ಬಂದ ಗಿರಿಧರ್ ಗೊಮಾಂಗ್ ಹಾಕಿದ ಒಂದು ಮತದಿಂದ 1999ರಲ್ಲಿ ಅಧಿ ಕಾರ ಕಳೆದುಕೊಳ್ಳಬೇಕಾಯಿತು. ಆದರೂ ಕಾರ್ಗಿಲ್ ಯುದ್ಧ ಸಾರಲು ಅಳುಕಲಿಲ್ಲ. ಅತಿಕ್ರಮಣಕಾರರನ್ನು ಗಡಿಯಿಂದ ಹೊರದಬ್ಬುವವರೆಗೂ ಯುದ್ಧ ಮುಂದುವರಿಯಿತು. ಅಂತಾರಾಷ್ಟ್ರೀಯ ಒತ್ತಡಕ್ಕೂ ಮಣಿಯಲಿಲ್ಲ. ನೆಹರೂ ಅವರಿಂದ ನರಸಿಂಹರಾವ್‌ವರೆಗೂ ಗಡಿಯಲ್ಲಿ ಮಡಿದ ಸೈನಿಕ ಬರೀ ಹೆಣದಂತೆ ಕಾಣುತ್ತಿದ್ದ! ಆದರೆ ಕಾರ್ಗಿಲ್‌ನಲ್ಲಿ ಬಲಿದಾನ ಮಾಡಿದವರು ಹುತಾತ್ಮರೆನಿಸಿಕೊಂಡರು. ವಿಶೇಷ ವಿಮಾನದ ಮೂಲಕ ಶವಪೆಟ್ಟಿಗೆಗಳನ್ನು ಸಾಗಿಸಿದ್ದಲ್ಲದೆ, ಮೆರವಣಿಗೆಯಲ್ಲಿ ಕೊಂಡೊಯ್ದು ಸಕಲ ಸರಕಾರಿ ಗೌರವಗಳೊಂದಿಗೆ ಅಂತ್ಯಸಂಸ್ಕಾರ ಮಾಡುವ ಭಾವುಕತೆ ತೋರಿದರು. ಈ ರೀತಿ ಜನರ ಭಾವನೆಗಳಿಗೆ ಸ್ಪಂದಿಸಿದ ಕಾರಣದಿಂದಾಗಿಯೇ ಅಟಲ್ 1999ರಲ್ಲೂ ಪ್ರಧಾನಿಯಾದರು. ನಿಚ್ಚಳ ಬಹು ಮತ ದೊರೆಯಿತು.

ಅಟಲ್ ಪರ್ವ ಆರಂಭವಾಯಿತು. ಜತೆಗೆ ದೇಶದ ಭವಿಷ್ಯವೂ ಬದಲಾಗತೊಡಗಿತು.

ಮಾಹಿತಿ ತಂತ್ರಜ್ಞಾನ ಕ್ಷೇತ್ರದಲ್ಲಿ ಭಾರತ ವಿಶ್ವದ ಸೂಪರ್‌ಪವರ್ ರಾಷ್ಟ್ರವಾಗಿ ಹೊರಹೊಮ್ಮಿತು. ಸ್ಥಗಿತಗೊಂಡಿದ್ದ ಆರ್ಥಿಕ ಸುಧಾರಣೆಗಳಿಗೆ ಹೊಸ ಚಾಲನೆ ದೊರೆಯಿತು. ಅಟಲ್ ಬೆಂಬಲದಿಂದಾಗಿ ಸಚಿವ ಅರುಣ್ ಶೌರಿ, ಯಾರನ್ನೂ ಲೆಕ್ಕಿಸದೆ ಖಾಸಗೀಕರಣ ಪ್ರಕ್ರಿಯೆಯನ್ನು ಮುಂದುವರಿಸಿದರು. ಪ್ರಾದೇಶಿಕ ಪಕ್ಷಗಳನ್ನೂ ರಾಷ್ಟ್ರಾಭಿವೃದ್ಧಿ ಕಾರ್ಯದಲ್ಲಿ ತೊಡಗಿಸಿಕೊಳ್ಳಬಹುದೆಂಬುದನ್ನು ಸಾಬೀತು ಪಡಿಸಿದರು. ಕ್ಷಿಪಣಿ ನಿರೋಧಕ ರಕ್ಷಾಕವಚವನ್ನೂ ಭೇದಿಸುವ 'ಬ್ರಹ್ಮೋಸ್' ಎಂಬ ಶಬ್ದಕ್ಕಿಂತ ವೇಗವಾಗಿ ಸಾಗುವ ಕ್ಷಿಪಣಿ ರೂಪುಗೊಂಡಿತು. ಅಣ್ವಸ್ತ್ರ ಕೊಂಡೊಯ್ಯುವ ಸಾಮರ್ಥ್ಯ ಹೊಂದಿರುವ ಅಗ್ನಿ ಕ್ಷಿಪಣಿ ಅಣಿಯಾಯಿತು. ಅದೆಲ್ಲಕ್ಕಿಂತ ಮುಖ್ಯವಾಗಿ, ಚಂದ್ರಶೇಖರ್ ಕಾಲದಲ್ಲಿ ಚಿನ್ನ ಅಡವಿಟ್ಟರೆ, ನರಸಿಂಹರಾವ್ ಕಾಲದಲ್ಲಿ ವಿಶ್ವಬ್ಯಾಂಕ್, ಅಂತಾರಾಷ್ಟ್ರೀಯ ಹಣಕಾಸು ನಿಧಿ ಹಾಗೂ ಏಷ್ಯಾ ಅಭಿವೃದ್ಧಿ ಬ್ಯಾಂಕ್ ಮುಂದೆ ಕೈಚಾಚಿ ನಿಲ್ಲಬೇಕಾದ ಪರಿಸ್ಥಿತಿ ಇತ್ತು. ಆದರೆ 6 ವರ್ಷಗಳ ಅಟಲ್ ಅಧಿಕಾರಾವಧಿಯಲ್ಲಿ ನಮ್ಮ ವಿದೇಶಿ ವಿನಿಮಯ ಮೀಸಲು ನಿಧಿ 105 ಶತಕೋಟಿ ಡಾಲರ್ ಮೀರುವ ಮೂಲಕ ದೇಶ ಸಾಲ ನೀಡುವ ಸಾಮರ್ಥ್ಯ ಪಡೆದಿದೆ! ಹೀಗೆ ಜಗತ್ತಿನ 6ನೇ ಮುಂಚೂಣಿ ರಾಷ್ಟ್ರವಾಗಿ ಹೊರಹೊಮ್ಮಿದ್ದೇವೆ. ಐದು ದಶಕಗಳ ಕಾಲ ಪ್ರಯತ್ನಿಸಿದರೂ ಕಾಶ್ಮೀರ ಸಮಸ್ಯೆಯನ್ನು ಬಗೆಹರಿಸಲು ಕಾಂಗ್ರೆಸ್‌ನಿಂದಾಗಲಿಲ್ಲ. ಆದರೆ ಸಂಸತ್ ಮೇಲಿನ ದಾಳಿಯ ನಂತರ ಇಡೀ ದೇಶಕ್ಕೆ ದೇಶವೇ ಪಾಕಿಸ್ತಾನದ ವಿರುದ್ಧ ಸೆಟೆದು ನಿಂತಿದ್ದ ಕಾಲದಲ್ಲಿ, ಸ್ನೇಹಹಸ್ತ ಚಾಚುವ ಮೂಲಕ ತಮ್ಮ ರಾಜಕೀಯ ಭವಿಷ್ಯ ಮತ್ತು ಸಮಗ್ರತೆಯನ್ನೇ ಪಣಕ್ಕಿಟ್ಟ ಅಟಲ್ ಸಂಬಂಧ ಸುಧಾರಣೆಗೆ ಪ್ರಾಮಾಣಿಕ ಪ್ರಯತ್ನ ಮಾಡಿದರು. ಆದರಿಂದಾಗಿ ಇಂದು ಗಡಿಯಲ್ಲಿ ಶಾಂತಿ ನೆಲೆಸಿದೆ. ಮುಷರ್ರಫ್ ಕೂಡ ಅಟಲ್ ಜಪ ಮಾಡುತ್ತಿದ್ದಾರೆ.

ಇರಾಕ್‌ಗೆ ನಮ್ಮ ಶಾಂತಿ ಪಡೆಯನ್ನು ಕಳುಹಿಸುವುದಿಲ್ಲ ಎಂದು ಅಮೆರಿಕಕ್ಕೆ ಖಡಾಖಂಡಿತವಾಗಿ ಹೇಳುವ ಎದೆಗಾರಿಕೆಯೂ ನಮಗೆ ಬಂದಿದೆ. ಅಮೆರಿಕದಲ್ಲಿರುವ ನಮ್ಮ ರಾಯಭಾರಿ ಲಲಿತ್‌ಮಾನ್ ಸಿಂಗ್ ಬುಷ್ ಸರಕಾರವನ್ನು ಟೀಕಿಸುವ ಧೈರ್ಯ ತೋರುತ್ತಿದ್ದಾರೆ. ಏಕೆಂದರೆ ಅಟಲ್ ಆಡಳಿತದಲ್ಲಿ ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರತದ ಸ್ಥಾನಮಾನ ಹೆಚ್ಚಾಗಿದೆ. ಕ್ಯಾನ್‌ಕನ್‌ನಲ್ಲಿ ನಡೆದ ವಿಶ್ವವ್ಯಾಪಾರ ಶೃಂಗದಲ್ಲಿ ಅಮೆರಿಕ ಮತ್ತು ಐರೋಪ್ಯ ಒಕ್ಕೂಟ ವಿರುದ್ಧ ಅಭಿವೃದ್ಧಿಶೀಲ ರಾಷ್ಟ್ರಗಳನ್ನು ಒಗ್ಗೂಡಿಸಿ ಇದಿರೇಟು ನೀಡುವ ತಾಕತ್ತು ಭಾರತಕ್ಕೆ ಬಂದಿದೆ. ಅಟಲ್ ಮೇಲಿನ ಗೌರವವೂ ಹೆಚ್ಚಾಗಿದೆ. ವ್ಯಕ್ತಿತ್ವವೂ ಹಿರಿದಾಗಿದೆ. ಚೀನಾ ಎದುರು ಸೋಲು ಅನುಭವಿಸಿದ ನಂತರ ಜವಾಹರ್‌ಲಾಲ್ ನೆಹರೂ ಅವರಂಥ ನಾಯಕನ ನಿಷ್ಠೆ ಬಗ್ಗೆಯೇ ಜನಮನದಲ್ಲಿ ಸಂಶಯಗಳೆದ್ದಿದ್ದವು. ಇಂತಹ ಸಂಶಯದಿಂದಾಗಿಯೇ ಆಗಿನ ರಾಷ್ಟ್ರಪತಿ ಎಸ್. ರಾಧಾಕೃಷ್ಣನ್ ಸ್ವತಃ ಚೀನಾ ಗಡಿಗೆ ತೆರಳಿ ಪರಾಮರ್ಶೆ ನಡೆಸಿದ್ದರು. ಇನ್ನು 1939ರಲ್ಲಿ ಕಾಂಗ್ರೆಸ್ ಅಧ್ಯಕ್ಷ ಸ್ಥಾನಕ್ಕೆ ಸ್ಪರ್ಧಿಯಾಗಿದ್ದ ಸುಭಾಷ್ ಚಂದ್ರ ಬೋಸ್ ವಿರುದ್ಧ ಪಟ್ಟಾಭಿ

ಸೀತಾರಾಮಯ್ಯನವರನ್ನು ಎತ್ತಿಕಟ್ಟಿದ ಗಾಂಧೀಜಿ ಬಗ್ಗೆಯೂ ಜನ ಅಸಹ್ಯ ಪಟ್ಟಿದ್ದರು. ಆದರೆ ಅಟಲ್ ಬಗ್ಗೆ, ಅವರ ನಿಷ್ಠೆಯ ಬಗ್ಗೆ, ಕಾಳಜಿ ಬಗ್ಗೆ ಖಂಡಿತಾ ಯಾರೂ ಸಂಶಯಪಡಲಿಲ್ಲ. ಆದರೂ ಐದು ದಶಕಗಳ ಕಾಲ ಪ್ರತಿಪಕ್ಷದಲ್ಲಿ ಕುಳಿತು, ಪರಿಶ್ರಮದಿಂದ ಪ್ರಧಾನಿಯಾದ ಅಟಲ್ ಸೋತಿದ್ದಾರೆ. ಯಾರೋ ಬರೆದು ಕೊಟ್ಟಿದ್ದನ್ನಷ್ಟೇ ಓದುವಾಕೆ ಇನ್ನು ಒಂದೆರಡು ದಿನಗಳಲ್ಲಿ ಮುತ್ಸದ್ದಿಗಳು ಕುಳಿತಿದ್ದ ಕುರ್ಚಿಯನ್ನು ಕಬಳಿಸಲಿದ್ದಾರೆ. ಆದರೆ ಈ ದೇಶದ ಬಗ್ಗೆ, ಸಂಸ್ಕೃತಿ ಬಗ್ಗೆ, ಇತಿಹಾಸದ ಬಗ್ಗೆ, ಸ್ವಾತಂತ್ರ್ಯ ಹೋರಾಟದ ಕಲಿಗಳ ಬಗ್ಗೆ ಅರಿಯದ, ಶ್ವೇಚ್ಛಾಚಾರದ ನಾಡಲ್ಲಿ ಹುಟ್ಟಿದ ವ್ಯಕ್ತಿಯೊಬ್ಬರು ಆ ಸ್ಥಾನದಲ್ಲಿ ಆಸೀನರಾಗುವುದನ್ನು ಹೇಗೆ ತಾನೇ ಮನಸ್ಸು ಒಪ್ಪೀತು?

ಇಟಲಿಯಲ್ಲೇನೋ ಸಂಭ್ರಮ, ಹರ್ಷಾಚರಣೆ ನಡೆಯುತ್ತಿದೆ. ಮತಾಂತರಿಗಳಿಗೂ ಹೊಸ ಹುರುಪು ಬಂದಿದೆ. ಆದರೆ ಈ ದೇಶದ ಗತಿಯೇನು? ಪ್ರಧಾನಿ ಗಾದಿ ಎನ್ನುವುದು ರಾಷ್ಟ್ರದ ಅತ್ಯಂತ ಪ್ರಭಾವಿ ಮತ್ತು ಪವಿತ್ರ ಸ್ಥಾನ. ನಮ್ಮ ಅಣ್ವಸ್ತ್ರ ಸಾಮರ್ಥ್ಯದಂತಹ ಗೌಪ್ಯ ಮಾಹಿತಿಗಳು ಪ್ರಧಾನಿ ಬಳಿ ಇರುತ್ತವೆ. ಅಂತಹ ಸ್ಥಾನವನ್ನು ವಿದೇಶಿ ವ್ಯಕ್ತಿಗೆ ನೀಡುವ ನಮ್ಮ ದಾರಿದ್ರ್ಯಕ್ಕೆ ಏನನ್ನಬೇಕು? 105 ಕೋಟಿ ಜನರಿರುವ ರಾಷ್ಟ್ರದಲ್ಲಿ ನಾಯಕರೇ ಇಲ್ಲವೇ?

ಹೇ ದೇವರೇ
ನನ್ನ ಆತ್ಮೀಯರನ್ನು ಆಲಂಗಿಸದಷ್ಟು
ಜನರ ಪಾದವನ್ನು ಸ್ಪರ್ಶಿಸದಷ್ಟು
ಎತ್ತರಕ್ಕೆ ಏರಿಸಬೇಡ....

ಎಂದು ಮನಬಿಚ್ಚಿಟ್ಟ ಭಾವುಕ ಅಟಲ್ ಅವರನ್ನು ಮೂಲೆಗೆ ತಳ್ಳಿದ್ದು ಸರಿಯೆ? ಬಾಡಿಗೆ ಮನೆಗೆ ಬರುವವರ ಗೋತ್ರ ಕೇಳುವ ನಾವು, ದೇಶ ಕಟ್ಟಿದವನನ್ನು 'ಗದ್ದಾರ್' ಎಂದ ಪರಕೀಯಳಿಗೆ ಈ ದೇಶದ ಕೀಲಿ ಕೊಡುವಷ್ಟು ನೈತಿಕ ಅಧಃಪತನಕ್ಕಿಳಿದಿದ್ದೇವೆಯೇ?

''ಗದ್ದಾರ್ ಎಂದವಳು ಗದ್ದುಗೆಗೆ, ದೇಶ ಕಟ್ಟಿದವ ಮೂಲೆಗೆ!' ತಲೆಬರಹದ ಲೇಖನ 'ಖಡ್ಗಕ್ಕಿಂತ ಲೇಖನಿ ಹರಿತವಾದುದು' ಎನ್ನುವ ಬಿಸ್ಮಾರ್ಕ್‌ನ ನೀತಿಯನ್ನು ನೆನಪಿಸುವಂತಿತ್ತು. ಈ ಲೇಖನ ಒಬ್ಬ ಜನಸಾಮಾನ್ಯನಿಗೆ ವಾಜಪೇಯಿಯವರ ಮೇಲೆ ಅನುಕಂಪ-ಗೌರವ ಮೂಡಿಸಿದರೆ, ಸ್ವಾತಂತ್ರ್ಯ ಹೋರಾಟಗಾರರ, ದೇಶಪ್ರೇಮಿಗಳ ಮನಸ್ಸನ್ನು ಖಿನ್ನವಾಗಿಸಿ, ಮನಮುಟ್ಟುವಂತಿತ್ತು.

ನಂದಕುಮಾರ್ ಪಳಂಗಾಯ
ಮಲ್ಲೇಶ್ವರಂ

ಎಲ್ಲ ಬಾಗಿಲುಗಳೂ ಮುಚ್ಚಿವೆ. ಬೇರೆ ಮಾರ್ಗಗಳೇ ಇಲ್ಲ, ಕುಣಿಕೆಗೆ ತಲೆಕೊಡುವುದೊಂದನ್ನು ಬಿಟ್ಟು!

ನಾಳೆ 58ನೇ ಸ್ವಾತಂತ್ರ್ಯೋತ್ಸವ. ಪ್ರಧಾನಿ ಮನಮೋಹನ್ ಸಿಂಗ್ ಕೆಂಪುಕೋಟೆಯನ್ನೇರಿ ರಾಷ್ಟ್ರವನ್ನುದ್ದೇಶಿಸಿ ಮಾತನಾಡುತ್ತಾರೆ. ಆದರೆ ಇಂದು ಬೆಳಗ್ಗೆ ನೀವು ಕಣ್ಣು ತೆರೆಯುವುದರೊಳಗೆ ಧನಂಜಯ್ ಚಟರ್ಜಿ ನೇಣುಗಂಬವನ್ನೇರಿರುತ್ತಾನೆ! ನತಾ ಮಲ್ಲಿಕ್‌ನ ಕುಣಿಕೆಗೆ ತಲೆಕೊಟ್ಟು ಅಂತಿಮ ವಿದಾಯ ಹೇಳಿರುತ್ತಾನೆ. 14 ವರ್ಷಗಳ ಮಾನಸಿಕ ಹಿಂಸೆಗೆ, ನಿತ್ಯವೂ ಸಾಯಬೇಕಾಗಿದ್ದ ಬದುಕಿಗೆ ತೆರೆಬಿದ್ದು ನಮಗಿಂತಲೂ ಮೊದಲೇ ಸ್ವಾತಂತ್ರ್ಯೋತ್ಸವವನ್ನು ಆಚರಿಸಿರುತ್ತಾನೆ!

1990ರಲ್ಲಿ ಹದಿನಾಲ್ಕು ವರ್ಷದ ಬಾಲಕಿ ಹೇತಲ್ ಪಾರೇಖ್ ಮೇಲೆ ಅತ್ಯಾಚಾರವೆಸಗಿ ಬರ್ಬರವಾಗಿ ಕೊಲೆಗೈದಿದ್ದಕ್ಕಾಗಿ ಇಂತಹ ಅಂತ್ಯ ಎದುರಾಗಿದೆ. ಇತ್ತ ಕ್ರೈಸ್ತ ಮಿಷನರಿ ಗ್ರಹಾಂ ಸ್ಟೈನ್ಸ್ ಮತ್ತು ಆತನ ಇಬ್ಬರು ಪುತ್ರರನ್ನು ಕೊಂದ ದಾರಾಸಿಂಗ್ ಕೂಡ ಮುಂದೊಂದು ದಿನ ನೇಣುಗಂಬವನ್ನೇರುತ್ತಾನೆ. ಆತನಿಗೂ ಕ್ಷಮಾದಾನ ದೊರೆಯುವುದಿಲ್ಲ. ನೇಣುಗಂಬಕ್ಕೆ ತಲೆಕೊಡಲೇಬೇಕಾಗುತ್ತದೆ. ಆದರೆ, ಒಂದು ವೇಳೆ ಧನಂಜಯ್ ಚಟರ್ಜಿ ರಾಜಕಾರಣಿಯಾಗಿದ್ದರೆ ಅಥವಾ ಪೊಲೀಸ್ ಅಧಿಕಾರಿಯೊಬ್ಬರ ಮಗನಾಗಿದ್ದರೆ?

ಧನಂಜಯ್ ಪ್ರಕರಣದಲ್ಲಿ ಇರುವುದು ಕೇವಲ ಸಾಂದರ್ಭಿಕ ಸಾಕ್ಷ್ಯಾಧಾರಗಳಷ್ಟೆ. ಅತ್ಯಾಚಾರವನ್ನು ಸಾಬೀತುಪಡಿಸಲು ಅತ್ಯಗತ್ಯವಾದ ಡಿಎನ್‌ಎ ಪರೀಕ್ಷೆಯನ್ನೇ ನಡೆಸಿಲ್ಲ. ಕ್ಷಮಾದಾನಕ್ಕೆ ಆತ ಅನರ್ಹ ಎನ್ನುವುದಕ್ಕೆ, ಅಪರಾಧಿ ಧನಂಜಯ್ ನಾಗರಿಕ ಪ್ರಪಂಚಕ್ಕೆ ಇನ್ನೂ ಅಪಾಯವೊಡ್ಡಿದ್ದಾನೆ ಎಂಬುದಕ್ಕೆ ಪಶ್ಚಿಮ ಬಂಗಾಳ ಸರಕಾರ ಯಾವುದೇ ಆಧಾರ ಒದಗಿಸಿಲ್ಲ. ಧನಂಜಯ್‌ಗೆ ಕಾನೂನಿನ ನೆರವು ನೀಡಿಲ್ಲ. ವಿವಿಧ ನ್ಯಾಯಾಲಯಗಳು ಇದುವರೆಗೂ ನೀಡಿರುವ ತೀರ್ಪುಗಳ ಬಗ್ಗೆ ಆತನ ಕುಟುಂಬಕ್ಕೆ ಮಾಹಿತಿ ನೀಡಿಲ್ಲ. ಅಲ್ಲದೆ ನೇಣಗೇರಿಸುವುದನ್ನು ಅನಗತ್ಯವಾಗಿ ವಿಳಂಬ ಮಾಡಿದರೆ, ಮರಣ ದಂಡನೆ ಶಿಕ್ಷೆಯನ್ನು ಜೀವಾವಧಿ ಶಿಕ್ಷೆಯಾಗಿ ಪರಿವರ್ತಿಸಬೇಕು ಎಂದು ಈ ಹಿಂದೆ ಸುಪ್ರೀಂ ಕೋರ್ಟ್ ಸ್ವತಃ ಹೇಳಿದೆ.

ಒಂದು ವೇಳೆ ಧನಂಜಯ್ ಚಟರ್ಜಿ ರಾಜಕಾರಣಿಯಾಗಿದ್ದರೆ ಈ ಮೇಲಿನ ಲೋಪಗಳಲ್ಲಿ ಒಂದನ್ನಾದರೂ ಉಪಯೋಗಿಸಿಕೊಂಡು ಬಹುಶಃ ಶಿಕ್ಷೆಯಿಂದ ತಪ್ಪಿಸಿಕೊಳ್ಳುತ್ತಿದ್ದ! ಆದರೆ ಅವನೊಬ್ಬ ಅನಕ್ಷರಸ್ಥ. ಬಿಡಿಗಾಸಿಗೂ ಚಿಂತಿಸಬೇಕಾದ ಸ್ಥಿತಿ ಅವನದ್ದು. ಅಂದಮಾತ್ರಕ್ಕೆ ಧನಂಜಯ್‌ಗೆ ಬಂದೊದಗಿದ ಪರಿಸ್ಥಿತಿಯ ಬಗ್ಗೆ ಕಣ್ಣೀರು ಸುರಿಸುವ ಅಗತ್ಯವಿಲ್ಲ. ಅತ್ಯಾಚಾರದಂತಹ ಹೀನಕೃತ್ಯವನ್ನೆಸಗಿದ, ಅಮಾಯಕಳನ್ನು ಬರ್ಬರವಾಗಿ ಕೊಲೆಗೈದ ಆತನನ್ನು ನೇಣಿಗೇರಿಸಲೇಬೇಕು. ಆದರೆ ಖಾದಿ ಧರಿಸಿದ, ಖಾಕಿ ತೊಟ್ಟ ಎಷ್ಟೋ ಧನಂಜಯರು ನಮ್ಮ ನಡುವೆಯೇ ಇದ್ದಾರೆ. ಪಾರ್ಲಿಮೆಂಟನ್ನೂ ಪ್ರವೇಶಿಸಿದ್ದಾರೆ. ಆದರೆ ಯಾರಿಗೂ ಶಿಕ್ಷೆಯಾಗಿಲ್ಲ.

ಕ್ಷಮಾಧಾನ ನೀಡುವಂತೆ ರಾಷ್ಟ್ರಪತಿಗೆ ಮೊರೆಯಿಡುವ ಪರಿಸ್ಥಿತಿಯೂ ಬಂದಿಲ್ಲ. ಪದೇ ಪದ ಸುಪ್ರೀಂಕೋರ್ಟ್ ಎದುರು ಗೋಗರೆಯುವ ದೈನೇಸಿತನವೂ ಎದುರಾಗಿಲ್ಲ. ಜತೆಗೆ 1989ರಿಂದ 1998ರ ನಡುವಿನ ಅವಧಿಯಲ್ಲಿ ಧನಂಜಯ್ ಚಟರ್ಜಿ, ದಾರಾಸಿಂಗ್ ಸೇರಿದಂತೆ ಸುಮಾರು 700 ಜನರಿಗೆ ಮರಣದಂಡನೆ ಶಿಕ್ಷೆ ವಿಧಿಸಿ ಬೆನ್ನು ತಟ್ಟಿಕೊಳ್ಳುತ್ತಿರುವ ನ್ಯಾಯಾಲಯಗಳಿಗೂ ಖಾಕಿ, ಖಾದಿ ಧರಿಸಿರುವ ಧನಂಜಯರನ್ನು ಶಿಕ್ಷಿಸಲು ಸಾಧ್ಯವಾಗಿಲ್ಲ.

ಈ ಮಾತು ತಪ್ಪಾ?

ಪ್ರಿಯದರ್ಶಿನಿ ಮಟ್ಟು ದಿಲ್ಲಿ ವಿಶ್ವವಿದ್ಯಾಲಯದಲ್ಲಿ ತೃತೀಯ ಕಾನೂನು ಪದವಿಯಲ್ಲಿ ವ್ಯಾಸಂಗ ಮಾಡುತ್ತಿದ್ದಳು. 1995ರಲ್ಲಿ ಸಂತೋಷ್ ಕುಮಾರ್ ಸಿಂಗ್ ಎಂಬ ನೀಚ ಹಿಂದೆ ಬಿದ್ದ. ಅರ್ಧ ರಾತ್ರಿಯಲ್ಲಿ ಮನೆಗೆ ಫೋನ್ ಮಾಡಿ ಬೆದರಿಸಲಾರಂಭಿಸಿದ. ಪ್ರೀತಿಸು ಎಂದು ಪೀಡಿಸಲಾರಂಭಿಸಿದ. ಈ ನಡುವೆ ಪ್ರಿಯದರ್ಶಿನಿಯ ಅಮ್ಮ ಹಾಸಿಗೆ ಹಿಡಿದು ಆಸ್ಪತ್ರೆ ಸೇರಿದರು. ಆದರೆ ಸಂತೋಷ್ ಕುಮಾರ್ ಸಿಂಗ್ ಆಸ್ಪತ್ರೆಗೂ ಆಗಮಿಸಿ ಕಿರುಕುಳ ಕೊಡಲಾರಂಭಿಸಿದ. ರೋಸಿಹೋದ ಪ್ರಿಯದರ್ಶಿನಿ ಪೊಲೀಸರಿಗೆ ದೂರು ನೀಡಿದಳು. ನೆಪಮಾತ್ರಕ್ಕೆ ಕ್ಷಮಾಪಣೆ ಕೇಳಿದ ಆತ ಪ್ರಕರಣಕ್ಕೆ ಇತಿಶ್ರೀ ಹೇಳಲು ಯತ್ನಿಸಿದ. ಆದರೆ ತನ್ನ ಕೊಳಕು ವರಸೆ ನಿಲ್ಲಿಸಲಿಲ್ಲ. ಪ್ರಿಯದರ್ಶಿನಿ ಪೊಲೀಸ್ ರಕ್ಷಣೆಯನ್ನು ಪಡೆದುಕೊಂಡರೂ ಕಾಟ ತಪ್ಪಲಿಲ್ಲ.

ಈ ಮಧ್ಯೆ 1996, ಜನವರಿ 23ರಂದು ಸಂಧಾನದ ನೆಪ ಹೇಳಿದ ಸಂತೋಷ್ ಕುಮಾರ್ ಸಿಂಗ್, ಯಾರೂ ಇಲ್ಲದ ವೇಳೆ ಪ್ರಿಯದರ್ಶಿನಿ ವಾಸವಾಗಿದ್ದ ಅಪಾರ್ಟ್‌ಮೆಂಟ್ ಹೊಕ್ಕಿದ. ಆದರೆ ನಡೆದಿದ್ದು ಅತ್ಯಾಚಾರ. ಸಾಲದೆಂಬಂತೆ 19 ಬಾರಿ ಇರಿದು ಕೊಲೆಗೈದ. ಪೊಲೀಸರ ಕೈಗೂ ಸಿಕ್ಕಿಬಿದ್ದ. ಬಲವಾದ ಸಾಕ್ಷ್ಯಾಧಾರವೂ ದೊರೆಯಿತು. ಆದರೆ ದಿಲ್ಲಿ ಪೊಲೀಸರು ತೂಕಡಿಸಲಾರಂಭಿಸಿದರು. ರೊಚ್ಚಿಗೆದ್ದ ಸಾರ್ವಜನಿಕರು ಪ್ರತಿಭಟನೆಗಿಳಿದರು. ಒತ್ತಡಕ್ಕೆ ಸಿಲುಕಿದ ಸರಕಾರ ಪ್ರಕರಣದ ವಿಚಾರಣೆಯನ್ನು ಸಿಬಿಐಗೆ ವಹಿಸಿತು. ಆದರೆ ಸಿಬಿಐ ಜನರ ವಿಶ್ವಾಸಕ್ಕೇ ಚೂರಿ ಹಾಕಿತು. ಅತ್ಯಾಚಾರಕ್ಕೆ ಬಲವಾದ ಸಾಕ್ಷ್ಯವನ್ನೊದಗಿಸಿದ್ದ ವೀರ್ಯದ ಕಲೆಯನ್ನು ಡಿಎನ್‌ಎ ಪರೀಕ್ಷೆಗೆಂದು ಹೈದರಾಬಾದ್‌ಗೆ ಕಳುಹಿಸಿದ ಸಿಬಿಐ, ತಪಾಸಣಾ ಕೇಂದ್ರದ ವಿಜ್ಞಾನಿಯನ್ನು ತನ್ನ ಬುಟ್ಟಿಗೆ ಹಾಕಿಕೊಂಡು ಸಾಕ್ಷ್ಯವನ್ನೇ ನಾಶಮಾಡಿತು. ಜತೆಗೆ ಪ್ರಮುಖ ಸಾಕ್ಷಿಯಾಗಿದ್ದ ಪ್ರಿಯದರ್ಶಿನಿಯ ಸಹಾಯಕ ವೀರೇಂದ್ರ ಪ್ರಸಾದ್‌ನನ್ನು ಕೋರ್ಟ್ ಮುಂದೆ ಹಾಜರುಪಡಿಸಲಿಲ್ಲ.

ಇಂತಹ ಘೋರ ಅನ್ಯಾಯ ಕಣ್ಣೆದುರಿಗೇ ನಡೆಯುತ್ತಿದ್ದರೂ ಹೆಚ್ಚುವರಿ ಸೆಷನ್ಸ್ ನ್ಯಾಯಾಧೀಶ ಜಿ.ಪಿ. ತರೇಜಾ ಅಸಹಾಯಕರಾಗಿ ಕುಳಿತಿದ್ದರು. ಸಿಬಿಐ ಮೇಲೆ ತೀವ್ರ ವಾಗ್ದಾಳಿ ಮಾಡುವುದನ್ನು ಬಿಟ್ಟರೆ ಬೇರೆ ಮಾರ್ಗವೇ ಇರಲಿಲ್ಲ. 449 ಪುಟಗಳ ತಮ್ಮ ತೀರ್ಪಿನಲ್ಲಿ,

'Though I know, the defendant is guilty, my hands are tied. As a judge, I can only go by the evidence provided by the investigating agencies." ಎಂದು ಕಣ್ಣೀರೊರೆಸಿಕೊಂಡರು.

ಅತ್ಯಾಚಾರಿ, ಕೊಲೆಗಾರ ಎಂಬುದು ಜಗತ್ತಿಗೆ ಗೊತ್ತಿದ್ದರೂ ಸಂತೋಷ್ ಕುಮಾರ್ ಸಿಂಗ್ ದೋಷಮುಕ್ತಿಗೊಂಡ. ಏಕೆಂದರೆ ಆತ ಜೆ.ಪಿ. ಸಿಂಗ್ ಎಂಬ ಐಪಿಎಸ್ ಅಧಿಕಾರಿಯ ಮಗ! ತನ್ನ ಮಗ ಪ್ರಿಯದರ್ಶಿನಿಯ ಮಾನಭಂಗ ಮಾಡಿದಾಗ ಜೆ.ಪಿ. ಸಿಂಗ್, ಪಾಂಡಿಚೆರಿಯ ಪೊಲೀಸ್ ಮಹಾನಿರ್ದೇಶಕನಾಗಿದ್ದ. ಇಂತಹ ಪ್ರಭಾವದಿಂದಲೇ, ಸಾಕ್ಷ್ಯವನ್ನು ನಾಶಪಡಿಸಲು ಸಾಧ್ಯವಾಯಿತು. ಕಾನೂನಿನ ಕಣ್ಣಿಗೇ ಮಣ್ಣೆರಚಲಾಯಿತು. ಗಾಯದ ಮೇಲೆ ಬರೆ ಎಳೆದಂತೆ, ಆಗಿನ ಸಿಬಿಐ ನಿರ್ದೇಶಕ ಆರ್.ಕೆ. ರಾಘವನ್ ಮತ್ತು ರಾಜೀವ್ ಗಾಂಧಿ ಹತ್ಯೆ ಪ್ರಕರಣದ ತನಿಖೆ ನಡೆಸಿದ ಮಾಜಿ ನಿರ್ದೇಶಕ ಡಾ. ಕಾರ್ತಿಕೇಯನ್ ಅವರಂತಹ ಪ್ರತಿಷ್ಠಿತ ವ್ಯಕ್ತಿಗಳೂ ನಾಚಿಕೆ ಬಿಟ್ಟು ಸಿಬಿಐ ಅನ್ನು ಸಮರ್ಥಿಸಿಕೊಂಡರು! ಒಂದು ವೇಳೆ ಧನಂಜಯ್ ಚಟರ್ಜಿ, ಜೆ.ಪಿ. ಸಿಂಗ್ ಮಗನಾಗಿದ್ದರೆ ಬಹುಶಃ ಕುಣಿಕೆಗೆ ತಲೆಕೊಡುವ ಪ್ರಸಂಗ ಬರುತ್ತಿರಲಿಲ್ಲ. ಒಬ್ಬ ಪೊಲೀಸ್ ಅಧಿಕಾರಿಯೇ ಇಷ್ಟೆಲ್ಲಾ ಆಟವಾಡುತ್ತಾನೆಂದರೆ, ಇಡೀ ಪೊಲೀಸ್ ಪಡೆಗಳ ಲಂಗೂಲಗಾಮು ಹಿಡಿದಿರುವ ರಾಜ ಕಾರಣಗಳು ಸುಮ್ಮನಿರುತ್ತಾರೆಯೇ?

ನತಾಶಾ ಸಿಂಗ್!

ಆಕೆಯ ಅಮ್ಮ ಜೋರ್ಡಾನಿನಾಕೆ. ಅಪ್ಪ ಭಾರತೀಯ. ದಿಲ್ಲಿಯ ಸೈಂಟ್ ಸ್ಟೀಫನ್ಸ್ ಕಾಲೇಜಿನಲ್ಲಿ ಓದುತ್ತಿದ್ದ ನತಾಶಾ ಮಾಡೆಲಿಂಗ್ ಮತ್ತು ಫೋಟೊಗ್ರಫಿಯಲ್ಲಿ ತನ್ನನ್ನು ತೊಡಗಿಸಿಕೊಂಡಿದ್ದಳು. ಜಗತ್ ಸಿಂಗ್‌ನನ್ನು ಮದುವೆಯಾಗಿದ್ದೇ ಆಕೆ ಮಾಡಿದ ಘನ ಕಾರ್ಯ. ಪ್ರಾರಂಭದಲ್ಲಿ ಎಲ್ಲವೂ ಸರಿಯಾಗಿಯೇ ಇತ್ತು. ಆದರೆ ಬರಬರುತ್ತಾ ಸಂಬಂಧ ಹಳಸತೊಡಗಿತು. ವಿಚ್ಛೇದನದ ಹಂತವನ್ನೂ ತಲುಪಿತು. ಆದರೆ ವಿಚ್ಛೇದನದ ನಂತರ ತಮ್ಮ ಇಬ್ಬರು ಮಕ್ಕಳ ಮೇಲೆ ಜಗತ್ ಮತ್ತು ನತಾಶಾ ಹಕ್ಕು ಪ್ರತಿಪಾದಿಸತೊಡಗಿದರು. ವಿವಾದ ನ್ಯಾಯಾಲಯದ ಮೆಟ್ಟಿಲೇರಿತು. ಪೊಲೀಸ್ ಠಾಣೆಯಲ್ಲಿ ದೂರೂ ದಾಖಲಾಯಿತು. ಈ ಮಧ್ಯೆ ಹೊಸ ಬಾಯ್ ಫ್ರೆಂಡ್ ಜತೆ ಹೋಗುತ್ತಿದ್ದ ನತಾಶಾಳ ಮೇಲೆ ಜಗತ್ ಸಿಂಗ್ ಸಾರ್ವಜನಿಕರೆದುರೇ ಹಲ್ಲೆ ಮಾಡಿದ. ಕೊಲೆ ಬೆದರಿಕೆಯನ್ನೂ ಹಾಕಿದ.

2002, ಮಾರ್ಚ್ 20ರಂದು ಕೊಲೆಯೂ ಆದಳು. ದಿಲ್ಲಿಯ ಹೋಟೆಲೊಂದರಲ್ಲಿ ತಂಗಿದ್ದ ಆಕೆ ಕಿಟಕಿಯಿಂದ ಕೆಳಕ್ಕೆ ಹಾರಿ ಆತ್ಮಹತ್ಯೆ ಮಾಡಿಕೊಂಡಿದ್ದಾಳೆಂದು ಕಥೆ ಕಟ್ಟಿದರು. ಆದರೆ ಆಕೆಯನ್ನು ಕೆಳಕ್ಕೆ ತಳ್ಳಲಾಗಿದೆ ಎಂಬ ಬಲವಾದ ಅಭಿಪ್ರಾಯ ಇನ್ನೂ ಇದೆ. ಈ ಬಗ್ಗೆ ತನಿಖೆಗೆ ಆದೇಶವನ್ನೇನೋ ನೀಡಲಾಯಿತು. ಆದರೆ ಆತ್ಮಹತ್ಯೆ ಎಂದು ಷರಾ ಬರೆಯುವುದನ್ನು ತಪ್ಪಿಸಲು ಬಹುಶಃ ಯಾರಿಂದಲೂ ಸಾಧ್ಯವಿಲ್ಲ. ಎಷ್ಟೇ ಆಗಲಿ, ಧನಂಜಯ್‌ನಂತೆ ಜಗತ್ ಸಾಮಾನ್ಯ

ವ್ಯಕ್ತಿಯಲ್ಲ, ಅನಕ್ಷರಸ್ಥನೂ ಅಲ್ಲ. ಎಐಸಿಸಿ ಸದಸ್ಯ, ಸೋನಿಯಾ ಆಪ್ತ ಮತ್ತು ಹಾಲಿ ವಿದೇಶಾಂಗ ಸಚಿವ ನಟವರ್ ಸಿಂಗ್ ಮಗ!

ಖ್ಯಾತ ಬಾಡ್ಮಿಂಟನ್ ಆಟಗಾರ ಸಯ್ಯದ್ ಮೋದಿ ಕಾಮನ್‌ವೆಲ್ತ್ ಕ್ರೀಡಾಕೂಟದಲ್ಲಿ ಚಿನ್ನ ಗೆದ್ದು ತ್ರಿವರ್ಣ ಧ್ವಜವನ್ನು ಹಾರಿಸಿ ಬಂದಿದ್ದ. ಜತೆಗೆ ದೇಶದ ನಂಬರ್ 1 ಬಾಡ್ಮಿಂಟನ್ ಆಟಗಾರ ಎಂಬ ಹೆಗ್ಗಳಿಕೆಯನ್ನೂ ಪಡೆದಿದ್ದ. ಆದರೆ 1981ರಲ್ಲಿ ಸಯ್ಯದ್ ಮೋದಿಯ ಕೊಲೆಯಾಯಿತು. ಆತನ ಪತ್ನಿ ಅಮಿತಾ ಮೋದಿಯನ್ನು ಸಂಜಯ್ ಸಿಂಗ್ ಎಂಬಾತ ವಿವಾಹವಾದ. ಅಮಿತಾಳ ಮೇಲೆ ಕಣ್ಣಿಟ್ಟಿದ್ದ ಸಂಜಯ್‌ನೇ ಸಯ್ಯದ್ ಮೋದಿಯನ್ನು ಕೊಂದಿದ್ದು ಎಂಬುದನ್ನು ಬಿಡಿಸಿ ಹೇಳುವ ಅಗತ್ಯವಿಲ್ಲ. ಆದರೂ ಸಂಜಯ್ ಸಿಂಗ್ ಇಂದು ಅಮಿತಾಳ ಜತೆ ಸರಸವಾಡಿಕೊಂಡು ಹಾಯಾಗಿದ್ದಾನೆ. ಜತೆಗೆ ಸಮಾಜವಾದಿ ಪಕ್ಷದ ಸಂಸದನಾಗಿ ಪಾರ್ಲಿಮೆಂಟನ್ನೂ ಪ್ರವೇಶಿಸಿದ್ದಾನೆ. ಏಕೆಂದರೆ ಆತ ಅಮೇಠಿಯ ರಾಜ. ಜತೆಗೆ ಮಾಜಿ ಪ್ರಧಾನಿ ವಿ.ಪಿ. ಸಿಂಗ್ ಸಂಬಂಧಿಕ.

1999, ಏಪ್ರಿಲ್ 30ರ ರಾತ್ರಿ ಸೋಷಿಯಲೈಟ್ ಬೀನಾ ರಮಣಿ ದಿಲ್ಲಿಯಲ್ಲಿರುವ ತಮ್ಮ 'ಟ್ಯಾಮರಿಂಡ್ ಕೋರ್ಟ್' ರೆಸ್ಟೋರೆಂಟ್‌ನಲ್ಲಿ ಪಾರ್ಟಿಯೊಂದನ್ನು ಆಯೋಜನೆ ಮಾಡಿದ್ದರು. ಅತಿಥಿಗಳ ಆಕರ್ಷಣೆಗೆಂದು ಖ್ಯಾತ ಮಾಡೆಲ್ ಜೆಸ್ಸಿಕಾ ಲಾಲ್‌ಗೆ ಗ್ಲಾಸ್‌ಗೆ 'ಗುಂಡು' ಹಾಕಿ ಕೊಡುವ ಕಾರ್ಯ ವಹಿಸಲಾಗಿತ್ತು. ಇನ್ನೇನು ಪಾರ್ಟಿಗೆ ತೆರೆ ಬೀಳಬೇಕು ಅಷ್ಟರಲ್ಲಿ ಸಿದ್ಧಾರ್ಥ ವಸಿಷ್ಠ ಅಲಿಯಾಸ್ ಮನು ಶರ್ಮಾ ಆಗಮಿಸಿದ. ವಿಸ್ಕಿ ಕೇಳಿದ. ಆದರೆ ಸಮಯ ಮೀರಿದ್ದ ಕಾರಣ, ಜೆಸ್ಸಿಕಾ ಲಾಲ್ ಇಲ್ಲವೆಂದಳು. ಸಿಟ್ಟಿಗೆದ್ದ ಮನು ಶರ್ಮಾ ತನ್ನ ಪಾಯಿಂಟ್ 22 ಪಿಸ್ತೂಲ್ ತೆಗೆದು ಆಕೆಯನ್ನು ಕೊಂದೇ ಹಾಕಿದ. ಅದೂ ಎಲ್ಲ ಅತಿಥಿಗಳ ಎದುರು! ಆದರೆ ಯಾವ ಕೋರ್ಟೂ ಮನು ಶರ್ಮಾನಿಗೆ ಮರಣ ದಂಡನೆ ವಿಧಿಸಿಲ್ಲ. ಪ್ರತ್ಯಕ್ಷದರ್ಶಿಯಾಗಿದ್ದ ಮತ್ತೊಬ್ಬ ಮಾಡೆಲ್ ಮತ್ತು ನಟ ಶಯಾನ್ ಮುನ್ಷಿ ಕೋರ್ಟ್ ಮುಂದೆ ತನಗೇನೂ ಗೊತ್ತೇ ಇಲ್ಲ ಎಂದ. ಏಕೆಂದರೆ ಮನು ಶರ್ಮಾ ಮಾಜಿ ಕಾಂಗ್ರೆಸ್ ಮಂತ್ರಿ ವಿನೋದ್ ಶರ್ಮಾ ಅವರ ಪುತ್ರ ಮತ್ತು ಮಾಜಿ ರಾಷ್ಟ್ರಪತಿ ಶಂಕರ್ ದಯಾಳ್ ಶರ್ಮಾ ಅವರ ಮೊಮ್ಮಗ!

ಅಪರಾಧಗಳು ಹೆಚ್ಚಾದಾಗ ಸಮಾಜದ ಸ್ವಾಸ್ಥ್ಯವನ್ನು ಕಾಪಾಡಲು ಮರಣದಂಡನೆಯಂತಹ ಕಠಿಣ ಶಿಕ್ಷೆಯನ್ನು ವಿಧಿಸಲೇಬೇಕಾಗುತ್ತದೆ. ಸ್ವಾತಂತ್ರ್ಯಾನಂತರ ನಾಥೂರಾಮ್ ಗೋಡ್ಸೆಯಿಂದ ಪ್ರಾರಂಭವಾಗಿ ರಂಗ, ಬಿಲ್ಲ, ಆಟೊ ಶಂಕರ್, ಧನಂಜಯ್ ಚಟರ್ಜಿವರೆಗೂ 55 ಜನರನ್ನು ನೇಣಗೇರಿಸಿದ್ದೇವೆ. ಆದರೆ ಅಪ್ರಾಪ್ತ ಬಾಲಕಿಯ ಮೇಲೆ ಅತ್ಯಾಚಾರವೆಸಗಿದ ಆರೋಪ ಹೊಂದಿದ್ದರೂ ಕೇಂದ್ರದಲ್ಲಿ ಸಚಿವನಾಗಿರುವ ಮೊಹಮದ್ ತಸ್ಲಿಮುದ್ದೀನ್, ಸಂಸದ ಮೊಹಮದ್ ಶಹಾಬುದ್ದೀನ್, ಡಿ.ಪಿ. ಯಾದವ್, ಜಗತ್ ಸಿಂಗ್, ಮನು ಶರ್ಮಾ ಮತ್ತು ನಮ್ಮವಳೇ ಆದ ಸೌಮ್ಯಾ ಭಟ್‌ಳನ್ನು ಹಾಡಹಗಲೇ ಕೊಂದ ಪುತ್ತೂರಿನ ಅಶ್ರಫ್‌ನನ್ನು ಗಲ್ಲಿಗೇರಿಸುವವರಾರು?

ನೀವು ವಿಜಯ ಕರ್ನಾಟಕದಲ್ಲಿ ಪ್ರತಿ ಶನಿವಾರ ಬರೆಯುವ 'ಬೆತ್ತಲೆ ಜಗತ್ತು' ಅಂಕಣ ನಿಜಕ್ಕೂ ಅದ್ಭುತವಾದದ್ದು. ನಿಮ್ಮ ಎದೆಗಾರಿಕೆಗೆ ಮೆಚ್ಚಲೇ ಬೇಕು. ನೀವು ಬರೆದ ಪ್ರತಿಯೊಂದು ಅಂಕಣವನ್ನೂ ನಾನು ಕೂಡಿಸಿ, ಝೆರಾಕ್ಸ್ ಮಾಡಿ ನನ್ನ ಸ್ನೇಹಿತರಿಗೆ ಹಂಚುತ್ತಿದ್ದೇನೆ. ನಿಮ್ಮ ಅಂಕಣಗಳು ಹೀಗೆಯೇ ಮೂಡಿಬರಲಿ, ನಿಮ್ಮ ಬರವಣಿಗೆ ಜನರ ಕಣ್ತೆರೆಸಲಿ.

ನೀಲಕಂಠ, ಮಹೇಶ, ಕಲ್ಪನಾ
ಸುನೀಲ್, ಗಣಪತಿ
ಅಂಕೋಲಾ

# 6 ಭಾವನೆಗಳಿಗೆ ಬೆಂಕಿಯಿಟ್ಟು ನೀನೇಕೆ ಮೌನಿಯಾದೆ?



ಇದನ್ನು ಹುಚ್ಚಾಟ, ಅತಿರೇಕ, ಮೂರ್ಖತನ.... ಏನೂ ಬೇಕಾದರೂ ಕರೆಯಿರಿ. ಆದರೆ ಆ ಹುಚ್ಚಾಟಿಕೆಯ ಹಿಂದೆಯೂ ಒಂದು ಧ್ವನಿಯಿತ್ತು. ಸಂದೇಶವಿತ್ತು. ಮುಂದಾಗುವ ಅಪಾಯದ ಸೂಚನೆಯಿತ್ತು. ಆದರೆ ಪ್ರಧಾನಿ ಸ್ಥಾನದಲ್ಲಿ ಕುಳಿತಿದ್ದ ವಿಶ್ವನಾಥ್ ಪ್ರತಾಪ್ ಸಿಂಗ್‌ಗೆ ಅರಿತುಕೊಳ್ಳುವ ವ್ಯವಧಾನವಾಗಲಿ, ತಾಳ್ಮೆಯಾಗಲಿ ಇರಲಿಲ್ಲ.

ಏನಿದು?

1978, ಡಿಸೆಂಬರ್‌ನಲ್ಲಿ ಪ್ರಧಾನಿ ಮೊರಾರ್ಜಿ ದೇಸಾಯಿ ಅವರು ಹಿಂದುಳಿದ ವರ್ಗದ ಆಯೋಗವನ್ನು ರಚಿಸುವ ಘೋಷಣೆ ಮಾಡಿದರು. ಅದಕ್ಕನುಗುಣವಾಗಿ ಬಿಂದೇಶ್ವರಿ ಪ್ರಸಾದ್ ಮಂಡಲ್ ನೇತೃತ್ವದಲ್ಲಿ ಐವರು ಸದಸ್ಯರ ಆಯೋಗವೊಂದು ನೇಮಕಗೊಂಡಿತ್ತು. ಅದೇ ಮಂಡಲ್ ಆಯೋಗ. 1980ರಲ್ಲಿ ಆಯೋಗ ತನ್ನ ವರದಿ ಸಲ್ಲಿಸಿತು. ಜಾತಿಯನ್ನೇ ಮಾನದಂಡವಾಗಿಸಿಕೊಂಡಿದ್ದ ಅದು, ಕೇಂದ್ರ ಸರಕಾರದ ಉದ್ಯೋಗಗಳಲ್ಲಿ ಹಿಂದುಳಿದ ವರ್ಗಗಳಿಗೆ ಶೇ.27ರಷ್ಟು ಮೀಸಲಾತಿ ನೀಡಬೇಕೆಂದು ಶಿಫಾರಸು ಮಾಡಿತು. ಆದರೆ ಆ ವೇಳೆಗಾಗಲೇ ಮೊರಾರ್ಜಿ ದೇಸಾಯಿ ಮತ್ತು ಚೌಧರಿ ಚರಣ್ ಸಿಂಗ್ ಅವರ ಸರಕಾರಗಳು ಪತನಗೊಂಡು ಇಂದಿರಾ ಅಧಿಕಾರಕ್ಕೇರಿದ್ದರು. ಮಂಡಲ್ ವರದಿಯಿಂದ ಭುಗಿಲೇಳಬಹುದಾದ ವಿವಾದ ಮತ್ತು ಅಪಾಯದ ಬಗ್ಗೆ ಇಂದಿರಾಗೆ ಅರಿವಿತ್ತು. ವರದಿ ಮೂಲೆ ಸೇರಿತು.

ಆದರೆ ಅವಕಾಶವಾದಿ ರಾಜಕಾರಣದಿಂದಲೇ ಮೇಲೆ ಬಂದ ವಿಶ್ವನಾಥ್ ಪ್ರತಾಪ್ ಸಿಂಗ್, 1989ರಲ್ಲಿ ಪ್ರಧಾನಿಯಾದ ಕೂಡಲೇ ಧೂಳಿನೊಳಗೆ ಹೂತುಹೋಗಿದ್ದ ವರದಿಯನ್ನು ಮೇಲೆತ್ತಿದರು. ಅಲ್ಲಿಗೆ ವಿವಾದವೂ ಸೃಷ್ಟಿಯಾಯಿತು. ಪ್ರತಿಭೆಗೆ ಬದಲು ಜಾತಿಗೆ ಮಣೆ ಹಾಕಿದ ವರದಿಯ ಅನುಷ್ಠಾನಕ್ಕೆ ತೀವ್ರ ವಿರೋಧ ವ್ಯಕ್ತವಾಯಿತು. ಇಡೀ ದೇಶಾದ್ಯಂತ ವಿದ್ಯಾರ್ಥಿಗಳು ಪ್ರತಿಭಟನೆಗಿಳಿದರು. 1990ರಲ್ಲಿ ದಿಲ್ಲಿಗೆ ದಿಲ್ಲಿಯೇ ಬೀದಿಗಿಳಿಯಿತು. ವಿವಾದ ಸ್ಫೋಟಗೊಂಡಿತು. ಆ ಸ್ಫೋಟದಿಂದ ಸಿಡಿದ ಕಿಡಿಯೇ ರಾಜೀವ್ ಗೋಸ್ವಾಮಿ!

ಆಗ ರಾಜೀವ್ ಗೋಸ್ವಾಮಿಗೆ ಕೇವಲ 20 ವರ್ಷ. ದಿಲ್ಲಿಯ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದ ದೇಶಬಂಧು ಕಾಲೇಜಿನಲ್ಲಿ ಕಾಮರ್ಸ್ ವಿದ್ಯಾರ್ಥಿಯಾಗಿದ್ದ. ಅಂದು 1990, ಸೆಪ್ಟೆಂಬರ್ 19. ಮಂಡಲ್ ವರದಿಯ ಅನುಷ್ಠಾನದ ವಿರುದ್ಧ ಧ್ವನಿಯೆತ್ತಿದ ರಾಜೀವ್ ಗೋಸ್ವಾಮಿ, ತನ್ನ ಬೆಂಬಲಿಗರು ಮತ್ತು ಪ್ರತಿಭಟನಾಕಾರರ ಸಮ್ಮುಖದಲ್ಲೇ ಸೀಮೆಎಣ್ಣೆ ಸುರಿದುಕೊಂಡು ಮೈಗೆ ಬೆಂಕಿ ಹಚ್ಚಿಕೊಂಡ. ಮರುದಿನ ಇಡೀ ಚಿತ್ರಣವೇ ಬದಲಾಯಿತು. ಸ್ವಾತಂತ್ರ್ಯಾನಂತರ ದೇಶ ಕಂಡ ಅತ್ಯಂತ ನಿರ್ಣಾಯಕ ಕ್ಷಣವೂ ಅದಾಗಿತ್ತು. ಇಡೀ ದೇಶವೇ ದಿಗ್ಭ್ರಮೆಗೊಂಡಿತು. ರಾತ್ರಿ ಕಳೆದು ಬೆಳಗಾಗುವಷ್ಟರಲ್ಲಿ ಲಕ್ಷಾಂತರ ನಗರವಾಸಿ ವಿದ್ಯಾರ್ಥಿಗಳು ಹಾಗೂ ನಿರುದ್ಯೋಗಿಗಳ ಧ್ವನಿಯಾದ ರಾಜೀವ್ ಗೋಸ್ವಾಮಿ. ಮೀಸಲಾತಿಯ ವಿರುದ್ಧ

ಕುದಿಯುತ್ತಿದ್ದ ಸುಪ್ತ ಭಾವನೆಗಳಿಗೆ ಅಭಿವ್ಯಕ್ತಿಯಾದ. ಮಂಡಲ್ ಆಯೋಗದ ವರದಿಯ ಬಗ್ಗೆ ಅರಿವಿಲ್ಲದವರೂ ರಾಜೀವ್ ಬೆಂಬಲಕ್ಕೆ ನಿಂತರು. ಏಕೆಂದರೆ ಆ ತೀವ್ರತೆ ಹಾಗಿತ್ತು.

ಇತ್ತ ಶೇ. 85ರಷ್ಟು ಸುಟ್ಟಗಾಯಕ್ಕೊಳಗಾಗಿದ್ದ ರಾಜೀವ್ ಗೋಸ್ವಾಮಿಯನ್ನು ದಿಲ್ಲಿಯ ಸಫ್ದರ್‌ಜಂಗ್ ಆಸ್ಪತ್ರೆಗೆ ಸೇರಿಸಲಾಯಿತು. ದಿಲ್ಲಿ ಮಾತ್ರವಲ್ಲ, ದೇಶದ ಹಲವಾರು ಭಾಗಗಳಲ್ಲಿ ಕರ್ಫ್ಯೂ ವಿಧಿಸಲಾಯಿತು. ಏಕೆಂದರೆ ಪ್ರತಿಭಟನೆ ಉಗ್ರ ಸ್ವರೂಪಕ್ಕೆ ತಿರುಗಿತು. ಅದುವರೆಗೂ ಪ್ರತಿಭಟನೆಯನ್ನು, ಸುಧಾರಣೆಗಳನ್ನು ತಡೆಯಲು ಯತ್ನಿಸಲಾಗುತ್ತಿರುವ ಹುನ್ನಾರ ಎಂಬ ಭಾವನೆಯಿಂದ ಕಾಣಲಾಗುತ್ತಿತ್ತು. ಯಾರೂ ಕೂಡ ಪ್ರತಿಭಟನಾಕಾರರ ಪರ ಮಾತನಾಡುತ್ತಿರಲಿಲ್ಲ. ಹಿಂದುಳಿದ ವರ್ಗಗಳ ಮತ ಕೈತಪ್ಪಿ ಹೋಗುತ್ತದೆಂಬ ಭಯ ಕಾಡುತ್ತಿತ್ತು. ಆದರೆ ರಾಜೀವ್ ಬೆಂಕಿ ಹಚ್ಚಿಕೊಂಡಿದ್ದು ಮೈಗೆ ಆದರೂ, ಲಕ್ಷಾಂತರ ವಿದ್ಯಾರ್ಥಿಗಳ ಭಾವನೆಗೇ ಬೆಂಕಿಬಿದ್ದಿತ್ತು. ಮೀಸಲಾತಿಯ ವಿರುದ್ಧ ಧ್ವನಿಯೆತ್ತಿದರು. 12 ವರ್ಷದ ಚೇತನ್ ಗೌತಮ್ ಕೂಡ ಮೈಗೆ ಬೆಂಕಿ ಹಚ್ಚಿಕೊಂಡ. ಚಂಡೀಗಢದಲ್ಲಿ 10ನೇ ತರಗತಿ ವಿದ್ಯಾರ್ಥಿನಿಯೊಬ್ಬಳು ಆತ್ಮಹತ್ಯೆ ಮಾಡಿಕೊಂಡಳು. ಸ್ವಾತಂತ್ರ್ಯಾನಂತರ ಮೊಟ್ಟಮೊದಲ ಬಾರಿಗೆ ಇಡೀ ದೇಶ ಧ್ರುವೀಕರಣಗೊಂಡಿತು. ಈ ಧ್ರುವೀಕರಣ ಯಾವ ಮಟ್ಟಕ್ಕೆ ತಲುಪಿತೆಂದರೆ ವಿ.ಪಿ. ಸಿಂಗ್ ಅವರ 'ಮಂಡಲ'ವನ್ನು ಹತ್ತಿಕ್ಕುವ ಸಲುವಾಗಿ ಬಿಜೆಪಿ 'ಕಮಂಡಲ'ವನ್ನು (ರಾಮ ಮಂದಿರ) ಕೈಗೆತ್ತಿಕೊಂಡಿತು.ಇದೇನೇ ಇದ್ದರೂ, ಮತಗಳ ಮೇಲೆ ಕಣ್ಣಿಟ್ಟ ರಾಜಕಾರಣಿಗಳು ಪ್ರತಿಭಟನೆಯ ರೂಪದಲ್ಲಿ ವ್ಯಕ್ತವಾಗಿದ್ದ ಯುವ ಜನತೆಯ ಆಶಯಕ್ಕೆ ಕಿಮ್ಮತ್ತಿನ ಬೆಲೆಯನ್ನೂ ನೀಡಲಿಲ್ಲ. 1991ರಲ್ಲಿ ವಿ.ಪಿ. ಸಿಂಗ್ ಮಂಡಲ್ ಆಯೋಗದ ಶಿಫಾರಸುಗಳನ್ನು ಸ್ವೀಕಾರ ಮಾಡಿದರು. ದುರದೃಷ್ಟವಶಾತ್ ಚಂದ್ರಶೇಖರ್ ಪತನದ ನಂತರ ಅಧಿಕಾರಕ್ಕೆ ಬಂದ ಪಿ.ವಿ. ನರಸಿಂಹರಾವ್ ಸರಕಾರ, ಮಂಡಲ್ ಆಯೋಗದ ಶಿಫಾರಸುಗಳನ್ನು ಜಾರಿಗೊಳಿಸಿತು.

ಇತ್ತ ಆಸ್ಪತ್ರೆ ಸೇರಿದ್ದ ರಾಜೀವ್ ಗೋಸ್ವಾಮಿ ದೈಹಿಕ ಊನತೆಯಿಂದ ಹೊರಬರಲಾಗದೆ ಹೆಣಗತೊಡಗಿದ. ಜತೆಗೆ ನರಸಿಂಹರಾವ್ ನಿರ್ಧಾರದಿಂದಾಗಿ ಅವನ ಆಶಯಕ್ಕೂ ತಣ್ಣೀರೆರಚಿದಂತಾಗಿತ್ತು. ಆದರೂ ವಿದ್ಯಾರ್ಥಿಗಳ ವಿಶ್ವಾಸ ಗೆದ್ದಿದ್ದ. ಈ ವಿಶ್ವಾಸದ ಬಲದಿಂದಲೇ ಸ್ವತಂತ್ರ ಅಭ್ಯರ್ಥಿಯಾಗಿ 1991ರಲ್ಲಿ ದಿಲ್ಲಿ ವಿಶ್ವವಿದ್ಯಾಲಯದ ವಿದ್ಯಾರ್ಥಿ ಸಂಘದ ಪ್ರತಿಷ್ಠಿತ ಅಧ್ಯಕ್ಷ ಸ್ಥಾನಕ್ಕೆ ಆಯ್ಕೆಯಾದ. ಎನ್.ಎಸ್. ಯು.ಐ. ಮತ್ತು ಎಬಿವಿಪಿ ಅಭ್ಯರ್ಥಿಗಳನ್ನು ಸೋಲಿಸಿದ ಅಂತರ ಇದುವರೆಗೂ ದಾಖಲೆಯಾಗಿ ಉಳಿದಿದೆ.

ಇದೆಲ್ಲಾ ಕಳೆದು 14 ವರ್ಷಗಳಾಗಿವೆ. ರಾಜೀವ್ ಗೋಸ್ವಾಮಿ ಎಂಬ ಕಿಡಿಯನ್ನು ನೆನಪಿಸಿಕೊಳ್ಳಲು ಕಾರಣವಿಷ್ಟೆ. ಆ ಕಿಡಿ ಕಳೆದ ಮಂಗಳವಾರ ನಂದಿಹೋಗಿದೆ. 33ನೇ ವರ್ಷಕ್ಕೇ ಬದುಕಿಗೆ ವಿದಾಯ ಹೇಳಿದ್ದಾನೆ! ದಿಲ್ಲಿಯ ಬಾತ್ರಾ ಆಸ್ಪತ್ರೆಯಲ್ಲಿ ಕೊನೆಯುಸಿರೆಳೆದಿದ್ದಾನೆ. ಮೈಗೆ ಬೆಂಕಿಹಚ್ಚಿಕೊಂಡಿದ್ದು 14 ವರ್ಷಗಳ ಹಿಂದೆ ಆಗಿದ್ದರೂ, ಅದು ಈಗ ಆತನ ಜೀವ

ವನ್ನೇ ಬಲಿತೆಗೆದುಕೊಂಡಿದೆ. ಹೌದು, ಮೈಸುಟ್ಟುಕೊಂಡಾಗ ಪಿತ್ತಜನಕಾಂಗದ ಮೇಲಾದ ದುಷ್ಪರಿಣಾಮ ಹಾಗೂ ಮೂತ್ರಕೋಶದ ವೈಫಲ್ಯದಿಂದ ಫೆಬ್ರವರಿ 24 ರಂದು(2004) ರಾಜೀವ್ ಅಗಲಿದ್ದಾನೆ. ಜತೆಗೆ ನಾಲ್ಕು ವರ್ಷದ ಪುತ್ರಿ ಸಿಮ್ರಾನ್ ಮತ್ತು ಒಂದು ವರ್ಷದ ಆದಿತ್ಯನನ್ನು ತಬ್ಬಲಿಗಳಾಗಿಸಿದ್ದಾನೆ.

ಆದರೆ ಅವಕಾಶವಾದಿತನಕ್ಕೆ ಕೊನೆಯಿದೆಯೇ? ಮೊನ್ನೆ ದಕ್ಷಿಣ ದಿಲ್ಲಿಯ ಕಾಲ್ಕಾಜಿ ಶವಸಂಸ್ಕಾರ ಕೇಂದ್ರದಲ್ಲಿ ರಾಜೀವ್ ಗೋಸ್ವಾಮಿ ಚಿತೆಗೆ ಬೆಂಕಿಯಿಟ್ಟಾಗ ಬಿಕ್ಕಳಿಸಿದ್ದು, ಅತ್ತಿದ್ದು ಆತನ ತಂದೆ ಮದನ್ ಗೋಸ್ವಾಮಿ, ತಾಯಿ ನಂದ್ರಾಣಿ, ಪತ್ನಿ ಆರತಿ ಮತ್ತು ದೇಶಬಂಧು ಕಾಲೇಜಿನ ಕೆಲ ಮಿತ್ರರು. ಅಂದು ಮೈಸುಟ್ಟು ಕೊಂಡಾಗ ಆಸ್ಪತ್ರೆಗೆ ಬಂದು 'ತಾವು ವಿದ್ಯಾರ್ಥಿ ಗಳ ಪರ' ಎಂದು ಪೋಸು ಕೊಟ್ಟು ಹೋಗಿದ್ದ ರಾಜಕಾರಣಿಗಳು ಎಲ್ಲಿ ಹೋದರು? ಯಾತ್ರಾ ಸ್ಥಳವೆಂಬಂತೆ ಆಸ್ಪತ್ರೆಗೆ ಆಗಮಿಸುತ್ತಿದ್ದರು. ಆತ ಸತ್ತಾಗ ಸಂತಾಪ ಸೂಚಿಸುವ ಸೌಜನ್ಯವನ್ನೂ ನಮ್ಮ ಕೃತಘ್ನ ರಾಜಕಾರಣಿಗಳು ತೋರಲಿಲ್ಲ. ಅಷ್ಟೇಕೆ, ರಾಜೀವ್ ಯಾರಪರ ಹೋರಾಡಿದ ನೋ ಆ ವಿದ್ಯಾರ್ಥಿಗಳೂ ನೆನಪಿಸಿಕೊಳ್ಳಲಿಲ್ಲ.

ಅವಕಾಶವಾದಿಗಳೇ ಇರುವ ಈ ಸಮಾಜದಲ್ಲಿ ರಾಜೀವ್ ಗೋಸ್ವಾಮಿ ತನ್ನ ಹೋರಾಟ ದಿಂದ ಮಾತ್ರವಲ್ಲ, ನಡತೆಯಿಂದಲೂ ಆದರ್ಶ ವ್ಯಕ್ತಿ. ಏಕೆಂದರೆ ಆತ ಮನಸ್ಸು ಮಾಡಿದ್ದರೆ ರಾಜಕೀಯಕ್ಕಿಳಿಯಬಹುದಿತ್ತು. ಜನಬೆಂಬಲ ಅವನಿಗಿತ್ತು. ಆದರೆ ರಾಜೀವ್ ಅವಕಾಶವಾದಿ ಯಾಗಿರಲಿಲ್ಲ. ಕಾಮರ್ಸ್ ಪದವಿ ಪಡೆದು ತನ್ನದೆ ವ್ಯಾಪಾರ ವಹಿವಾಟು ಆರಂಭಿಸಿದ. ಕೈಸುಟ್ಟುಕೊಂಡ. 1997ರಲ್ಲಿ ಆರತಿಯನ್ನು ವಿವಾಹವಾದ ಆತ, ನಿರುದ್ಯೋಗಿಯಾಗಿಯೇ ಕೊನೆಯುಸಿರೆಳೆದಿದ್ದಾನೆ.

ಇತ್ತ ಮಂಡಲ್ ವಿವಾದ ದೇಶವನ್ನೇ ಜಾತಿಯೆಂಬ ಕೂಪಕ್ಕೆ ಕೆಡವಿತು ಎಂದರೆ ನಂಬುತ್ತೀರಾ? ಮೀಸಲಾತಿ ನೀಡುವುದನ್ನು ಯಾರೂ ವಿರೋಧಿಸಲು ಸಾಧ್ಯವಿಲ್ಲ. ಆದರೆ ಜಾತಿಯನ್ನೇ ಮಾನದಂಡವಾಗಿಸಿಕೊಂಡಾಗ ಮೂಲ ಉದ್ದೇಶಕ್ಕೇ ಕೊಡಲಿಯೇಟು ಬೀಳುತ್ತದೆ. ಮಂಡಲ್ ಆಯೋಗ ಇಂತಹ ಹೊಡೆತವನ್ನೇ ನೀಡಿತು. ಏಕೆಂದರೆ ಜಾತಿ ಆಧಾರದ ಮೇಲೆ ಮೀಸಲಾತಿ ನೀಡುವುದು ಎಷ್ಟರಮಟ್ಟಿಗೆ ಸರಿ? ಬಡತನವೆಂಬುದು ಕೆಲವು ಜಾತಿಗಳಿಗೆ ಮಾತ್ರ ಸೀಮಿತವಾಗಿದೆಯೇ? ಅಂದ ಮೇಲೆ, ಕುಟುಂಬದ ಆದಾಯದ ಆಧಾರದ ಮೇಲೆ ಮೀಸಲಾತಿ ಸೌಲಭ್ಯವನ್ನೇಕೆ ಕಲ್ಪಿಸಬಾರದು? ಇಂತಹ ಅಪಾಯಗಳನ್ನು ಅರಿತು ಇಂದಿರಾಗಾಂಧಿ ಮಂಡಲ್ ವರದಿಯನ್ನು ತಿಪ್ಪೆಗೆ ಹಾಕಿದ್ದರು. ಆದರೆ ಅದೇ ವರದಿಯನ್ನು ದಾಳವಾಗಿಸಿಕೊಂಡ ವಿ.ಪಿ.ಸಿಂಗ್ ಇಡೀ ದೇಶವೇ ಜಾತಿಯೆಂಬ ಕಂದಕಕ್ಕೆ ಬೀಳುವಂತೆ ಮಾಡಿದರು. ಅವರು ಪ್ರಧಾನಿಯಾದ ನಂತರ ಜಾತಿಗಳು ರಾರಾಜಿಸತೊಡಗಿದವು. ಇಂದು ಲೋಕಸಭೆಯಲ್ಲಿ ಬಹುಮತವನ್ನು ನಿರ್ಧರಿಸುವ ಉತ್ತರ ಪ್ರದೇಶ, ಮಧ್ಯಪ್ರದೇಶ, ರಾಜಸ್ಥಾನ ಮತ್ತು ಬಿಹಾರದಂತಹ ರಾಜ್ಯಗಳಲ್ಲಿ

ಜಾತಿಗೆ ಮೊದಲ ಪ್ರಾಶಸ್ತ್ಯ. ಗೆಲುವು-ಸೋಲನ್ನು ನಿರ್ಧರಿಸುವ ನಿರ್ಣಾಯಕ ಅಂಶವೂ ಜಾತಿಯೇ. ಇದೆಲ್ಲ ವಿ.ಪಿ. ಸಿಂಗ್ ಕೊಡುಗೆ.

ಪರಿಸ್ಥಿತಿ ಯಾವ ಮಟ್ಟಕ್ಕೆ ತಲುಪಿದೆಯೆಂದರೆ ಸೇನಾಪಡೆ ಮತ್ತು ಖಾಸಗಿ ಕ್ಷೇತ್ರದಲ್ಲೂ ಮೀಸಲಾತಿ ನೀಡಬೇಕೆಂಬ ಧ್ವನಿ ಕೇಳುತ್ತಿದೆ. ರಣರಂಗದಲ್ಲಿ ವೈರಿಯೊಂದಿಗೆ ಹೋರಾಡುವ ಕೆಚ್ಚೆದೆ, ಎದೆಗಾರಿಕೆಯನ್ನು ಮೀಸಲಾತಿ ಸೌಲಭ್ಯ ಪಡೆದ ವ್ಯಕ್ತಿಯಿಂದ ನಿರೀಕ್ಷಿಸಲು ಸಾಧ್ಯವೇ? ಉದ್ಯೋಗ ಮಾತ್ರವಲ್ಲ. ಜಾತಿಯ ಆಧಾರದ ಮೇಲೆ ಮುಂಬಡ್ತಿ ನೀಡುವ ಪದ್ಧತಿಯೂ ನಮ್ಮಲ್ಲಿದೆ. ನ್ಯಾಯಾಂಗಕ್ಕೂ ಈ ಮೀಸಲಾತಿ ಜಾಡ್ಯ ಅಂಟಿದರೆ ಏನಾಗಬಹುದು? ಒಂದು ವೇಳೆ ಸುಪ್ರೀಂ ಕೋರ್ಟ್ ಹಸ್ತಕ್ಷೇಪ ಮಾಡಿ ಮೀಸಲಾತಿಯನ್ನು ಶೇ.50ಕ್ಕೆ ಸೀಮಿತಗೊಳಿಸದಿದ್ದರೆ ಇನ್ನಾವ ಅಧೋಗತಿ ಬರುತ್ತಿತ್ತೋ?

ಇಂತಹ ವ್ಯವಸ್ಥೆಯ ವಿರುದ್ಧ ಧ್ವನಿಯೆತ್ತಿದ ರಾಜೀವ್ ಗೋಸ್ವಾಮಿ ಹೋರಾಟ ಮುಂದುವರಿಸದೇ ಕೇವಲ ಸುಪ್ತ ಭಾವನೆಗಳಿಗೆ ಕಿಚ್ಚಿಟ್ಟು 'ಮೌನಿ'ಯಾಗಿದ್ದಾನೆ!

ನಿಮ್ಮ ಶೈಲಿ ಸರಳ ಹಾಗೂ ಬರವಣಿಗೆ ಉತ್ತಮ ವಾಗಿದೆ.

ಎಚ್.ಟಿ.ಎಸ್.
ಚಚಡಿ(ಸವದತ್ತಿ)



# 7 | ಹಿಂದೂ ರಾಷ್ಟ್ರದ ಕನಸು ಬಿಡಿ ಕನಿಷ್ಠ ಭಾರತವಾಗಿ ಉಳಿಸಿ ಕೊಡಿ!

ಓಲೈಕೆ ಯಾವ ಹಂತಕ್ಕೆ ತಲುಪಬಹುದೆಂಬ ಆತಂಕ ಕಾಡುತ್ತಿದೆ!

ಇನ್ನೈವತ್ತು ವರ್ಷಗಳ ಬಗ್ಗೆ ಯೋಚಿಸಿದಾಗಲಂತೂ ಈ ದೇಶ ಹಿಂದೂ ರಾಷ್ಟ್ರವಾಗುವುದನ್ನು ಬಿಡಿ, ಕನಿಷ್ಠ ಭಾರತವಾಗಿಯಾದರೂ ಉಳಿಯುತ್ತದೋ ಎಂಬ ಆತಂಕ ಖಂಡಿತಾ ಕಾಡುತ್ತದೆ. ಏಕೆಂದರೆ ಕೇವಲ ಹತ್ತು ವರ್ಷಗಳಲ್ಲಿ ಹಿಂದೂಗಳ ಪ್ರಮಾಣ ಶೇ.82.8ರಿಂದ 80.5ಕ್ಕೆ ಇಳಿದಿದೆ! 1981-91ರ ಅವಧಿಯಲ್ಲಿ ಶೇ.25.1ರಷ್ಟಿದ್ದ ಹಿಂದೂಗಳ ಬೆಳವಣಿಗೆ ದರ 1991 ಮತ್ತು 2001ರ ಅವಧಿಯಲ್ಲಿ 20.3ಕ್ಕೆ ಇಳಿದಿದೆ. ಸಿಖ್ಖರೂ ಕುಸಿತ ಕಂಡಿದ್ದಾರೆ. ಮುಸಲ್ಮಾನರ ಬೆಳವಣಿಗೆ ದರ ಶೇ.36ಕ್ಕೇರಿದೆ. 6 ವರ್ಷದವರೆಗಿನ ವಯೋಮಾನದವರನ್ನು ಗಣನೆಗೆ ತೆಗೆದುಕೊಂಡರೆ ಮುಸ್ಲಿಮರ ಸಂಖ್ಯೆ ಅತಿ ಹೆಚ್ಚು ಅಂದರೆ ಶೇ.18.7ಕ್ಕೇರಿದೆ. ಕ್ರೈಸ್ತರ ಸಂಖ್ಯೆಯೂ ಗಣನೀಯ ಹೆಚ್ಚಳ ಕಂಡಿದೆ.

ಆದರೆ ಒಂದು ಸಮುದಾಯವನ್ನು ಮೆಚ್ಚಿಸುವುದಕ್ಕಾಗಿ ಕಟು ವಾಸ್ತವಗಳಿಂದ ಕೂಡಿರುವ ಇಂತಹ ಅಂಕಿ-ಅಂಶಗಳನ್ನೇ ತಿರುಚಲು ಮುಂದಾಗುತ್ತಾರೆಂದರೆ ನಮ್ಮ ರಾಜಕಾರಣಿಗಳ ಓಲೈಕೆ ನೀತಿ ಯಾವ ಘಟ್ಟಕ್ಕೆ ತಲುಪಿರಬಹುದು? ಮೂರು ದಿನಗಳ ಹಿಂದಷ್ಟೇ ಪ್ರಕಟಿಸಿದ್ದ ಸತ್ಯವನ್ನು ಮರೆಮಾಚುವಂತಹ ಶಿಖಂಡಿತನವೇಕೆ? ಕ್ರೈಸ್ತರು ಮತ್ತು ಮುಸ್ಲಿಮರ ಸಂಖ್ಯೆ ಹೆಚ್ಚಾಗುತ್ತಿದೆ ಎಂಬ ವಾಸ್ತವವನ್ನು ಹೇಳಲೂ ಅಳುಕಬೇಕೆ? ಈ ಹಿನ್ನೆಲೆಯಲ್ಲಿ ಯೋಚಿಸಿ....ಹಿಂದೂಗಳ ಸಂಖ್ಯೆ ಗಣನೀಯ ಪ್ರಮಾಣದಲ್ಲಿ ಕುಸಿದರೆ ಪರಿಸ್ಥಿತಿ ಏನಾಗಬಹುದು? ಏಕೆಂದರೆ ಮುಸಲ್ಮಾನರು ಮತ್ತು ಕ್ರೈಸ್ತರ ಬೆಳವಣಿಗೆ ದರವನ್ನು ಹಿಂದೂಗಳ ತೀವ್ರ ಕುಸಿತದೊಂದಿಗೆ ಸೇರಿಸಿಕೊಂಡು ಲೆಕ್ಕಹಾಕ ಬೇಕು. ಆಗ ಮುಂದೆ ಸೃಷ್ಟಿಯಾಗಲಿರುವ ಪರಿಸ್ಥಿತಿಯ ಗಂಭೀರತೆ ಅರ್ಥವಾಗುತ್ತದೆ. ಅಷ್ಟು ಮಾತ್ರವಲ್ಲ, ಈಗ ಹೊರಬಿದ್ದಿರುವ ಅಂಕಿ-ಅಂಶಗಳಲ್ಲಿ ಮತಾಂತರಗೊಂಡವರನ್ನು ಗಣನೆಗೆ ತೆಗೆದುಕೊಂಡಿಲ್ಲ. ಏಕೆಂದರೆ ಅಣ್ಣಯ್ಯ, ತಮ್ಮಯ್ಯ, ಚಿಕ್ಕಯ್ಯ, ದೊಡ್ಡಯ್ಯಂದಿರು ಮೈಕೆಲ್ಲು, ಜಾನು, ಫರ್ನಾಂಡಿಸ್ಸು ಆಗಿದ್ದರೂ ಹಿಂದೂಗಳೆಂದೇ ಪರಿಗಣಿಸಲ್ಪಡುತ್ತಾರೆ! ಅಂದಮಾತ್ರಕ್ಕೆ ಮತ್ತೆ ಅವರೆಂದೂ ಹಿಂದೂಗಳಾಗುವುದಿಲ್ಲ. ಈ ಕಟು ವಾಸ್ತವವನ್ನು ನೆನಪಿಸಿಕೊಂಡಾಗ ಇನ್ನೂ ಭಯವಾಗುತ್ತದೆ. 'ನಾ ಮುಂದು, ತಾ ಮುಂದು' ಎಂಬಂತೆ ಒಂದು ಕೋಮಿನವರನ್ನು ಓಲೈಸಲು ಯತ್ನಿಸುತ್ತಿರುವ ನಮ್ಮ ರಾಜಕಾರಣಿಗಳು ಮುಂದೊಂದು ದಿನ ಮತಕ್ಕಾಗಿ ಪಾದಕ್ಕೆರಗಲೂ ಹೇಸುವುದಿಲ್ಲ.

ಏಕೋ ಸಂಜಯ್ ಗಾಂಧಿ ನೆನಪಾಗುತ್ತಾನೆ!

ಆತನನ್ನು ಸ್ತ್ರೀಲೋಲ ಎಂದು ವೈಭವೀಕರಿಸಿದವರೇ ಹೆಚ್ಚು. 1975, ಜೂನ್ 26ರಂದು ದೇಶದ ಮೇಲೆ ತುರ್ತು ಪರಿಸ್ಥಿತಿಯನ್ನು ಹೇರಿದ ನಂತರ, ಜನಸಂಖ್ಯಾಸ್ಫೋಟವನ್ನು ನಿಯಂತ್ರಿಸುವುದಕ್ಕಾಗಿ ದಿಲ್ಲಿ, ಉತ್ತರ ಪ್ರದೇಶ, ಪಶ್ಚಿಮ ಬಂಗಾಳ ಮತ್ತು ಒರಿಸ್ಸಾಗಳಲ್ಲಿ ಸಂಜಯ್

ಹಮ್ಮಿಕೊಂಡ ಸಂತಾನ ನಿಯಂತ್ರಣ ಕಾರ್ಯಕ್ರಮವನ್ನು ಇಂದಿಗೂ ತೆಗಳುವವರಿದ್ದಾರೆ. ಆದರೆ ಬೇಸರದ ಸಂಗತಿಯೆಂದರೆ, ಆತನಲ್ಲಿದ್ದ ದೂರದೃಷ್ಟಿ ಮತ್ತು ಎದೆಗಾರಿಕೆಯನ್ನು ಯಾರೂ ಗಮನಿಸಲಿಲ್ಲ, ಗಮನಿಸುವುದೂ ಇಲ್ಲ.

ಸಂಜಯ್ ಸಂತಾನ ಶಕ್ತಿಹರಣಕ್ಕಾಗಿ ಬಲವಂತವಾಗಿ ವ್ಯಾಸೆಕ್ಟಮಿ ಮತ್ತು ಟ್ಯುಬೆಕ್ಟಮಿ ಶಸ್ತ್ರಚಿಕಿತ್ಸೆ ಮಾಡಿಸಿದ್ದನ್ನು ಒಪ್ಪಲು ಕಷ್ಟವಾಗಬಹುದು. ಆದರೆ ಜನಸಂಖ್ಯಾಸ್ಫೋಟವೆನ್ನುವುದು ಒಂದು ಸಮುದಾಯಕ್ಕೆ ಸೀಮಿತವಾದ ವಿಚಾರವಲ್ಲ. ಆರ್ಥಿಕ ಅಭಿವೃದ್ಧಿಯ ಭವಿಷ್ಯ ನಿಂತಿರುವುದೇ ಜನಸಂಖ್ಯೆಯ ಮೇಲೆ. ಅಪಾಯಕಾರಿ ಅಂಶವೆಂದರೆ 2050ರ ವೇಳೆಗೆ ಭಾರ ತದ ಜನಸಂಖ್ಯೆ 140 ಕೋಟಿ ದಾಟಬಹುದೆಂದು ಅಂದಾಜು ಮಾಡಲಾಗಿದೆ. ಆದರೆ ಆರ್ಥಿಕ ಅಭಿವೃದ್ಧಿಯಲ್ಲಿ ಭಾರತದ ಜತೆ ಸ್ಪರ್ಧೆಗಿಳಿದಿರುವ ಚೀನಾದ ಜನಸಂಖ್ಯೆ ಈಗ 130 ಕೋಟಿಗಳಾಗಿದ್ದು, 2050ರ ವೇಳೆಗೆ ನಮಗಿಂತಲೂ ಕಡಿಮೆ ಆಗಲಿದೆ.

ಏಕೆಂದರೆ ಅವಳಿ ಮಕ್ಕಳ ಜನನದಂತಹ ವಿರಳ ಸಂದರ್ಭಗಳನ್ನು ಬಿಟ್ಟರೆ 'ಕುಟುಂಬಕ್ಕೊಂದೇ ಮಗು'ವೆಂಬ ಕಟ್ಟುನಿಟ್ಟಾದ ಕಾನೂನು ಚೀನಾದಲ್ಲಿದೆ. ಹಾಗಾಗಿ ನಮ್ಮಲ್ಲಿ 'ಸಮಾನ ನಾಗರಿಕ ಸಂಹಿತೆ ಬೇಡ' ಎಂದು ಬೊಬ್ಬೆ ಹಾಕುವವರಿಗೆ ಕಡಿವಾಣ ಹಾಕಬೇಕಾಗುತ್ತದೆ. ಈ ಹಿನ್ನೆಲೆಯಲ್ಲಿ ಸಂಜಯ್ ಕ್ರಮ ಸರಿಯೆನಿಸುತ್ತದೆ. ಕಾರಣ, ಕೆಲವರು ತಮ್ಮ ಸಮುದಾಯದ ಸಂಖ್ಯೆ ಹೆಚ್ಚಾದರೆ ಧರ್ಮ ಉದ್ಧಾರವಾಗುತ್ತದೆ ಎಂದೇ ಭಾವಿಸುತ್ತಾರೆ. ಹಾಗಾಗಿ ಮನೆ ತುಂಬಾ ಮಕ್ಕಳು. ಅಂತಹ ಹೊರೆಯನ್ನು ಹೊರುವ ತಾಕತ್ತು ಕುಟುಂಬಕ್ಕಿರುವುದಿಲ್ಲ. ಮಕ್ಕಳು ಶಿಕ್ಷಣದಿಂದ ವಂಚಿತರಾಗುತ್ತಾರೆ. ಇಂದು ಯಾವುದೇ ಕ್ಷೇತ್ರವನ್ನು ತೆಗೆದುಕೊಳ್ಳಿ. ಉನ್ನತ ಶಿಕ್ಷಣ ಪಡೆದ ಮುಸ್ಲಿಮರ ಸಂಖ್ಯೆ ತೀರಾ ವಿರಳ. ಸರಕಾರ ಮೀಸಲಾತಿ ನೀಡಿದರೂ, ಎಷ್ಟೇ ಸೌಲಭ್ಯ ಕಲ್ಪಿಸಿದರೂ ಶಾಲೆಗೆ ಹೋಗೋದನ್ನು ಬಿಟ್ಟು ಮದರಸಾಕ್ಕೆ ಹೋಗುತ್ತಾರೆ. ಅಂತಿಮವಾಗಿ, ನಿರುದ್ಯೋಗವೇ ಎಲ್ಲ ಸಮಸ್ಯೆಗಳಿಗೆ ಮೂಲ ಎಂದು ಕಾರಣ ನೀಡುತ್ತಾರೆ. ಹಾಗಾದರೆ ಮದರಸಾಕ್ಕೆ ಹೋಗಿ ಧರ್ಮಪಾಠ ಕಲಿತವರನ್ನು ಲೆಕ್ಕಪತ್ರ ನೋಡಿಕೊಳ್ಳುವ ಗುಮಾಸ್ತರಾಗಿ, ಜಿಲ್ಲಾಧಿಕಾರಿಗಳಾಗಿ ಇಲ್ಲವೇ, ಸಾಫ್ಟ್‌ವೇರ್ ಎಂಜನಿಯರ್‌ಗಳಾಗಿ ಮಾಡಲು ಸಾಧ್ಯವೆ? ಯಾವುದೇ ತಂದೆ-ತಾಯಂದಿರೂ ತಮ್ಮ ಮಕ್ಕಳು ದಾರಿತಪ್ಪಬೇಕೆಂದು ಬಯಸುವುದಿಲ್ಲ ಆದರೆ ಮನೆತುಂಬಾ ಮಕ್ಕಳನ್ನು ಸೃಷ್ಟಿಸಿ ಶಿಕ್ಷಣ ನೀಡದೇ ಇದ್ದರೆ ಅಡ್ಡದಾರಿ ಹಿಡಿಯಲೇ ಬೇಕಾಗುತ್ತದೆ. ಅಲ್ಲದೆ, ಇತರ ಧರ್ಮಗಳಲ್ಲೂ ಲಕ್ಷಾಂತರ ನಿರುದ್ಯೋಗಿಗಳಿದ್ದಾರೆ. ಅವರೇಕೆ ಜನ್ಮ ನೀಡಿದ ದೇಶಕ್ಕೇ ಬಾಂಬಿಡುತ್ತಿಲ್ಲ? ಧರ್ಮದ ಆಧಾರದ ಮೇಲೆ ದೇಶವನ್ನು ಮತ್ತೆ ಮತ್ತೆ ತುಂಡು ಮಾಡಲು ಮುಂದಾಗುತ್ತಿಲ್ಲ? ಎಂದು ಪ್ರಶ್ನಿಸಬೇಕಾಗಿ ಬಂದಿದೆ. ಖಂಡಿತಾ ಮೂಲಭೂತವಾದಿಗಳು ತಮ್ಮ ಆತ್ಮವಿಮರ್ಶೆ ಮಾಡಿಕೊಳ್ಳಬೇಕು.

ಏಕೆಂದರೆ ಹಿಂದೂಗಳು ಬಹುಸಂಖ್ಯಾತರಾಗಿರುವ ಕ್ಷೇತ್ರಗಳಲ್ಲಿ ಅಲ್ಪಸಂಖ್ಯಾತ

ಜನನಾಯಕರು ನಿರಾತಂಕವಾಗಿ ಚುನಾವಣೆಯಲ್ಲಿ ಜಯಿಸಿ ಬರುತ್ತಾರೆ. ಆದರೆ ಅಲ್ಪಸಂಖ್ಯಾತರು ಬಹುಸಂಖ್ಯಾತರಾಗಿರುವ ಕ್ಷೇತ್ರದಲ್ಲಿ ಹಿಂದೂ ರಾಜಕಾರಣಿಗಳು ಆರಿಸಿ ಬರುತ್ತಿರುವುದಕ್ಕೆ ಒಂದೇ ಒಂದು ಉದಾಹರಣೆ ಕೊಡಿ ನೋಡೋಣ? ಜಾತ್ಯತೀತತೆ ಬಗ್ಗೆ ಯಾರು ಎಷ್ಟೇ ಬೊಬ್ಬೆ ಹಾಕಬಹುದು. ಆದರೆ ಆಂಧ್ರದ ಚಾರ್‌ಮಿನಾರ್ ಮತ್ತು ಹೈದರಾಬಾದ್ ಕ್ಷೇತ್ರಗಳಲ್ಲಿ ಹಿಂದೂ ಅಭ್ಯರ್ಥಿಯೊಬ್ಬ ಗೆಲ್ಲಲು ಸಾಧ್ಯವೇ ಇಲ್ಲ. ಅಲ್ಲಿ ಮಜ್ಲಿಸ್ ಇತ್ತೇಹಾದಲ್ ಮುಸಲ್ಮೀನ್ (AIMIM)ನ ಸಲಾವುದ್ದೀನ್ ಮತ್ತು ಅಸಾದುದ್ದೀನ್‌ಗಳೇ ಗೆಲ್ಲುವುದು. ಕೇರಳದ ಪೊನ್ನಣಿಯಲ್ಲಿ ಗೆಲ್ಲುವುದೂ ಮುಸ್ಲಿಂ ಲೀಗೇ. ಅದನ್ನು ಬದಲಿಸಲು ಯಾರಿಂದಲೂ ಸಾಧ್ಯವಿಲ್ಲ. ಯಾವ ಸೆಕ್ಯೂಲರ್ ವಾದವೂ ಅಲ್ಲಿ ನಡೆಯುವುದಿಲ್ಲ.

ಇಂತಹ ಮತಾಂಧತೆಯಿಂದಾಗಿಯೇ ಹಿಂದೂಗಳು ಅಲ್ಪಸಂಖ್ಯಾತರ ಬಗ್ಗೆಯೇ ಭಯಪಡುವಂತಹ ಪರಿಸ್ಥಿತಿ ಸೃಷ್ಟಿಯಾಗಿದೆ. ಅಫಜಲ್ ಖಾನ್ ಭಾರತದ ಮೇಲೆ ದಂಡೆತ್ತಿ ಬಂದ. ಆದರೆ ಅದೃಷ್ಟವಶಾತ್, ಶಿವಾಜಿ ಮಹಾರಾಜ ಅಫಜಲ್ ಖಾನ್‌ನನ್ನೇ ಕೊಂದು ಹಾಕಿದ. ಆದರೆ ಆತನನ್ನು ಕೊಂದ ಮಹಾರಾಷ್ಟ್ರದ ಪ್ರತಾಪ್‌ಗಢದಲ್ಲಿ ಇಂದು ಮತಾಂಧರು ಅಫಜಲ್ ಖಾನ್‌ನ ಗೋರಿ ಕಟ್ಟಿ ಆರಾಧನೆ ಮಾಡುತ್ತಿದ್ದಾರೆ! ಮುಂದೊಂದು ದಿನ ಗೋರಿಯನ್ನು ಪವಿತ್ರ ಸ್ಥಳವೆಂದು ಘೋಷಿಸಿ, ಯಾತ್ರೆಗೆ ಹೊರಡಬಹುದು. ಇನ್ನು 500ಕ್ಕೂ ಅಧಿಕ ಹಿಂದೂಗಳನ್ನು ಕೊಂದ 1993ರ ಬಾಂಬೆ ಬಾಂಬ್ ಸ್ಫೋಟದ ರೂವಾರಿ ದಾವೂದ್ ಇಬ್ರಾಹಿಂಗೆ ಆತನ ಕೋಮು ಹಿನ್ನೆಲೆಯನ್ನು ನೋಡಿ ಸೌದಿ ಅರೇಬಿಯಾ ಆಶ್ರಯ ನೀಡಿತು. ಅದೇ ಕಾರಣಕ್ಕೆ ಇಂದು ಪಾಕಿಸ್ತಾನ ಆತನ ಆರೈಕೆ ಮಾಡುತ್ತಿದೆ. ಇದಿ ಅಮೀನ್ ಎಂಬ ಉಗಾಂಡದ ಪಾತಕಿಗೂ ಸೌದಿ ಅರೇಬಿಯಾ ಸಾಯುವವರೆಗೂ ಆಶ್ರಯ ನೀಡಿತು. ಆತನನ್ನು ವಿಚಾರಣೆ ಮಾಡಲು, ಶಿಕ್ಷಿಸಲು ಜಗತ್ತಿನ ಯಾವುದೇ ನ್ಯಾಯಾಲಯಕ್ಕೂ ಅನುಮತಿ ನೀಡಲಿಲ್ಲ. ಈ ರೀತಿಯ ಧರ್ಮಾಂಧತೆಯನ್ನು ತೊರೆಯುವವರೆಗೂ ಅಪನಂಬಿಕೆ ದೂರವಾಗುವುದಿಲ್ಲ.

ಜಗತ್ತಿನಾದ್ಯಂತ 52 ಮುಸ್ಲಿಂ ರಾಷ್ಟ್ರಗಳಿವೆ. 121 ಕೋಟಿ ಮುಸ್ಲಿಮರಿದ್ದಾರೆ. ಆದರೆ ಈ ಎಲ್ಲ ರಾಷ್ಟ್ರಗಳಲ್ಲೂ ಧಾರ್ಮಿಕ ಮೂಲಭೂತವಾದ ಕಂಡುಬರುತ್ತಿದ್ದು, ಅದು ನಕಾರಾತ್ಮಕ ಚಿಂತನೆಗೆ ದಾರಿ ಮಾಡಿಕೊಡುತ್ತಿದೆ ಎಂಬ ಅಭಿಪ್ರಾಯ ಸೆಪ್ಟೆಂಬರ್ 11ರ ಘಟನೆಯ ನಂತರ ವಿಶ್ವದೆಲ್ಲೆಡೆ ಬಲಗೊಳ್ಳುತ್ತಿದೆ. ಜತೆಗೆ ಮುಸ್ತಾಫಾ ಕಮಾಲ್ ಅಟಾಟರ್ಕ್, ಅಬ್ದುಲ್ ಗಾಮೆಲ್ ನಾಸೆರ್, ಅನ್ವರ್ ಸದತ್, ಮೌಲಾನಾ ಆಜಾದ್, ಅಬ್ದುಲ್ ಕಲಾಂ ಅವರಂತಹ ಅಪ್ರತಿಮ ನಾಯಕರನ್ನು, ಪ್ರಗತಿಪರ ಚಿಂತಕರನ್ನು, ದೇಶಪ್ರೇಮಿಗಳನ್ನು ಬಿಟ್ಟು ಮುಲ್ಲಾ ಉಮರ್ ಮತ್ತು ಲಾಡೆನ್‌ನನ್ನು ಆರಾಧಿಸುವ ಪ್ರವೃತ್ತಿ ಕಂಡುಬರುತ್ತಿದೆ. ತಮ್ಮ ಧರ್ಮೋದ್ಧಾರಕ್ಕಾಗಿ ರಷ್ಯಾದ ಶಾಲೆಗಳ ಮೇಲೆ ದಾಳಿ ಮಾಡಿ ಕಂದಮ್ಮಗಳ ಕತ್ತು ಹಿಸುಕುತ್ತಾರೆ.

ಎಲ್ಲ ಮುಸ್ಲಿಮರನ್ನು ಖಂಡಿತಾ ದೂರಲು ಸಾಧ್ಯವಿಲ್ಲ. ಏಕೆಂದರೆ ಈ ದೇಶದ ನೆಲ,

ಜಲ, ಸಮಗ್ರತೆ, ಸಂಸ್ಕೃತಿ ಮತ್ತು ಕಲೆಯನ್ನು ಒಪ್ಪಿಕೊಂಡಿರುವ, ಈ ಜನಮಾನಸದಲ್ಲಿಯೇ ಒಂದಾಗಿ ಮಿಳಿತವಾಗಿರುವ ಅಲ್ಪಸಂಖ್ಯಾತರ ಸಂಖ್ಯೆಯೇ ಹೆಚ್ಚಾಗಿದೆ. ಬಿಸ್ಮಿಲ್ಲಾ ಖಾನ್, ಜಾಕಿರ್ ಹುಸೇನ್, ಮಹಮದ್ ರಫಿ, ಅಮ್ಜದ್ ಅಲಿ ಖಾನ್, ಬಡೆ ಗುಲಾಂ ಅಲಿ ಖಾನ್, ಅಲ್ಲಾರಖಾ ಅವರಂತಹ ಅಪ್ರತಿಮ ಕಲಾಕಾರರು ಈ ದೇಶದ ಸಂಸ್ಕೃತಿಯನ್ನು ಶ್ರೀಮಂತಗೊಳಿಸಿದ್ದಾರೆ. ಹಿಂದಿ ಚಿತ್ರರಂಗಕ್ಕೂ ಇವರ ಕೊಡುಗೆ ಅಪಾರ. ರಫಿಕ್ ಝಕಾರಿಯಾ ಅವರಂತಹ ಚಿಂತಕರೂ ಹೊರಹೊಮ್ಮಿದ್ದಾರೆ. ಇಷ್ಟಾಗಿಯೂ ವೋಟ್ ಬ್ಯಾಂಕ್ ರಾಜಕಾರಣ ಮತ್ತು ಶಹಾಬುದ್ದೀನ್, ತಸ್ಲಿಮುದ್ದೀನ್ ಅವರಂತಹ ಕ್ರಿಮಿನಲ್‌ಗಳಿಂದಾಗಿ ಇಡೀ ಸಮುದಾಯಕ್ಕೇ ಕೆಟ್ಟ ಹೆಸರು ಅಂಟಿಕೊಳ್ಳುತ್ತಿದೆ. ಇಂತಹ ಪರಿಸ್ಥಿತಿ ಬದಲಾಗಬೇಕು.

ಇನ್ನು ಹಿಂದೂಗಳು ಕೂಡ, ನಾವು ಶೇ.80ರಷ್ಟಿದ್ದೇವೆ ಎಂದು ಮೈಮರೆಯುವ ಮುನ್ನ ಕೆಲವೇ ಲಕ್ಷದಷ್ಟಿರುವ ಚೆಚೆನ್ಯಾದ ಬಂಡುಕೋರರು ಭಾರತಕ್ಕಿಂತ ಹಲವು ಪಟ್ಟು ದೊಡ್ಡದಿರುವ ರಷ್ಯಾದ ರಕ್ತವನ್ನು ಹೇಗೆ ಹೀರುತ್ತಿದ್ದಾರೆ, ಅಲ್ಲಿನ ಹಸುಳೆಗಳನ್ನು ಕೊಲ್ಲುತ್ತಿದ್ದಾರೆ ಎಂಬುದನ್ನು ಮರೆಯಬಾರದು. ಅಂದು ದೇಶ ವಿಭಜನೆಯಾದಾಗ, ಹೈದರಾಬಾದ್ ನಿಜಾಮನ ಕೈಯಲ್ಲಿತ್ತು. ಆದರೆ ಹೈದರಾಬಾದ್‌ನಲ್ಲಿ ಹಿಂದೂಗಳೇ ಬಹುಸಂಖ್ಯಾತರಾಗಿದ್ದರು. ಆದರೂ ನಿಜಾಮ ಭಾರತದೊಂದಿಗೆ ವಿಲೀನಗೊಳ್ಳಲು ಒಪ್ಪಲಿಲ್ಲ. ಇನ್ನು ಕಾಶ್ಮೀರದಲ್ಲಿ ಮುಸ್ಲಿಮರೇ ಬಹುಸಂಖ್ಯಾತ ರಾಗಿದ್ದರೂ ಹರಿಸಿಂಗ್ ಎಂಬ ಹಿಂದೂ ರಾಜ ಆಳ್ವಿಕೆ ನಡೆಸುತ್ತಿದ್ದ. ಆದರೂ ಕಾಶ್ಮೀರಿಯರು ಭಾರತದೊಂದಿಗೆ ಸೇರಿಕೊಳ್ಳಲು ವಿರೋಧ ವ್ಯಕ್ತಪಡಿಸಿದರು. ಪರಿಣಾಮವಾಗಿ ಕಾಶ್ಮೀರಿ ಪಂಡಿತರು ದೈಹಿಕವಾಗಿ, ಮಾನಸಿಕವಾಗಿ ಅತ್ಯಾಚಾರಕ್ಕೊಳಗಾಗಿ ಕಣವೆಯನ್ನೇ ತೊರೆದು ಜನ್ಮಭೂಮಿಯಲ್ಲೇ ನಿರಾಶ್ರಿತರಾಗಬೇಕಾಯಿತು. ನಮ್ಮ ನೆಲದಲ್ಲೇ ಪರಕೀಯರಾಗಬೇಕಾಯಿತು.

ಭಾರತ ಎಲ್ಲ ಮತ, ಧರ್ಮಗಳ ಜನರಿಗೂ ಆಶ್ರಯ ನೀಡಿದ ನಾಡು. ನಾವೆಂದೂ ಕಾಲು ಕೆರೆದು ದಂಡೆತ್ತಿ ಹೋದವರಲ್ಲ. ನಮ್ಮ ಮೇಲೆ ದಂಡೆತ್ತಿ ಬಂದವರನ್ನೂ ಉಪಚರಿಸಿ, ಸತ್ಕರಿಸಿದ ಸಂಸ್ಕೃತಿ ನಮ್ಮದು. ಅನ್ಯ ಕೋಮಿನ ಹೆಂಗಸು ಹೆರಿಗೆಗೆ ಮಲಗಿದಾಗ ತೊಟ್ಟಿಲು ಕಟ್ಟಲು ಮುಂದಾದವರು ನಾವು. ಇದು ಭಾರತದ ರಕ್ತಗುಣ. ಇದು ನಮ್ಮ ದೊಡ್ಡತನವೇ ಹೊರತು ದೌರ್ಬಲ್ಯವಲ್ಲ. ಅಂದು ಧರ್ಮದ ಆಧಾರದ ಮೇಲೆ ದೇಶವನ್ನು ಒಡೆಯಲು ಹೊರಟವರಿಗೆ....

"ನೀವು ಬಂದರೆ ನಿಮ್ಮ ಜತೆ
ಬರದಿದ್ದರೆ ನಿಮ್ಮನ್ನು ಬಿಟ್ಟು
ವಿರೋಧಿಸಿದರೆ ಮೊದಲು ನಿಮ್ಮನ್ನೇ ಮೆಟ್ಟಿ
ಸ್ವಾತಂತ್ರ್ಯ ಗಳಿಸುತ್ತೇವೆ"

ಎಂದು ವೀರ ಸಾವರ್ಕರ್ ಹೇಳಿದಂತೆ....ದೇಶ ಕಟ್ಟುವ ಕೆಲಸದಲ್ಲಿ ಇದೇ ಮಾತನ್ನು ಮುಸ್ಲಿಮರಿಗೆ ಹೇಳಬೇಕಾದ ಕಾಲ ಬರಬಹುದು.

''ಹಿಂದೂ ರಾಷ್ಟ್ರದ ಕನಸು ಬಿಡಿ, ಕನಿಷ್ಠ ಭಾರತ ವಾಗಿ ಉಳಿಸಿ ಕೊಡಿ''-ಸೆಪ್ಟೆಂಬರ್ 11, 04ರಂದು 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಪ್ರಕಟವಾದ ಪ್ರತಾಪ್ ಸಿಂಹ ಅವರ ಲೇಖನ ನೋಡಿದಿರಾ? ಅದ್ಭುತ ಲೇಖನ ಅದು. ಇಂದಿನ ಭಾರತದ ಸ್ಥಿತಿ ಅರ್ಥವಾಗುತ್ತದೆ.

ಸಿದ್ದು ಬೀ. ಬಡಿಗೇರ
ತಳೇವಾಡ

ಚಂದ್ರಶೇಖರ್ ಸರಕಾರ ಇದ್ದ ಚಿನ್ನವನ್ನೂ ಅಡವಿಟ್ಟಿತ್ತು. ಅರೆಬರೆ ಬಜೆಟ್ ಮಂಡಿಸಿದ್ದ ವಿತ್ತ ಸಚಿವ ಯಶವಂತ್ ಸಿನ್ಹಾ, ದಿಕ್ಕುಕಾಣದೆ ಕೈಚೆಲ್ಲಿದ್ದರು. ದೇಶದ ಖಜಾನೆ ಬರಿದಾಗಿತ್ತು. ವಿದೇಶಿ ವಿನಿಮಯ ಶೂನ್ಯಕ್ಕಿಳಿದಿತ್ತು.

1991, ಜೂನ್ 21....

ರಾಜಕೀಯ ನಿವೃತ್ತಿ ಯಾಚಿಸಿದ್ದ ನರಸಿಂಹರಾವ್, ಅಂದು ಪ್ರಧಾನಿಯಾಗಿ ಅಧಿಕಾರ ವಹಿಸಿಕೊಂಡಿದ್ದರು. ರಾಜಕೀಯ ಜ್ಞಾನವೇ ಇಲ್ಲದ ಮನಮೋಹನ್ ಸಿಂಗ್, ನೂತನ ವಿತ್ತ ಸಚಿವರಾಗಿ ಪ್ರಮಾಣವಚನ ಸ್ವೀಕರಿಸಿದ್ದರು. ಆಘಾತಕಾರಿ ಸಂಗತಿಯೆಂದರೆ, ಹಣದುಬ್ಬರ (Inflation) ಪ್ರಮಾಣ ಶೇ. 17ಕ್ಕೇರಿತ್ತು. ವಿದೇಶಿ ಸಾಲ 50 ಶತಕೋಟಿ ಪೌಂಡ್‌ಗಳಿಗೇರಿತ್ತು. ಇನ್ನೆರಡು ವಾರಗಳಲ್ಲಿ ಭಾರತ ಡಿಫಾಲ್ಟರ್ ಆಗಲಿತ್ತು! ಅದುವರೆಗೂ, ಅವಧಿಗಿಂತ ಮುಂಚೆಯೇ ಸಾಲ ಮರುಪಾವತಿ ಮಾಡುತ್ತಿದ್ದ ಭಾರತ, ಡಿಫಾಲ್ಟರ್(ಸಾಲ ಮರುಪಾವತಿ ಮಾಡಲು ವಿಫಲವಾಗುವುದು) ಆಗುವುದೆಂದರೆ ಜಗತ್ತಿನ ಅತಿ ದೊಡ್ಡ ಪ್ರಜಾಪ್ರಭುತ್ವವೆಂಬ ಹೆಗ್ಗಳಿಕೆ, ಘನತೆ, ಅಂತಾರಾಷ್ಟ್ರೀಯ ಸ್ಥಾನಮಾನ, ಮರ್ಯಾದೆ ಮಣ್ಣಾದಂತೆ. ಇಂತಹ ಪರಿಸ್ಥಿತಿಯಲ್ಲಿ ನರಸಿಂಹರಾವ್ ನೇತೃತ್ವದ ನೂತನ ಸರಕಾರ ಅಧಿಕಾರ ವಹಿಸಿಕೊಂಡಿತ್ತು. ಆದರೆ ಲೋಕಸಭೆಯಲ್ಲಿ ಕಾಂಗ್ರೆಸ್‌ಗೆ ಬಹುಮತವಿರಲಿಲ್ಲ. ಒಂದೆಡೆ ವಿಶ್ವಾಸಮತ ಯಾಚಿಸಿ, ಗಳಿಸಬೇಕಾದ ಅನಿವಾರ್ಯತೆ. ಇನ್ನೊಂದೆಡೆ ತುರ್ತು ಅಗತ್ಯಕ್ಕಾಗಿ ಕೇವಲ 100 ಕೋಟಿ ರೂ. ಸಾಲ ನೀಡಲೂ ವಿಶ್ವಬ್ಯಾಂಕ್ ಒಪ್ಪುತ್ತಿಲ್ಲ. 27 ವರ್ಷಗಳ ಕಾಲ ಅಧಿಕಾರ ಅನುಭವಿಸಿದ್ದ ನರಸಿಂಹರಾವ್ ಅಂದು, ತಮ್ಮ ಜೀವಮಾನದಲ್ಲಿಯೇ ಅತಿದೊಡ್ಡ ಅಗ್ನಿಪರೀಕ್ಷೆ ಎದುರಿಸಿದ್ದರು. ಇದ್ದಿದ್ದೊಂದೇ ಮಾರ್ಗ-ರೂಪಾಯಿಯ ಅಪಮೌಲ್ಯ (Money Devaluation)! ಆದರೆ ಲೋಕಸಭೆಯಲ್ಲಿ ಬಹುಮತ ಸಾಬೀತುಪಡಿಸದೇ ಏನೂ ಮಾಡುವಂತಿಲ್ಲ. ಆದರೂ ವಿತ್ತ ಸಚಿವ ಮನಮೋಹನ್ ಸಿಂಗ್ ಅವರನ್ನು ರಿಸರ್ವ್ ಬ್ಯಾಂಕ್‌ನ ಗವರ್ನರ್ ಬಳಿ ಕಳುಹಿಸಿದ ರಾವ್, ಸದ್ದಿಲ್ಲದೆ ರೂಪಾಯಿ ಯನ್ನು ಅಪಮೌಲ್ಯಗೊಳಿಸಿದರು. ಆ ಮೂಲಕ ನಮ್ಮ ವಿದೇಶಿ ವಿನಿಮಯ ಮೀಸಲು ಪ್ರಮಾಣ ವನ್ನು ಹೆಚ್ಚಿಸಿದರು. ಅಡವಿಟ್ಟಿದ್ದ ಚಿನ್ನವನ್ನು ಬಿಡಿಸಿಕೊಂಡು ಬಂದರು.

ಇಷ್ಟಾದರೂ ನಿಶ್ಚಿಂತೆಯಿಂದ ನಿದ್ರಿಸುವಂತಿರಲಿಲ್ಲ!

ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳೆಂಬ ಬಿಳಿ ಆನೆಗಳು ಮತ್ತು ಭ್ರಷ್ಟ ನೌಕರಶಾಹಿ ಯಿಂದಾಗಿ ದೇಶದ ಅರ್ಥವ್ಯವಸ್ಥೆ ಊನಗೊಂಡಿತ್ತು. ಕಾಯಕಲ್ಪ ನೀಡಬೇಕಾದ ಅನಿವಾರ್ಯತೆ ಎದುರಾಗಿತ್ತು. ಜತೆಗೆ ಆರ್ಥಿಕ ಉದಾರೀಕರಣ ನೀತಿಗಳನ್ನು ಜಾರಿಗೆ ತರುವಂತೆ ಒತ್ತಡ ಬಿದ್ದಿತ್ತು. ಅಂದು ರಾವ್ ಬದಲು ಅಟಲ್ ಬಿಹಾರಿ ವಾಜಪೇಯಿಯವರು ಪ್ರಧಾನಿಯಾಗಿದ್ದರೂ

ಜಾಗತೀಕರಣವನ್ನು ಅಪ್ಪಿಕೊಳ್ಳಲೇಬೇಕಾಗಿತ್ತು. ಆದರೆ ಒಬ್ಬ ಕಾಂಗ್ರೆಸ್ ಪ್ರಧಾನಿಯಾಗಿ, ನೆಹರೂ ಪ್ರಣೀತ ಅರೆ ಸಮಾಜವಾದವನ್ನು (Quasi Socialism) ತಿಪ್ಪೆಗೆ ಎಸೆಯುವುದು ಸುಲಭದ ಮಾತಾಗಿರಲಿಲ್ಲ. ಜತೆಗೆ ಇಂದಿರಾ ಗಾಂಧಿಯವರು ಹುಟ್ಟುಹಾಕಿದ್ದ 'ಬಾಬು ಸಂಸ್ಕೃತಿ' (ಅಧಿಕಾರಶಾಹಿಗಳ ಕಪಿಮುಷ್ಠಿ), ಆಕೆಯ 'ಫಾಲ್ತು ನ್ಯಾಷನಲಿಸಮ್', ಎಲ್ಲದಕ್ಕೂ ಅನುಮತಿ ಪಡೆಯಬೇಕಾದ ಲೈಸೆನ್ಸ್‌ರಾಜ್, ಪರ್ಮಿಟ್‌ರಾಜ್‌ಗಳಿಗೆ ತೆರೆಯೆಳೆಯಬೇಕಿತ್ತು.

ನಿಜಕ್ಕೂ ಅದು ಸಂದಿಗ್ಧ ಕಾಲ. ಸೋವಿಯತ್ ಒಕ್ಕೂಟ ಒಡೆದಿತ್ತು. ಬರ್ಲಿನ್ ಗೋಡೆ ನೆಲಸಮಗೊಂಡಿತ್ತು. ಆದರೊಂದಿಗೆ ಕಮ್ಯುನಿಸಂ ಅರ್ಥ ಕಳೆದುಕೊಂಡಿತ್ತು. ನೆಹರೂ ಸಮಾಜವಾದ ಕೂಡ ನಿಸ್ಸತ್ವವೆನಿಸಿತ್ತು. ಇದನ್ನರಿತ ರಾವ್, ಆರ್ಥಿಕ ಉದಾರೀಕರಣ ನೀತಿಗಳನ್ನು ಜಾರಿಗೆ ತಂದರು. ಎಡಪಕ್ಷಗಳು ಮತ್ತು ಕಾಂಗ್ರೆಸ್ ಸಹೋದ್ಯೋಗಿಗಳೇ ವಿರೋಧಿಸಿದರೂ, ಕಾಲೆಳೆಯಲು ಪ್ರಯತ್ನಿಸಿದರೂ ಆರ್ಥಿಕ ಉದಾರೀಕರಣದ ಬಗ್ಗೆ ತಾವಿಟ್ಟಿದ್ದ ವಿಶ್ವಾಸ, ಭರವಸೆಗಳನ್ನು ಕಳೆದುಕೊಳ್ಳಲಿಲ್ಲ. ಧೃತಿಗೆಡಲೂ ಇಲ್ಲ. ರಾವ್ ಅವರ ಇಂತಹ ದೃಢಸಂಕಲ್ಪದಿಂದಾಗಿಯೇ ಕುಂಟುತ್ತಾ, ತೆವಳುತ್ತಾ ಸಾಗುತ್ತಿದ್ದ ಭಾರತದ ಅರ್ಥವ್ಯವಸ್ಥೆ, ಜಾಗತಿಕ ಅರ್ಥವ್ಯವಸ್ಥೆಯಾಗಿ ರೂಪುಗೊಂಡಿತು. 'ಕೋಕ್, ಪೆಪ್ಸಿ'ಗಳಲ್ಲದೆ High End Technology (ಉನ್ನತ ತಂತ್ರಜ್ಞಾನ) ಕೂಡ ಬಂತು. Plastic Moneyಯೂ ಆಗಮಿಸಿತು. ಇಂದು ನೀವು ಬಳಸುವ ಕ್ರೆಡಿಟ್ ಕಾರ್ಡ್, ಡೆಬಿಟ್ ಕಾರ್ಡ್, ಎಟಿಎಂ ಕಾರ್ಡ್, ಮೊಬೈಲ್-ಸೆಲ್ ಫೋನ್‌ಗಳ ಆಗಮನಕ್ಕೆ ರಾವ್ ಕಾರಣರಾದರು. ಕ್ಷಣಮಾತ್ರದಲ್ಲಿ ಹಣ ವರ್ಗಾವಣೆ ಮಾಡುವಂತಹ ಬ್ಯಾಂಕಿಂಗ್ ವ್ಯವಸ್ಥೆ, ಇನ್ಸೂರೆನ್ಸ್, ಇಂಟರ್‌ನೆಟ್, ಕಾರು-ಏರ್‌ಲೈನ್ಸ್‌ಗಳ ಹಿಂದೆಯೂ ರಾವ್ ದೂರದೃಷ್ಟಿಯಿದೆ. ಇಲ್ಲದಿದ್ದರೆ ಅಂಬಾಸೆಡರ್, ಮಾರುತಿ, ಯೆಝ್ಡಿ, ಎನ್ಫೀಲ್ಡ್‌ಗಳೇ ಇಂದಿಗೂ ನಮ್ಮ ರಸ್ತೆಗಳನ್ನು ಅಲಂಕರಿಸಿರುತ್ತಿದ್ದವು! ಹಣ ನೀಡಿ ಸ್ಥಳದಲ್ಲೇ ಅಡುಗೆ ಅನಿಲ(ಎಲ್‌ಪಿಜಿ) ಪಡೆದುಕೊಳ್ಳುವಂತಹ ಲಕ್ಸುರಿ ನಮಗೆ ದೊರೆತಿದ್ದರೆ, 30ರಿಂದ 40 ಸಾವಿರ ರೂ. ನೀಡಬೇಕಿದ್ದ ಕಲರ್ ಟೀವಿಗಳು ಇಂದು 7 ಸಾವಿರ ರೂ.ಗೆ ಲಭ್ಯವಾಗಿದ್ದರೆ, ಒಂದೂವರೆ ಲಕ್ಷವಿದ್ದ ಕಂಪ್ಯೂಟರ್ ಬೆಲೆ 21 ಸಾವಿರಕ್ಕಿಳಿದಿದ್ದರೆ ಅದಕ್ಕೆ, ಅಂದು ರಾವ್ ಜಾರಿಗೆ ತಂದ ಖಾಸಗೀಕರಣ, ಉದಾರೀಕರಣ ಮತ್ತು ಜಾಗತೀಕರಣಗಳೇ ಕಾರಣ.

ಜಾಗತೀಕರಣದಿಂದ ಖಂಡಿತ ನಮ್ಮ ಅರ್ಥವ್ಯವಸ್ಥೆಯ ಮೇಲೆ ಪ್ರತಿಕೂಲ ಪರಿಣಾಮಗಳಾಗಿವೆ. ಆದರೆ ಜಾಗತೀಕರಣದಿಂದ ಬಂದಿದ್ದು ಬರೀ Zero Technology ಎಂಬ ಪೊಳ್ಳು ವಾದ ಬೇಡ. Broad band Technology ಬಂದಿದ್ದೇ ಜಾಗತೀಕರಣದ ನಂತರ. ಹಾಗಾಗಿಯೇ ನಮ್ಮ ಮನೆಯ ಟೆಲಿಫೋನ್ ಲೈನಿನಲ್ಲಿ ಇಂಟರ್‌ನೆಟ್, ಚಿತ್ರ ಮತ್ತು ಮಾಹಿತಿಗಳ ರವಾನೆ ಮಾಡಬಹುದಾಗಿದೆ. ರೋಗಗ್ರಸ್ತ ಕಾರ್ಖಾನೆಗಳನ್ನು ಆಧುನೀಕರಣಗೊಳಿಸಲು, ತಂತ್ರಜ್ಞಾನವನ್ನು ಅಪ್‌ಗ್ರೇಡ್ ಮಾಡಲು ಸಾಧ್ಯವಾಗಿದೆ. ಡಿಡಿ-1 ಮತ್ತು ಡಿಡಿ-2 ಚಾನೆಲ್‌ಗಳಲ್ಲದೆ ನೂರಾರು ರಾಷ್ಟ್ರ-ಅಂತಾರಾಷ್ಟ್ರೀಯ ಚಾನೆಲ್‌ಗಳು ಮನೆಯ ಡ್ರಾಯಿಂಗ್ ರೂಮ್‌ಗಳಿಗೆ

ಬಂದಿವೆ. ಸುಮಾರು 650 ವಿದೇಶಿ ಕಂಪನಿಗಳು (ಬಹುರಾಷ್ಟ್ರೀಯ) ಭಾರತಕ್ಕೆ ಆಗಮಿಸಲು ಆರ್ಥಿಕ ಉದಾರೀಕರಣವೇ ಕಾರಣ ಎಂದು ದೂರಬಹುದು. ಆದರೆ 1990ರವರೆಗೂ ದೇಶದ ಗಡಿಯಾಚೆಯೂ ವಹಿವಾಟು ಹೊಂದಿದ್ದ ಕಂಪನಿಗಳೆಂದರೆ ಟಾಟಾ, ಬಿರ್ಲಾ ಮಾತ್ರ. ಆದರೆ ಇಂದು ರಿಲಯನ್ಸ್, ಇನ್ಫೋಸಿಸ್, ವಿಪ್ರೊ, ಸತ್ಯಂ, ಸಿಪ್ಲಾ, ರ್‍ಯಾನ್‌ಬಾಕ್ಸಿ, ಡಾ. ರೆಡ್ಡೀಸ್‌ಗಳಂತಹ ಇತ್ತೀಚೆಗೆ ಜನಿಸಿದ ಭಾರತೀಯ ಕಂಪನಿಗಳೂ ಬಹುರಾಷ್ಟ್ರೀಯ ಕಂಪನಿಗಳಾಗಿ ಹೊರಹೊಮ್ಮಿವೆ. ಅಷ್ಟೇಕೆ, ಸರಕಾರಿ ಸ್ವಾಮ್ಯದಲ್ಲಿರುವ ಒಎನ್‌ಜಿಸಿ(ಭಾರತೀಯ ತೈಲ ಮತ್ತು ನೈಸರ್ಗಿಕ ಅನಿಲ ನಿಗಮ)ಯೂ ಬಹುರಾಷ್ಟ್ರೀಯ ಕಂಪನಿಯಾಗಿ ಹೊರಹೊಮ್ಮಿದೆ. ತೋಟಾ ಕೋವಿ ಹಿಡಿದು ತಿರುಗುತ್ತಿದ್ದ ನಮ್ಮ ಸೈನಿಕರ ಕೈಗೆ ಎ.ಕೆ. 47, 56 ರೈಫಲ್‌ಗಳು ಬಂದಿವೆ. ಭಿಕ್ಷಾಪಾತ್ರೆ ಹಿಡಿದಿದ್ದ ನಮ್ಮ ಕೈಗಳಲ್ಲಿ 120 ಶತಕೋಟಿ ಡಾಲರ್ ವಿದೇಶಿ ವಿನಿಮಯ ಮೀಸಲು ಇದೆ. ಇಂತಹ ಸಾಮರ್ಥ್ಯ ಹೊಂದಿರುವ ಜಗತ್ತಿನ ಐದನೇ ರಾಷ್ಟ್ರ ಭಾರತವಾಗಿದೆ. ಇಂದು ಚೀನಾ ಜತೆ ನಾವು ಸೂಪರ್‌ಪವರ್ ರಾಷ್ಟ್ರದ ಸ್ಥಾನಕ್ಕೆ ಪೈಪೋಟಿ ನಡೆಸಲು ಸಾಧ್ಯವಾಗಿದ್ದರೆ ಅದಕ್ಕೆ ರಾವ್ ಅವರ ಆರ್ಥಿಕ ಉದಾರೀಕರಣ ನೀತಿಗಳೇ ಕಾರಣ. ಮಾರುಕಟ್ಟೆ ಆಧಾರಿತ ಅರ್ಥವ್ಯವಸ್ಥೆಯಿಂದ ಮಾತ್ರ ಇಂತಹ ಸಾಧನೆ ಸಾಧ್ಯವಾಗಿದೆ.

ಜಾಗತೀಕರಣದಿಂದಾಗಿ ಸರಕಾರಿ ಉದ್ಯೋಗಗಳಿಗೆ ಕತ್ತರಿ ಬಿತ್ತು. ನಿರುದ್ಯೋಗಕ್ಕೆ ಖಾಸಗೀಕರಣವೇ ಕಾರಣ ಎಂದು ರಾವ್ ಅವರನ್ನು ದೂರುವ ಯತ್ನ ನಡೆಯುತ್ತಲೇ ಬಂದಿದೆ. ಆದರೆ ದೂರುವ ಮೊದಲು, 1992ರವರೆಗೂ ಅಂದರೆ, ಸುಮಾರು 45 ವರ್ಷಗಳ ಕಾಲ ಸರಕಾರಿ ಉದ್ಯೋಗಿಗಳು ಯಾವ ದೇಶೋದ್ಧಾರ ಮಾಡಿದರು ಎಂಬುದನ್ನು ಯೋಚಿಸುವುದೊಳಿತು. ಆದರೆ ಖಾಸಗೀ ಕ್ಷೇತ್ರದಲ್ಲಿ ಪ್ರತಿಭೆಗೆ ಮಾತ್ರ ಬೆಲೆ. ಅಲ್ಲಿ ನಿಮ್ಮ ಜ್ಞಾನವೇ ಕರೆನ್ಸಿ (Knowledge is currency). ಅದನ್ನರಿತಾಗ ದೂರುವುದು ತಪ್ಪುತ್ತದೆ.

ಕೇವಲ ಆರ್ಥಿಕ ನೀತಿಗಳು ಮಾತ್ರವಲ್ಲ, ರಾವ್ ರಾಜಕೀಯದಲ್ಲೂ ಅತ್ಯಂತ ಚಾಣಾಕ್ಷ. ಅವರು ಅಧಿಕಾರ ವಹಿಸಿಕೊಂಡಾಗ ಪಂಜಾಬ್ ಮತ್ತು ಜಮ್ಮು-ಕಾಶ್ಮೀರದಲ್ಲಿ ಭಯೋತ್ಪಾದನೆ ಅಪಾಯದ ಮಟ್ಟ ತಲುಪಿತ್ತು. 17 ಭಾಷೆಗಳನ್ನು ಬಲ್ಲ, ಚಂದ್ರಶೇಖರ್ ಅವರಿಂದ 'ಮೌನಿ ಬಾಬಾ' ಎಂದೇ ಕರೆಸಿಕೊಳ್ಳುತ್ತಿದ್ದ ರಾವ್‌ಗೆ ಪಂಜಾಬ್‌ನಲ್ಲಿ ಶಾಂತಿ ಸ್ಥಾಪನೆ ಮಾಡುವುದು ಅತಿ ದೊಡ್ಡ ಸವಾಲಾಗಿತ್ತು. ಆದರೂ ಉದ್ದೇಶ ಸಾಧನೆಯ ವಿಧಾನ ಗೊತ್ತಿತ್ತು. ಅರ್ಥವ್ಯವಸ್ಥೆಗೆ ಕಾಯಕಲ್ಪ ನೀಡುವ ನಿಟ್ಟಿನಲ್ಲಿ ಮನಮೋಹನ್ ಸಿಂಗ್ ಮತ್ತು ಅವರ ಸಹಾಯಕ ಸಚಿವ ಪಿ. ಚಿದಂಬರಂಗೆ ಸಂಪೂರ್ಣ ಸ್ವಾಯತ್ತೆ ನೀಡಿದರೆ, ಬೆಂಕಿಯ ಜ್ವಾಲೆಯಾಗಿದ್ದ ಪಂಜಾಬನ್ನು ಹದ್ದುಬಸ್ತಿನಲ್ಲಿಡಲು ಮುಖ್ಯಮಂತ್ರಿ ಬೇಅಂತ್ ಸಿಂಗ್ ಮತ್ತು ಪೊಲೀಸ್ ವರಿಷ್ಠ ಕೆ.ಪಿ.ಎಸ್. ಗಿಲ್‌ಗೆ ಎಲ್ಲ ಅಧಿಕಾರವನ್ನೂ ನೀಡಿದರು. ಅವರ ಯತ್ನ ಯಶ ಕಂಡಿತು. ಇತ್ತ, ಇಸ್ಲಾಮಿಕ್ ರಾಷ್ಟ್ರಗಳನ್ನು ತೃಪ್ತಿಪಡಿಸುವ ಸಲುವಾಗಿ ಇಸ್ರೇಲನ್ನು ದೂರವಿಟ್ಟಿರುವುದು ಸರಿಯಲ್ಲ ಎಂದರಿತ ರಾವ್, "Look East" (ಆಗ್ನೇಯ ಏಷ್ಯಾ ರಾಷ್ಟ್ರಗಳ ಜತೆ ಸ್ನೇಹ ಸಂಬಂಧ) ಪಾಲಿಸಿಯನ್ನು

ಚಾಲ್ತಿಗೆ ತಂದರು. ಇಸ್ರೇಲ್ ಜತೆ ಮೊಟ್ಟಮೊದಲ ಬಾರಿಗೆ ರಾಜತಾಂತ್ರಿಕ ಸಂಬಂಧ ಆರಂಭಿಸಿದರು. ಚೀನಾಕ್ಕೂ ಸ್ನೇಹಹಸ್ತ ಚಾಚಿದರು. ಗೌಪ್ಯ ಅಣು ಕಾರ್ಯಕ್ರಮವನ್ನೂ ಆರಂಭಿಸಿದರು. ಇವೆಲ್ಲದರ ಮಧ್ಯೆ, ಅರ್ಜುನ್ ಸಿಂಗ್, ಎಸ್.ಬಿ. ಚವ್ಹಾಣ್, ಮಾಧವ್‌ರಾವ್ ಸಿಂಧಿಯಾ, ಎನ್.ಡಿ. ತಿವಾರಿ, ಜಿತೇಂದ್ರ ಪ್ರಸಾದ್ ಅವರಂತಹ ರಾಜಕೀಯ ವೈರಿಗಳನ್ನೂ ಮಟ್ಟಹಾಕಬೇಕಾಗಿ ಬಂತು. ಹವಾಲಾ ಹಗರಣವನ್ನು ಸೃಷ್ಟಿಸಿ ವಿರೋಧಪಕ್ಷಗಳ ಬಾಯಿ ಮುಚ್ಚಿಸಬೇಕಾಗಿ ಬಂತು. ಆದರೂ 'ಮಂಡಲ'ವೆಂಬ ಮೀಸಲಾತಿ ಭೂತವನ್ನು ಆರ್ಥಿಕ ಉದಾರೀಕರಣದ ಮೂಲಕ ಸೊಲ್ಲಡಗಿಸಿದ್ದು ಸಾಮಾನ್ಯ ಮಾತಲ್ಲ. ಜತೆಗೆ ವಿ.ಪಿ. ಸಿಂಗ್ ಮತ್ತು ಚಂದ್ರಶೇಖರ್ ಅವರಿಂದಾಗಿ ತಲೆದೋರಿದ್ದ ರಾಜಕೀಯ ಅಸ್ಥಿರತೆಯನ್ನು ಕೊನೆಗಾಣಿಸಿದರು.

ಇಂತಹ ನರಸಿಂಹರಾವ್ ಡಿಸೆಂಬರ್ 23ರಂದು ನಮ್ಮನ್ನಗಲಿದಾಗ, ಸೂಕ್ತ ಗೌರವ ತೋರುವ ಬದಲು ಅವರ ಪಾರ್ಥಿವ ಶರೀರವನ್ನು ಒಳಕ್ಕೆ ಕೊಂಡೊಯ್ಯದಂತೆ ಎಐಸಿಸಿ ಕಚೇರಿಯ ಗೇಟ್ ಬಳಿಯೇ ತಡೆದ ಕಾಂಗ್ರೆಸ್ ಕಮಂಗಿಗಳು, ಕಡೆಗೂ ಅವಮಾನಿಸಿದ್ದಾರೆ. 'ಮಹಾತ್ಯಾಗಿ' ಸೋನಿಯಾ, ರಾವ್ ಅವರ ಅಂತ್ಯಸಂಸ್ಕಾರದ ವೇಳೆ ಖುದ್ದಾಗಿ ಹಾಜರಾಗುವಂತಹ ಕನಿಷ್ಠ ಸೌಜನ್ಯವನ್ನೂ ತೋರಿಲ್ಲ. ಅರೆಬೆಂದ ರಾವ್ ಶರೀರ ಕಾಂಗ್ರೆಸ್‌ನ ಧೂರ್ತತನವನ್ನು ಮತ್ತೊಮ್ಮೆ ಹೊರಹಾಕಿದೆ. ನಿಜಗುಣ ಬಯಲಾಗಿದೆ.

ಇನ್ನು ನಾವೂ ಕೂಡ ರಾವ್ ಅವರನ್ನು ಸುಧಾರಣಾವಾದಿ, ವಿದ್ವಾಂಸ, ವಿಧ್ವಂಸಕ, ವಿನಾಶಕ, ವಿಲನ್... ಏನು ಬೇಕಾದರೂ ಕರೆಯೋಣ. ಲಕೂಭಾಯ್ ಪಾಠಕ್, ಸೈಂಟ್ ಕೀಟ್ಸ್, ಜೆಎಂಎಂ ಲಂಚ ಪ್ರಕರಣ, ಫೋರ್ಜರಿ, ಯೂರಿಯಾ ಹಗರಣ, ಸಕ್ಕರೆ ಹಗರಣ, ಷೇರುಪೇಟೆ ಹಗರಣಗಳ ಜಪ ಮಾಡೋಣ. ಆದರೆ ಇವತ್ತು ಹೊಸ ವರ್ಷದ ಹೊಸ್ತಿಲಲ್ಲಿ ನಿಂತು ಭವ್ಯ ಭವಿಷ್ಯದ ಬಗ್ಗೆ ನಾವು ಕನಸು ಕಾಣುವಂತಾಗಿದ್ದರೆ, ಚೀನಾಕ್ಕೆ ಪೈಪೋಟಿ ನೀಡುವಂತಾಗಿದ್ದರೆ, ನಮ್ಮ ವಿದೇಶಿ ವಿನಿಮಯ ಮೀಸಲು ನಿಧಿ 120 ಶತಕೋಟಿ ಡಾಲರ್ ದಾಟಿದ್ದರೆ ಅದಕ್ಕೆ ನರಸಿಂಹರಾವ್ ಅವರೇ ಕಾರಣ!

ಅವರು ಚಿತೆಯೇರಿ ಇಂದಿಗೆ ಒಂದು ವಾರವಾಯಿತು. ಅವರನ್ನು 'ಭಾರತದ ಅಣುಶಕ್ತಿಯ ನಿಜವಾದ ಪಿತಾಮಹ' ಎಂದು ಹೊಗಳಿದ ಮಾಜಿ ಪ್ರಧಾನಿ ವಾಜಪೇಯಿಯವರ ಮುಕ್ತ ಮಾತುಗಳು ಸುನಾಮಿ ಅಲೆಯಲ್ಲಿ ಕೊಚ್ಚಿಹೋಗದಿರಲಿ.

ರಾವ್ ನೆನಪು ಹಸಿಯಾಗಿರಲಿ.

ಪ್ರತಾಪ್‌ರ ಲೇಖನಗಳು ಬರೀ ಲೇಖನಗಳಲ್ಲ, ಅವು ಒಮ್ಮೊಮ್ಮೆ ತಾತ್ವಿಕ ನೆಲೆಗಟ್ಟಿನ ಮೇಲೆ ಕಟ್ಟಿದ ಗಟ್ಟಿ ಗೋಪುರಗಳೆನಿಸಿದರೆ, ಇನ್ನೊಮ್ಮೆ ವೈಚಾರಿಕ ತಳಹದಿಯ ಮೇಲೆ ನಿರ್ಮಿಸಿದ ಸೌಧವೆನಿಸುತ್ತವೆ, ಮತ್ತೊಮ್ಮೆ ಕೋಲ್ಮಿಂಚಿನಂತೆ ಹೊಳೆದರೆ, ಮಗದೊಮ್ಮೆ ಸಿಡಿಲಿನಂತೆ ಆರ್ಭಟಿಸುತ್ತವೆ. ಚಿಂತಕರನ್ನು ಚಿಂತನೆಗೊಳಪಡಿಸುವ ಚಾತುರ್ಯ ಪ್ರತಾಪ್ ಅವರಿಗೆ ದಕ್ಕಿದ ಲೇಖನ ಕೌಶಲ್ಯವೆಂದರೆ ತಪ್ಪಾಗಲಿಕ್ಕಿಲ್ಲ.

ಡಾ. ಅಶೋಕ ಕುಳೆಕುಮಟಗಿ
ಕೋರವಾರ(ಸಿಂದಗಿ)



# 9 ದೇಶಕ್ಕಾಗಿ ರಕ್ತ ಚೆಲ್ಲಿದರೂ ಮರೆಯುವುದರಲ್ಲಿ ನಾವು ನಿಸ್ಸೀಮರು!



ವ್ಯಾಪಾರಿ ಹಡಗೊಂದರಲ್ಲಿ ಕೆಲಸ ದೊರೆತಿತ್ತು. ಯೂನಿಫಾರ್ಮ್ ಕೂಡ ಸಿದ್ಧಗೊಂಡಿತ್ತು. ಟಿಕೆಟ್ ಬುಕ್ ಆಗಿತ್ತು. ಇನ್ನೇನು ಹಾಂಕಾಂಗ್‌ಗೆ ಹಾರಬೇಕು. ಆದೇಕೋ, ವಿಕ್ರಮ್ ಮನಸ್ಸನ್ನೇ ಬದಲಾಯಿಸಿದ. ಡಾಲರ್‌ನಲ್ಲಿ ಸಂಬಳ ನೀಡುವ ಸಂಸ್ಥೆಯ ಯೂನಿಫಾರ್ಮ್‌ಗೆ ಬದಲು, ದೇಶದ ಗಡಿ ಕಾಯುವ ಸೈನಿಕನ ಸಮವಸ್ತ್ರ ತೊಡುವ ನಿರ್ಧಾರ ಕೈಗೊಂಡಿದ್ದ!

ಭಾರತ ಕಡೆ ಬಾರಿ ರಣರಂಗಕ್ಕಿಳಿದಿದ್ದು 1971ರಲ್ಲಿ. ಅದು ಬಾಂಗ್ಲಾ ಯುದ್ಧ. ಮೂರು ವರ್ಷಗಳ ನಂತರ, ಅಂದರೆ ಸೆಪ್ಟೆಂಬರ್ 9, 1974ರಲ್ಲಿ ಅವಳಿಗಳಾದ ವಿಕ್ರಮ್ ಮತ್ತು ವಿಶಾಲ್ ಜನಿಸಿದರು. ಅಪ್ಪ ಜಿ.ಎಲ್. ಬಾತ್ರಾ ಚಂಡೀಗಢ ಸಮೀಪದ ಪಾಲಂಪುರದ ಶಾಲೆಯೊಂದರ ಹೆಡ್ ಮಾಸ್ತರ್. ಅಮ್ಮ ಜೈಕಮಲ್ ಶಿಕ್ಷಕಿ. ಮಧ್ಯಮ ವರ್ಗದ ಕುಟುಂಬ ಅದು.

ಅವತ್ತು ವಿಕ್ರಮ್ ಬಾತ್ರಾ ಮನೆಗೆ ಬಂದಿದ್ದ. ಮಿಲಿಟರಿ ಸೇರಿ 18 ತಿಂಗಳಾಗಿತ್ತು. ಮೊದಲ ಬಾರಿಗೆ ಅಮ್ಮ-ಅಪ್ಪ ಮತ್ತು ತಮ್ಮನನ್ನು ನೋಡಲು ಆಸೆಯಿಂದ ಬಂದಿದ್ದ. ಅದು ರಂಗುರಂಗಿನ ಹೋಳಿ ಹಬ್ಬದ ಸಂದರ್ಭ. ಪಾಲಂಪುರದಲ್ಲೊಂದು ಹೋಟೆಲ್ ಇದೆ. ನೇವುಗಲ್ ಕೆಫೆ! ಪಕ್ಕದಲ್ಲೇ ನೇವುಗಲ್ ನದಿ ಕೂಡ ಹರಿಯುತ್ತಾಳೆ. ವಿಕ್ರಮ್ ಹೋಟೆಲ್‌ಗೆ ಬಂದಿದ್ದ. ಅಲ್ಲೇ ಇದ್ದ ಪರಿಚಿತ ವ್ಯಕ್ತಿಯೊಬ್ಬರು ವಿಕ್ರಮ್‌ನನ್ನು ಕಂಡಿದ್ದೇ ತಡ ಯುದ್ಧದ ಬಗ್ಗೆ ಮಾತನಾಡಲಾರಂಭಿಸಿದರು. 'ಯುದ್ಧ ಪ್ರಾರಂಭವಾಗಿದೆ. ಯಾರಿಗೆ ಗೊತ್ತು.... ಯಾವ ಕ್ಷಣದಲ್ಲಿ ಬೇಕಾದರೂ ನಿನಗೆ ಕರೆ ಬರಬಹುದು. ಎಚ್ಚರಿಕೆಯಿಂದಿರು....' ಎಂದು ಕಿವಿಮಾತು ಹೇಳಿದರು.

ಅದುವರೆಗೂ ಶಾಂತಚಿತ್ತನಾಗಿ ಕೇಳಿಸಿಕೊಳ್ಳುತ್ತಿದ್ದ ವಿಕ್ರಮ್, 'ತಲೆಕೆಡಿಸಿಕೊಳ್ಳಬೇಡಿ. ಒಂದೋ ಗೆದ್ದು ತ್ರಿವರ್ಣ ಧ್ವಜವನ್ನು ಹಾರಿಸಿ ಬರುತ್ತೇನೆ, ಇಲ್ಲವೇ ಅದೇ ಧ್ವಜದಲ್ಲಿ ಸುತ್ತಿರುವ ನನ್ನ ಹೆಣ ಬರುತ್ತೆ' ಅಂದಿದ್ದ!!

ಬಹುಶಃ ಆ ವ್ಯಕ್ತಿಗೆ ತಿಳಿದಿರಲಿಲ್ಲ, ತಾನು ವಿಕ್ರಮ್ ಜತೆ ಕಡೆ ಬಾರಿ ಮಾತನಾಡುತ್ತಿದ್ದೇನೆ ಎಂದು...... 1999, ಜೂನ್ 1ರಂದು ಕಾರ್ಗಿಲ್‌ನಲ್ಲಿ ಸೇವೆಗೆ ಹಾಜರಾಗಬೇಕೆಂದು ಸೇನೆಯಿಂದ ಆದೇಶ ಬಂದಿತ್ತು! ಅಪ್ಪ, ಅಮ್ಮ, ತಮ್ಮ ಮತ್ತು ಆಪ್ತ ಸ್ನೇಹಿತರು ಬೀಳ್ಕೊಟ್ಟಿದ್ದೂ ಆಯಿತು. ಆದರೆ ಬಾತ್ರಾ ದಂಪತಿಗಳು ಮತ್ತೆ ಮಗನನ್ನು ಕಂಡಿದ್ದು ಟೀವಿಯಲ್ಲಿ! ಹೀರೊ ಆಗಿ! ಆನಂತರ ಹೆಣವಾಗಿ!!

ಕಾರ್ಗಿಲ್‌ನ ಪರ್ವತ ಶ್ರೇಣಿಗಳು ಅಂದು ರಣರಂಗವಾಗಿದ್ದವು. ಕಾಶ್ಮೀರ ಕದಡಿತ್ತು. ಸಾವಿರಾರು ಅಡಿ ಎತ್ತರದಲ್ಲಿರುವ ಶಿಖರಗಳ ತುದಿಯಲ್ಲಿ ಪಾಕ್ ಭಯೋತ್ಪಾದಕರು ಬಂಕರ್ ತೋಡಿಕೊಂಡಿದ್ದರು. ಪವಾಡದಿಂದ ಮಾತ್ರ ಶತ್ರುಗಳನ್ನು ಕೊಲ್ಲಲು ಸಾಧ್ಯ ಎಂದೇ ಭಾವಿಸಲಾಗಿತ್ತು. ದಾರಿ ಕಾಣದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರು ವಾಯು ದಾಳಿಗೆ ಆದೇಶ

ನೀಡಿದ್ದರು. ಆದರೂ ಶಿಖರವೇರಿಯೇ ಭಯೋತ್ಪಾದಕರನ್ನು ಕೊಲ್ಲಬೇಕಿತ್ತು.

17 ಸಾವಿರ ಅಡಿ ಎತ್ತರದಲ್ಲಿರುವ '5140' ಶಿಖರದ ತುದಿಗೆ ಮೊದಲ ಬೆಳಕು ಬೀಳುತ್ತದೆ. ಏಕೆಂದರೆ ದ್ರಾಸ್ ವಿಭಾಗದಲ್ಲಿದ್ದ 5140 ಕಾಶ್ಮೀರ ಕಣಿವೆಯಲ್ಲೇ ಅತಿ ಎತ್ತರದ ಶಿಖರ. ಜೂನ್ 19ರಂದು ದಟ್ಟ ಕತ್ತಲು ಮುಸುಕಿತ್ತು. ಹಾಗಾಗಿ ಭಯೋತ್ಪಾದಕರನ್ನು ಕೊಲ್ಲುವಂತಹ ಆತ್ಮಘಾತುಕ ಕಾರ್ಯಕ್ಕೆ ಕೆಲವೇ ಗಂಟೆಗಳು ಬಾಕಿ ಉಳಿದಿದ್ದವು. ಬೆಳಗಾದರೆ ಶಿಖರವೇರಲು ಸಾಧ್ಯವೇ ಇಲ್ಲ. ಶತ್ರುವಿನ ಗುಂಡಿಗೆ ಎದೆಗೊಡಬೇಕಾಗುತ್ತದೆ. ಕಾರ್ಗಿಲ್ ಯುದ್ಧ ಆರಂಭವಾಗಿ ಐದು ವಾರಗಳಾಗಿತ್ತು. ಆದರೂ ಹೆಚ್ಚಿನ ಯಶಸ್ಸು ಸಾಧಿಸಿರಲಿಲ್ಲ. ಏಕೆಂದರೆ 5140 ಶಿಖರವನ್ನು ವಶಪಡಿಸಿಕೊಂಡರೆ ಮಾತ್ರ ಮುಂದಿನ ಹಾದಿ. ಹಾಗಾಗಿ ಜೂನ್ 19ರ ರಾತ್ರಿ 5140 ಶಿಖರವನ್ನು ಜಯಿಸಲೇಬೇಕೆಂದು ಲೆಫ್ಟಿನೆಂಟ್ ವಿಕ್ರಮ್ ಬಾತ್ರಾ ಮತ್ತು ಕ್ಯಾಪ್ಟನ್ ಸಂಜೀವ್ ಜಾಮ್ವಾಲ್‌ಗೆ ಆದೇಶ ನೀಡಲಾಗಿತ್ತು. ಅದು ದೇಶದ ಘನತೆಯ ಪ್ರಶ್ನೆಯೂ ಆಗಿತ್ತು. ಕಡಿದಾದ ಭಾಗದ ಮೂಲಕ ಶಿಖರವನ್ನೇರುವಂತೆ ತಮ್ಮ ಸಂಗಡಿಗರಿಗೆ ನಿರ್ದೇಶನ ನೀಡಿದ ಬಾತ್ರಾ, ತಾನು ಹಿಂಬದಿಯಿಂದ ದಾಳಿ ಮಾಡಲು ನಿರ್ಧರಿಸಿದ.

ಬೆಳಗಾಗುವಷ್ಟರಲ್ಲಿ ಉತ್ತುಂಗದಲ್ಲಿದ್ದ ಬಂಕರ್ ಸ್ಫೋಟಗೊಂಡಿತ್ತು. ಶತ್ರುಗಳು ಹೆಣವಾಗಿದ್ದರು. ವಿಕ್ರಮ್ ಬಾತ್ರಾ ನೇತೃತ್ವದ '13 ಜಮ್ಮು-ಕಾಶ್ಮೀರ್ ರೈಫಲ್ಸ್' ಸೇನಾ ತುಕಡಿ ನಿರ್ಣಾಯಕ ಕಾಳಗದಲ್ಲಿ ಗೆದ್ದಿತ್ತು! ಆತನ ಸಾಹಸಕ್ಕೆ ದೇಶವೇ ಬೆರಗಾಗಿತ್ತು. ಟೀವಿ ಪರದೆಯ ಮೇಲೆ ಬಾತ್ರಾನದ್ದೇ ಚಿತ್ರ. ಪತ್ರಿಕೆಗಳಲ್ಲಿ ಆತನದ್ದೇ ಗುಣಗಾನ. ಬೆಳಗಾಗುವಷ್ಟರಲ್ಲಿ ಕಾರ್ಗಿಲ್ ಯುದ್ಧದ ಪ್ರೇರಣಾ ಶಕ್ತಿಯಾಗಿ ಹೊರಹೊಮ್ಮಿದ್ದ. ಜನರಲ್ ವೇದ್ ಪ್ರಕಾಶ್ ಮಲಿಕ್ ಸ್ವತಃ ಕರೆ ಮಾಡಿ ಬಾತ್ರಾಗೆ ಅಭಿನಂದನೆ ಸಲ್ಲಿಸಿದರು.

ಸೆಟಲೈಟ್ ಫೋನ್ ಕೈಗೆತ್ತಿಕೊಂಡ ವಿಕ್ರಮ್, 'ಅಪ್ಪಾ, ಶತ್ರುವಿನ ನೆಲೆಯನ್ನು ವಶಪಡಿಸಿಕೊಂಡಿದ್ದೇನೆ' ಎಂದಾಗ, ಅದು ತಮ್ಮ ಜೀವಮಾನದ ಅತ್ಯಂತ ಹೆಮ್ಮೆಯ ಕ್ಷಣ ಎಂದು ಜಿ.ಎಲ್. ಬಾತ್ರಾ ಖುಷಿಪಟ್ಟಿದ್ದರು. ಶೌರ್ಯದ ಪ್ರತೀಕವಾಗಿರುವ 'ವಿಕ್ರಮ್' ಎಂಬ ಹೆಸರನ್ನು ತಮ್ಮ ಮಗನಿಗಿಟ್ಟಿದ್ದರು. ಹೆಸರಿಗೆ ತಕ್ಕಂಥ ಸಾಧನೆಯೂ ಆದಾಗಿತ್ತು. 5140ನೇ ಶಿಖರದ ವಶ, ಟೈಗರ್ ಹಿಲ್ಸ್‌ನ ಜಯಕ್ಕೆ ಕಾರಣವಾಯಿತು. ಅದು ಕಾರ್ಗಿಲ್ ಯುದ್ಧದ ಮಹತ್ವದ ಘಟ್ಟ. ಮುಂದಿನ ಹಾದಿಯನ್ನು ಸುಗಮಗೊಳಿಸಿದ ಸಾಧನೆ. ಇದಾಗಿ 9 ದಿನಗಳ ನಂತರ, ವಿಕ್ರಮ್‌ಗೆ ಮತ್ತೆ ಕರೆಬಂತು. ಅದು ಮತ್ತೊಂದು ಮಹತ್ವದ ಕಾರ್ಯಾಚರಣೆಯ ಜವಾಬ್ದಾರಿಯಾಗಿತ್ತು!

'ವಿಕ್ರಮ್, ನೀನು ಮಹತ್ವದ ಕಾರ್ಯಾಚರಣೆಗೆ ತೆರಳುತ್ತಿರುವೆ. ಈ ಕ್ಷಣದಲ್ಲಿ ನಿನ್ನ ಮನದಲ್ಲೇನಿದೆ?' ಎಂದು ಟೀವಿ ವರದಿಗಾರರೊಬ್ಬರು ಪ್ರಶ್ನಿಸಿದರು. ಇತ್ತ ಮನೆಯಲ್ಲಿ ಅಪ್ಪ-ಅಮ್ಮ ಟೀವಿ ಪರದೆಯ ಮೇಲೆ ಮಗನನ್ನೇ ದಿಟ್ಟಿಸುತ್ತಿದ್ದರು. 'ಸರಕಾರ ಮತ್ತು ಸಮಾಜ ದೇಶಕ್ಕಾಗಿ ಪ್ರಾಣ

ತ್ರೆತ್ತವರ ಕುಟುಂಬದ ಯೋಗಕ್ಷೇಮ ನೋಡಿಕೊಳ್ಳುತ್ತದೆಂದು ಆಶಿಸುತ್ತೇನೆ' ಎಂದ ವಿಕ್ರಮ್ ಬಾತ್ರಾ ಕ್ಯಾಮೆರಾದಾಚೆ ಮುಖ ತಿರುಗಿಸಿದ!

ಅಪ್ಪ ಜಿ.ಎಲ್. ಬಾತ್ರಾಗೆ ಅರ್ಥವಾಯಿತು. ಬಿಕ್ಕಳಿಸಿ ಅಳಲಾರಂಭಿಸಿದರು. ವಾಪಸ್ ಬರುವ ಬಗ್ಗೆ ವಿಕ್ರಮ್ ಮನದಲ್ಲಿ ಅನುಮಾನಗಳಿರುವುದು ಅವರಿಗೆ ಅರಿವಾಗಿತ್ತು. ಇತ್ತ ಪತ್ನಿ ಪ್ರಶ್ನಿಸಿದರೂ ತಮ್ಮ ಮನಸ್ಸಿನಲ್ಲೇನಿದೆ ಎಂಬುದನ್ನು ಹೇಳುವ ಧೈರ್ಯ ಅವರಿಗಿರಲಿಲ್ಲ. ಹೇಗೆ ತಾನೇ ತನ್ನ ಮಗ ವಾಪಸ್ ಬರುವುದಿಲ್ಲ ಎಂದು ಹೇಳಲು ಸಾಧ್ಯ?

16 ಸಾವಿರ ಅಡಿ ಎತ್ತರದಲ್ಲಿರುವ 4875 ಶಿಖರವನ್ನು ಜಯಿಸುವ ಜವಾಬ್ದಾರಿ ವಿಕ್ರಮ್‌ನ ಹೆಗಲೇರಿತ್ತು. ಮಂಜು ಮುಸುಕಿರುವ ವಾತಾವರಣದಲ್ಲಿ 80 ಡಿಗ್ರಿ ಕಡಿದಾದ ಶಿಖರವನ್ನು ಏರುವುದು ಸಾಮಾನ್ಯ ಮಾತಾಗಿರಲಿಲ್ಲ. 'ಶೇರ್ ಷಾ' ಎಂದೇ ಖ್ಯಾತಿ ಪಡೆದಿರುವ ವಿಕ್ರಮ್ ಬಾತ್ರಾ ಬರಲಿದ್ದಾನೆ ಎಂಬ ವಿಷಯ ಶತ್ರುಗಳಿಗೂ ಗೊತ್ತಾಗಿತ್ತು. ಜುಲೈ 8ರ ರಾತ್ರಿ ವಿಕ್ರಮ್ ಮತ್ತು ಮತ್ತೊಬ್ಬ ಯುವ ಸೇನಾಧಿಕಾರಿ ಅನೂಜ್ ನಯ್ಯರ್ ಶತ್ರುಗಳ ಮೇಲೆ ಪ್ರತಿ ದಾಳಿ ಆರಂಭಿಸಿದರು. ಶಿಖರದ ಪ್ರತಿ ಹಂತದಲ್ಲೂ ಇದ್ದ ಶತ್ರುಗಳ ಬಂಕರ್‌ಗಳನ್ನು ನಾಶಪಡಿಸುತ್ತಲೇ ಸಾಗಿದರು. ಅಂತಿಮ ವಿಜಯ ಇನ್ನೇನು ಬಂತು ಎನ್ನುವಷ್ಟರಲ್ಲಿ ಶತ್ರುಗಳು ನಡೆಸಿದ ಸ್ಫೋಟದಲ್ಲಿ ಕಿರಿಯ ಅಧಿಕಾರಿಯೊಬ್ಬನ ಕಾಲುಗಳಿಗೆ ತೀವ್ರ ಗಾಯಗಳಾದವು. ಆತನನ್ನು ಬಂಕರ್‌ಗೆ ಎತ್ತಿಕೊಂಡು ಬರುವೆ ಎಂದು ಸನಿಹದಲ್ಲೇ ಇದ್ದ ಸುಬೇದಾರ್ ಹೇಳಿದರೂ ವಿಕ್ರಮ್ ಕೇಳಲಿಲ್ಲ. 'ನಿನಗೆ ಮಕ್ಕಳಿದ್ದಾರೆ, ದೂರ ಸರಿ' ಎಂದು ತಾನೇ ಹೊರ ನೆಗೆದ. ಶತ್ರುವಿನ ಗುಂಡು ಎದೆಯನ್ನೇ ಹೊಕ್ಕಿತು! ಇನ್ನೊಂದು ಗುಂಡು ಸೊಂಟವನ್ನು ಸೀಳಿತು. ಆದರೂ ನೆಲಕ್ಕುರುಳುವ ಮುನ್ನ ಬಾತ್ರಾ ಬಂದೂಕು ಐವರು ಭಯೋತ್ಪಾದಕರನ್ನು ಕೊಂದಿತ್ತು. ಬೆಳಗಾಗುವಷ್ಟರಲ್ಲಿ 4875 ಶಿಖರವೇನೋ ಕೈವಶವಾಯಿತು. ಆದರೆ ವಿಕ್ರಮ್‌ನ ಪ್ರೇಯಸಿ, ಮದುವೆಯಾಗುವ ಮುನ್ನವೇ ವಿಧವೆಯಾಗಿದ್ದಳು. ಅನೂಜ್ ನಯ್ಯರ್ ಕೂಡ ಹುತಾತ್ಮನಾಗಿದ್ದ.

ಇತ್ತ ಸೈನಿಕರಿಬ್ಬರು ಪಾಲಂಪುರದಲ್ಲಿ ಬಾತ್ರಾ ಮನೆಗೆ ಬಂದಾಗ ಅಪ್ಪ-ಅಮ್ಮ ಇಬ್ಬರೂ ಶಾಲೆಗೆ ಹೋಗಿದ್ದರು. ಅಮ್ಮ ಕಮಲ್ ಮನೆಗೆ ಬರುತ್ತಿದ್ದಂತೆ ಸೈನಿಕರು ಬಂದಿರುವ ವಿಷಯ ತಿಳಿದಾಗ ಅಳಲಾರಂಭಿಸಿದರು. ಸೈನಿಕರು ಬರುವುದು ಕೆಟ್ಟ ಸುದ್ದಿ ಮುಟ್ಟಿಸಲು ಮಾತ್ರ ಎಂಬುದು ಅವರಿಗೆ ತಿಳಿದಿತ್ತು. ಅದೇ ವೇಳೆಗೆ ಜಿ.ಎಲ್. ಬಾತ್ರಾ ಕೂಡ ಆಗಮಿಸಿದರು. ಹೊರಗೆ ಕಾದಿರುವಂತೆ ಸೈನಿಕರಿಗೆ ಸೂಚಿಸಿದ ಬಾತ್ರಾ, ದೇವರ ಕೋಣೆಗೆ ಹೋಗಿ ತಲೆಬಾಗಿ ಹೊರಬಂದರು. ಆದರೆ 'ಬಾತ್ರಾಸಾಬ್, ವಿಕ್ರಮ್ ಇನ್ನಿಲ್ಲ'! ಎಂಬ ಮಾತು ಕೇಳಿದ ಕೂಡಲೇ ಅಲ್ಲೇ ಕುಸಿದರು. ಅಮ್ಮ ಕೂಡ ಬಿಕ್ಕಳಿಸಲಾರಂಭಿಸಿದರು.

ನೇವುಗಲ್ ಕೆಫೆಯಲ್ಲಿ ತಾನೇ ಹೇಳಿದಂತೆ, ವಿಕ್ರಮ್ ತ್ರಿವರ್ಣ ಧ್ವಜದಲ್ಲಿ ಹೆಣವಾಗಿ

ನೀಡಿದ್ದರು. ಆದರೂ ಶಿಖರವೇರಿಯೇ ಭಯೋತ್ಪಾದಕರನ್ನು ಕೊಲ್ಲಬೇಕಿತ್ತು.

17 ಸಾವಿರ ಅಡಿ ಎತ್ತರದಲ್ಲಿರುವ '5140' ಶಿಖರದ ತುದಿಗೆ ಮೊದಲ ಬೆಳಕು ಬೀಳುತ್ತದೆ. ಏಕೆಂದರೆ ದ್ರಾಸ್ ವಿಭಾಗದಲ್ಲಿದ್ದ 5140 ಕಾಶ್ಮೀರ ಕಣಿವೆಯಲ್ಲೇ ಅತಿ ಎತ್ತರದ ಶಿಖರ. ಜೂನ್ 19ರಂದು ದಟ್ಟ ಕತ್ತಲು ಮುಸುಕಿತ್ತು. ಹಾಗಾಗಿ ಭಯೋತ್ಪಾದಕರನ್ನು ಕೊಲ್ಲುವಂತಹ ಆತ್ಮಘಾತುಕ ಕಾರ್ಯಕ್ಕೆ ಕೆಲವೇ ಗಂಟೆಗಳು ಬಾಕಿ ಉಳಿದಿದ್ದವು. ಬೆಳಗಾದರೆ ಶಿಖರವೇರಲು ಸಾಧ್ಯವೇ ಇಲ್ಲ. ಶತ್ರುವಿನ ಗುಂಡಿಗೆ ಎದೆಗೊಡಬೇಕಾಗುತ್ತದೆ. ಕಾರ್ಗಿಲ್ ಯುದ್ಧ ಆರಂಭವಾಗಿ ಐದು ವಾರಗಳಾಗಿತ್ತು. ಆದರೂ ಹೆಚ್ಚಿನ ಯಶಸ್ಸು ಸಾಧಿಸಿರಲಿಲ್ಲ. ಏಕೆಂದರೆ 5140 ಶಿಖರವನ್ನು ವಶಪಡಿಸಿಕೊಂಡರೆ ಮಾತ್ರ ಮುಂದಿನ ಹಾದಿ. ಹಾಗಾಗಿ ಜೂನ್ 19ರ ರಾತ್ರಿ 5140 ಶಿಖರವನ್ನು ಜಯಿಸಲೇಬೇಕೆಂದು ಲೆಫ್ಟಿನೆಂಟ್ ವಿಕ್ರಮ್ ಬಾತ್ರಾ ಮತ್ತು ಕ್ಯಾಪ್ಟನ್ ಸಂಜೀವ್ ಜಾಮ್ವಾಲ್‌ಗೆ ಆದೇಶ ನೀಡಲಾಗಿತ್ತು. ಅದು ದೇಶದ ಘನತೆಯ ಪ್ರಶ್ನೆಯೂ ಆಗಿತ್ತು. ಕಡಿದಾದ ಭಾಗದ ಮೂಲಕ ಶಿಖರವನ್ನೇರುವಂತೆ ತಮ್ಮ ಸಂಗಡಿಗರಿಗೆ ನಿರ್ದೇಶನ ನೀಡಿದ ಬಾತ್ರಾ, ತಾನು ಹಿಂಬದಿಯಿಂದ ದಾಳಿ ಮಾಡಲು ನಿರ್ಧರಿಸಿದ.

ಬೆಳಗಾಗುವಷ್ಟರಲ್ಲಿ ಉತ್ತುಂಗದಲ್ಲಿದ್ದ ಬಂಕರ್ ಸ್ಫೋಟಗೊಂಡಿತ್ತು. ಶತ್ರುಗಳು ಹೆಣವಾಗಿದ್ದರು. ವಿಕ್ರಮ್ ಬಾತ್ರಾ ನೇತೃತ್ವದ '13 ಜಮ್ಮು-ಕಾಶ್ಮೀರ್ ರೈಫಲ್ಸ್' ಸೇನಾ ತುಕಡಿ ನಿರ್ಣಾಯಕ ಕಾಳಗದಲ್ಲಿ ಗೆದ್ದಿತ್ತು! ಆತನ ಸಾಹಸಕ್ಕೆ ದೇಶವೇ ಬೆರಗಾಗಿತ್ತು. ಟೀವಿ ಪರದೆಯ ಮೇಲೆ ಬಾತ್ರಾನದ್ದೇ ಚಿತ್ರ. ಪತ್ರಿಕೆಗಳಲ್ಲಿ ಆತನದ್ದೇ ಗುಣಗಾನ. ಬೆಳಗಾಗುವಷ್ಟರಲ್ಲಿ ಕಾರ್ಗಿಲ್ ಯುದ್ಧದ ಪ್ರೇರಣಾ ಶಕ್ತಿಯಾಗಿ ಹೊರಹೊಮ್ಮಿದ್ದ. ಜನರಲ್ ವೇದ್ ಪ್ರಕಾಶ್ ಮಲಿಕ್ ಸ್ವತಃ ಕರೆ ಮಾಡಿ ಬಾತ್ರಾಗೆ ಅಭಿನಂದನೆ ಸಲ್ಲಿಸಿದರು.

ಸೆಟಲೈಟ್ ಫೋನ್ ಕೈಗೆತ್ತಿಕೊಂಡ ವಿಕ್ರಮ್, 'ಅಪ್ಪಾ, ಶತ್ರುವಿನ ನೆಲೆಯನ್ನು ವಶಪಡಿಸಿ ಕೊಂಡಿದ್ದೇನೆ' ಎಂದಾಗ, ಅದು ತಮ್ಮ ಜೀವಮಾನದ ಅತ್ಯಂತ ಹೆಮ್ಮೆಯ ಕ್ಷಣ ಎಂದು ಜಿ.ಎಲ್. ಬಾತ್ರಾ ಖುಷಿಪಟ್ಟಿದ್ದರು. ಶೌರ್ಯದ ಪ್ರತೀಕವಾಗಿರುವ 'ವಿಕ್ರಮ್' ಎಂಬ ಹೆಸರನ್ನು ತಮ್ಮ ಮಗನಿಗಿಟ್ಟಿದ್ದರು. ಹೆಸರಿಗೆ ತಕ್ಕಂಥ ಸಾಧನೆಯೂ ಅದಾಗಿತ್ತು. 5140ನೇ ಶಿಖರದ ವಶ, ಟೈಗರ್ ಹಿಲ್ಸ್‌ನ ಜಯಕ್ಕೆ ಕಾರಣವಾಯಿತು. ಅದು ಕಾರ್ಗಿಲ್ ಯುದ್ಧದ ಮಹತ್ವದ ಘಟ್ಟ. ಮುಂದಿನ ಹಾದಿಯನ್ನು ಸುಗಮಗೊಳಿಸಿದ ಸಾಧನೆ. ಇದಾಗಿ 9 ದಿನಗಳ ನಂತರ, ವಿಕ್ರಮ್‌ಗೆ ಮತ್ತೆ ಕರೆಬಂತು. ಅದು ಮತ್ತೊಂದು ಮಹತ್ವದ ಕಾರ್ಯಾಚರಣೆಯ ಜವಾಬ್ದಾರಿಯಾಗಿತ್ತು!

'ವಿಕ್ರಮ್, ನೀನು ಮಹತ್ವದ ಕಾರ್ಯಾಚರಣೆಗೆ ತೆರಳುತ್ತಿರುವೆ. ಈ ಕ್ಷಣದಲ್ಲಿ ನಿನ್ನ ಮನದಲ್ಲೇನಿದೆ?' ಎಂದು ಟೀವಿ ವರದಿಗಾರರೊಬ್ಬರು ಪ್ರಶ್ನಿಸಿದರು. ಇತ್ತ ಮನೆಯಲ್ಲಿ ಅಪ್ಪ-ಅಮ್ಮ ಟೀವಿ ಪರದೆಯ ಮೇಲೆ ಮಗನನ್ನೇ ದಿಟ್ಟಿಸುತ್ತಿದ್ದರು. 'ಸರಕಾರ ಮತ್ತು ಸಮಾಜ ದೇಶಕ್ಕಾಗಿ ಪ್ರಾಣ

ತ್ತೆತ್ತವರ ಕುಟುಂಬದ ಯೋಗಕ್ಷೇಮ ನೋಡಿಕೊಳ್ಳುತ್ತದೆಂದು ಆಶಿಸುತ್ತೇನೆ' ಎಂದ ವಿಕ್ರಮ್ ಬಾತ್ರಾ ಕ್ಯಾಮೆರಾದಾಚೆ ಮುಖ ತಿರುಗಿಸಿದ!

ಅಪ್ಪ ಜಿ.ಎಲ್. ಬಾತ್ರಾಗೆ ಅರ್ಥವಾಯಿತು. ಬಿಕ್ಕಳಿಸಿ ಅಳಲಾರಂಭಿಸಿದರು. ವಾಪಸ್ ಬರುವ ಬಗ್ಗೆ ವಿಕ್ರಮ್ ಮನದಲ್ಲಿ ಅನುಮಾನಗಳಿರುವುದು ಅವರಿಗೆ ಅರಿವಾಗಿತ್ತು. ಇತ್ತ ಪತ್ನಿ ಪ್ರಶ್ನಿಸಿದರೂ ತಮ್ಮ ಮನಸ್ಸಿನಲ್ಲೇನಿದೆ ಎಂಬುದನ್ನು ಹೇಳುವ ಧೈರ್ಯ ಅವರಿಗಿರಲಿಲ್ಲ. ಹೇಗೆ ತಾನೇ ತನ್ನ ಮಗ ವಾಪಸ್ ಬರುವುದಿಲ್ಲ ಎಂದು ಹೇಳಲು ಸಾಧ್ಯ?

16 ಸಾವಿರ ಅಡಿ ಎತ್ತರದಲ್ಲಿರುವ 4875 ಶಿಖರವನ್ನು ಜಯಿಸುವ ಜವಾಬ್ದಾರಿ ವಿಕ್ರಮ್‌ನ ಹೆಗಲೇರಿತ್ತು. ಮಂಜು ಮುಸುಕಿರುವ ವಾತಾವರಣದಲ್ಲಿ 80 ಡಿಗ್ರಿ ಕಡಿದಾದ ಶಿಖರವನ್ನು ಏರುವುದು ಸಾಮಾನ್ಯ ಮಾತಾಗಿರಲಿಲ್ಲ. 'ಶೇರ್ ಷಾ' ಎಂದೇ ಖ್ಯಾತಿ ಪಡೆದಿರುವ ವಿಕ್ರಮ್ ಬಾತ್ರಾ ಬರಲಿದ್ದಾನೆ ಎಂಬ ವಿಷಯ ಶತ್ರುಗಳಿಗೂ ಗೊತ್ತಾಗಿತ್ತು. ಜುಲೈ 8ರ ರಾತ್ರಿ ವಿಕ್ರಮ್ ಮತ್ತು ಮತ್ತೊಬ್ಬ ಯುವ ಸೇನಾಧಿಕಾರಿ ಅನೂಜ್ ನಯ್ಯರ್ ಶತ್ರುಗಳ ಮೇಲೆ ಪ್ರತಿ ದಾಳಿ ಆರಂಭಿಸಿದರು. ಶಿಖರದ ಪ್ರತಿ ಹಂತದಲ್ಲೂ ಇದ್ದ ಶತ್ರುಗಳ ಬಂಕರ್‌ಗಳನ್ನು ನಾಶಪಡಿಸುತ್ತಲೇ ಸಾಗಿದರು. ಅಂತಿಮ ವಿಜಯ ಇನ್ನೇನು ಬಂತು ಎನ್ನುವಷ್ಟರಲ್ಲಿ ಶತ್ರುಗಳು ನಡೆಸಿದ ಸ್ಫೋಟದಲ್ಲಿ ಕಿರಿಯ ಅಧಿಕಾರಿಯೊಬ್ಬನ ಕಾಲುಗಳಿಗೆ ತೀವ್ರ ಗಾಯಗಳಾದವು. ಆತನನ್ನು ಬಂಕರ್‌ಗೆ ಎತ್ತಿಕೊಂಡು ಬರುವೆ ಎಂದು ಸನಿಹದಲ್ಲೇ ಇದ್ದ ಸುಬೇದಾರ್ ಹೇಳಿದರೂ ವಿಕ್ರಮ್ ಕೇಳಲಿಲ್ಲ. 'ನಿನಗೆ ಮಕ್ಕಳಿದ್ದಾರೆ, ದೂರ ಸರಿ' ಎಂದು ತಾನೇ ಹೊರ ನೆಗೆದ. ಶತ್ರುವಿನ ಗುಂಡು ಎದೆಯನ್ನೇ ಹೊಕ್ಕಿತು! ಇನ್ನೊಂದು ಗುಂಡು ಸೊಂಟವನ್ನು ಸೀಳಿತು. ಆದರೂ ನೆಲಕ್ಕುರುಳುವ ಮುನ್ನ ಬಾತ್ರಾ ಬಂದೂಕು ಐವರು ಭಯೋತ್ಪಾದಕರನ್ನು ಕೊಂದಿತ್ತು. ಬೆಳಗಾಗುವಷ್ಟರಲ್ಲಿ 4875 ಶಿಖರವೇನೋ ಕೈವಶವಾಯಿತು. ಆದರೆ ವಿಕ್ರಮ್‌ನ ಪ್ರೇಯಸಿ, ಮದುವೆಯಾಗುವ ಮುನ್ನವೇ ವಿಧವೆಯಾಗಿದ್ದಳು. ಅನೂಜ್ ನಯ್ಯರ್ ಕೂಡ ಹುತಾತ್ಮನಾಗಿದ್ದ.

ಇತ್ತ ಸೈನಿಕರಿಬ್ಬರು ಪಾಲಂಪುರದಲ್ಲಿ ಬಾತ್ರಾ ಮನೆಗೆ ಬಂದಾಗ ಅಪ್ಪ-ಅಮ್ಮ ಇಬ್ಬರೂ ಶಾಲೆಗೆ ಹೋಗಿದ್ದರು. ಅಮ್ಮ ಕಮಲ್ ಮನೆಗೆ ಬರುತ್ತಿದ್ದಂತೆ ಸೈನಿಕರು ಬಂದಿರುವ ವಿಷಯ ತಿಳಿದಾಗ  ಅಳಲಾರಂಭಿಸಿದರು. ಸೈನಿಕರು ಬರುವುದು ಕೆಟ್ಟ ಸುದ್ದಿ ಮುಟ್ಟಿಸಲು ಮಾತ್ರ ಎಂಬುದು ಅವರಿಗೆ ತಿಳಿದಿತ್ತು. ಅದೇ ವೇಳೆಗೆ ಜಿ.ಎಲ್. ಬಾತ್ರಾ ಕೂಡ ಆಗಮಿಸಿದರು. ಹೊರಗೆ ಕಾದಿರುವಂತೆ ಸೈನಿಕರಿಗೆ ಸೂಚಿಸಿದ ಬಾತ್ರಾ, ದೇವರ ಕೋಣೆಗೆ ಹೋಗಿ ತಲೆಬಾಗಿ ಹೊರಬಂದರು. ಆದರೆ 'ಬಾತ್ರಾಸಾಬ್, ವಿಕ್ರಮ್ ಇನ್ನಿಲ್ಲ'! ಎಂಬ ಮಾತು ಕೇಳಿದ ಕೂಡಲೇ ಅಲ್ಲೇ ಕುಸಿದರು. ಅಮ್ಮ ಕೂಡ ಬಿಕ್ಕಳಿಸಲಾರಂಭಿಸಿದರು.

ನೇವುಗಲ್ ಕೆಫೆಯಲ್ಲಿ ತಾನೇ ಹೇಳಿದಂತೆ, ವಿಕ್ರಮ್ ತ್ರಿವರ್ಣ ಧ್ವಜದಲ್ಲಿ ಹೆಣವಾಗಿ

ವಾಪಸ್ ಬಂದ. ಅಂತ್ಯಸಂಸ್ಕಾರಕ್ಕೆ ಆಗಮಿಸಿದ ಜನರಲ್ ಮಲಿಕ್, 'ಒಂದು ವೇಳೆ ವಿಕ್ರಮ್ ಕಾರ್ಗಿಲ್‌ನಿಂದ ಜೀವಂತವಾಗಿ ಮರಳಿದ್ದರೆ ಇನ್ನು 15 ವರ್ಷಗಳಲ್ಲಿ ನನ್ನ ಕುರ್ಚಿಯ ಮೇಲೆ ಕುಳಿತಿರುತ್ತಿದ್ದ' ಎಂದು ದುಃಖಿಸಿದರು. ದೇಶವೇ ಕಣ್ಣೀರಿಟ್ಟಿತು. ಸಾಧನೆಯನ್ನು ಗುರುತಿಸಿದ ಅಟಲ್ ಸರಕಾರ, ವಿಕ್ರಮ್‌ಗೆ ಅತಿ ದೊಡ್ಡ ಶೌರ್ಯ ಪ್ರಶಸ್ತಿಯಾದ ಪರಮ ವೀರ ಚಕ್ರವನ್ನು ನೀಡಿ ಗೌರವಿಸಿತು. ಅನೂಜ್ ನಯ್ಯರ್‌ಗೆ ಮರಣೋತ್ತರ ಮಹಾವೀರ ಚಕ್ರವನ್ನು ನೀಡಲಾಯಿತು.

ಆದರೆ ಕಾರ್ಗಿಲ್‌ನಿಂದ ಮರಳಿದ ಕೂಡಲೇ ಮದುವೆಯಾಗುತ್ತೇನೆ ಎಂದು ಕೊಟ್ಟಿದ್ದ ಭರವಸೆಯನ್ನು ಈಡೇರಿಸದೇ ವಿಕ್ರಮ್ ದೂರವಾಗಿದ್ದಾನೆ. ಆತನ ಪ್ರೇಯಸಿ, ಮುಂದೆಂದೂ ಮದುವೆಯಾಗುವುದಿಲ್ಲ ಎಂದು ಶಪಥಗೈದಿದ್ದಾಳೆ! ಇದೆಲ್ಲ ಕಳೆದು ಐದು ವರ್ಷವಾದರೂ ಮನಸ್ಸನ್ನು ಮಾತ್ರ ಬದಲಿಸಿಲ್ಲ. ಚಂಡೀಗಢದ ಶಾಲೆಯೊಂದರಲ್ಲಿ ಶಿಕ್ಷಕಿಯಾಗಿರುವ ಆಕೆ, ವಿಕ್ರಮ್‌ನ ಆರಾಧನೆಯಲ್ಲೇ ಬದುಕು ಸವೆಸುತ್ತಿದ್ದಾಳೆ. ಇತ್ತ 'ಗುರುಗೋವಿಂದ್ ಸಿಂಗ್ ದೇಶಕ್ಕಾಗಿ ತನ್ನ ನಾಲ್ಕೂ ಮಕ್ಕಳನ್ನು ತ್ಯಾಗ ಮಾಡಿದರು. ಬಹುಶಃ ಒಬ್ಬ ಮಗ ದೇಶಕ್ಕೆ, ಇನ್ನೊಬ್ಬ ನನಗೆ ಎಂದೇ ದೇವರು ಅವಳಿ ಮಕ್ಕಳನ್ನು ಕೊಟ್ಟ' ಎಂದು ಕಮಲ್ ತನ್ನನ್ನು ತಾನೇ ಸಂತೈಸಿಕೊಳ್ಳುತ್ತಿದ್ದಾರೆ. ಇಂತಹ ಅಮ್ಮಂದಿರು ಅದೆಷ್ಟು ಜನರಿದ್ದಾರೆ?

ಕಾರ್ಗಿಲ್ ಯುದ್ಧ ಕಳೆದು ಐದು ವರ್ಷಗಳಾದವು. ಪ್ರತಿ ವರ್ಷ ಜುಲೈ 26ರಂದು ಕಾರ್ಗಿಲ್ ವಿಜಯ ದಿನವನ್ನು ಆಚರಿಸುತ್ತೇವೆ. ಬಾತ್ರಾ, ಅನೂಜ್ ನಯ್ಯರ್, ಸೌರಬ್ ಕಲಿಯಾ ರಂತಹ 533 ಸೈನಿಕರು ನಮಗಾಗಿ, ನಮ್ಮ ದೇಶಕ್ಕಾಗಿ ಪ್ರಾಣ ತೆತ್ತಿದ್ದಾರೆ. ದೇಶ ಕಾಯುತ್ತಿರುವ ಇಂತಹ ಸೈನಿಕರಿಂದಾಗಿಯೇ ನಾವು ಬೆಚ್ಚನೆ ಮನೆಯೊಳಗೆ ಐಷಾರಾಮಿ ಬದುಕು ನಡೆಸುತ್ತಿದ್ದೇವೆ! ನೆಮ್ಮದಿಯಿಂದ ನಿದ್ರೆ ಮಾಡುತ್ತಿದ್ದೇವೆ. ಆದರೂ ನಮ್ಮ ಜೀವರಕ್ಷಣೆ ಮಾಡುತ್ತಿರುವ ಸೈನಿಕರ ಆತ್ಮರಕ್ಷಣೆಯ ಹಕ್ಕನ್ನು ಮರೆತು, ಭಯೋತ್ಪಾದಕರ 'ಮಾನವ ಹಕ್ಕು'ಗಳ ಬಗ್ಗೆ ಮಾತನಾಡುವ ನಾವು ಕೃತಘ್ನರಲ್ಲವೇ?

ಎಷ್ಟೇ ಆಗಲಿ, ದೇಶಕ್ಕಾಗಿ ರಕ್ತ ಚೆಲ್ಲಿದವರನ್ನು ಮರೆಯುವುದರಲ್ಲಿ ನಾವು ನಿಸ್ಸೀಮರು!



ನಾನು ಪ್ರತಾಪ್ ಸಿಂಹ ಅವರ ಅಭಿಮಾನಿ. ಪ್ರತಿ ಶನಿವಾರ ವಿಜಯ ಕರ್ನಾಟಕದಲ್ಲಿ 'ಬೆತ್ತಲೆ ಜಗತ್ತು' ಹೆಸರಿನಡಿ ಪ್ರಕಟವಾಗುವ ಲೇಖನಗಳೆಂದರೆ ತುಂಬಾ ಇಷ್ಟ. ರಾಜಕೀಯ ವಿಜ್ಞಾನವನ್ನು ಮುಖ್ಯ ವಿಷಯವನ್ನಾಗಿ ತೆಗೆದುಕೊಂಡು ಓದುತ್ತಿರುವ ನನಗೆ ಅವರ ಅಂಕಣಗಳಿಂದ ತುಂಬಾ ಸಹಾಯವಾಗುತ್ತಿದೆ. ಇಂತಹ ಉಪಯುಕ್ತ ಮಾಹಿತಿಗಳನ್ನು ಹೊತ್ತು ತಂದು, ವಿದ್ಯಾರ್ಥಿಗಳಿಗೆ ತಲುಪಿಸುತ್ತಿರುವ ವಿಜಯ ಕರ್ನಾಟಕದ ಕಾರ್ಯವೈಖರಿ ನಿಜಕ್ಕೂ ಶ್ಲಾಘನೀಯ.

ಕಿರಣ್‌ಕುಮಾರ್
ಕಡೂರು

Dear ಸಚಿನ್!

ನಮಗೊಬ್ಬ ಹೀರೋ ಬೇಕಿದ್ದ. ಒಬ್ಬ Role model ಗಾಗಿ ನಾವೆಲ್ಲ ಹಾತೊರೆಯುತ್ತಿದ್ದೆವು. ಬಡ ಅಥವಾ ಮಧ್ಯಮ ಕುಟುಂಬದಲ್ಲಿ ಹುಟ್ಟಿದರೂ, ಎಸ್.ಎಸ್.ಎಲ್.ಸಿ. ಪಾಸಾಗದಿದ್ದರೂ ಸಾಧನೆ ಮಾಡಬಹುದು, ಹೆಸರು ಮಾಡಬಹುದು, ದೇಶವೇ ಮೆಚ್ಚುವಂತಹ, ಹೆಮ್ಮೆಪಡುವಂತಹ ಸ್ಥಾನಕ್ಕೇರಬಹುದು ಎಂಬುದನ್ನು ಸಾಧಿಸಿ ತೋರುವ ಛಲಗಾರನನ್ನು ಹುಡುಕಾಡುತ್ತಿದ್ದೆವು. ಅಂತಹ ಸಂದರ್ಭದಲ್ಲಿ ನಮ್ಮೆಲ್ಲ ಆಶಯಗಳ ಪ್ರತಿರೂಪವೆಂಬಂತೆ ಹಾಲುಗಲ್ಲ ಹೊತ್ತು ಬಂದವನೇ ನೀನು!

ಅವತ್ತು 1989ರಲ್ಲಿ ಪಾಕಿಸ್ತಾನದಲ್ಲಿ ನೀನು ಟೆಸ್ಟ್‌ಗೆ ಪದಾರ್ಪಣೆ ಮಾಡಿದೆ. ಮೂರನೇ ಟೆಸ್ಟ್‌ನಲ್ಲಿ ಇಮ್ರಾನ್ ಖಾನ್, ವಾಸಿಂ ಅಕ್ರಂ ಮತ್ತು ವಕಾರ್ ಯೂನಿಸ್ ದಾಳಿಗೆ ಭಾರತೀಯ ಬ್ಯಾಟ್ಸ್‌ಮನ್‌ಗಳು ತರಗೆಲೆಗಳಂತೆ ಉದುರಿದ್ದರು. ಇನ್ನೊಂದು ಬದಿಯಲ್ಲಿ ಸಿಧು ಅಸಹಾಯಕನಾಗಿ ನಿಂತಿದ್ದ. ಅಂತಹ ವೇಳೆಯಲ್ಲಿ ಮಧ್ಯಮ ಕ್ರಮಾಂಕದಲ್ಲಿ ನೀನು ಬ್ಯಾಟ್ ಹಿಡಿದು ಬಂದೆ. ನೋಡನೋಡುತ್ತಿದ್ದಂತೆಯೇ ವಕಾರ್ ಹಾಕಿದ ಬೌನ್ಸರ್ ನಿನ್ನ ಮೂಗನ್ನೇ ಚಚ್ಚಿತು. ರಕ್ತ ಬಳಬಳನೆ ಸುರಿಯಲಾರಂಭಿಸಿತು. ಧಾವಿಸಿ ಬಂದ ದೈಹಿಕ ತಜ್ಞ ಮೂಗಿಗೆ ಬ್ಯಾಂಡೈಡ್ ಹಾಕಿದ. ಇನ್ನೇನು ನೀನು ಪೆವಿಲಿಯನ್‌ನತ್ತ ಸಾಗುತ್ತೀಯಾ ಅಂತಾ ಅಂದುಕೊಂಡೆವು. ಉಹೂಂ.... ಪೆಟ್ಟು ತಿಂದರೂ ಹೇಡಿಯಂತೆ ಶತ್ರುವಿಗೆ ನೀನು ಬೆನ್ನು ತೋರಲಿಲ್ಲ. ವಕಾರ್ ಎಸೆದ ನೆಕ್ಸ್ಟ್ ಬಾಲನ್ನು ಬೌಂಡರಿಗಟ್ಟಿದಾಗ ನಿನ್ನಲ್ಲೊಬ್ಬ ಸೇನಾನಿ ಕಂಡುಬಂದ. ಅಬ್ಬಾ... ಕೊನೆಗೂ ಕೀಳರಿಮೆಯಿಂದ, ಆತ್ಮವಿಶ್ವಾಸದ ಕೊರತೆಯಿಂದ ನರಳುತ್ತಿದ್ದ ನಮಗೊಬ್ಬ ಗಂಡುಗಲಿ ಸಿಕ್ಕಿದ ಅಂತಾ ಆನಂದಪಟ್ಟೆವು. ರದ್ದಾದ ಏಕದಿನ ಪಂದ್ಯದಲ್ಲಿ ಆಗಿನ ಸ್ಪಿನ್ ಮಾಂತ್ರಿಕ ಅಬ್ದುಲ್ ಕಾದಿರ್ ಅವರ ಬೌಲಿಂಗ್‌ನಲ್ಲಿ ಸತತ ನಾಲ್ಕು ಸಿಕ್ಸರ್ ಬಾರಿಸಿದಾಗಲಂತೂ ನಮ್ಮ ಖುಷಿಗೆ ಎಲ್ಲೆಯೇ ಇರಲಿಲ್ಲ. 150 ವರ್ಷಗಳ ಕಾಲ ಬ್ರಿಟಿಷರಿಗೆ ನಮ್ಮ ನೆಲ, ಜಲವನ್ನಷ್ಟೇ ಅಲ್ಲ ಮನಸ್ಸನ್ನೂ ದಾಸ್ಯಕ್ಕಿಟ್ಟು ಸ್ವಾತಂತ್ರ್ಯ ಬಂದ ಮೇಲೂ ದಾಸ್ಯದ ಗುಂಗಿನಿಂದ ಹೊರಬರಲು ಹೆಣಗುತ್ತಿರುವಾಗ, ನಮಗೂ ಆಳುವ ತಾಕತ್ತಿದೆ ಅನ್ನೋದನ್ನು ನೀನು ಬ್ಯಾಟ್ ಮೂಲಕ ಸಾಬೀತು ಮಾಡಿದೆ. ಆಗ ನಾವೇ ನೀನಾಗಿ ಖುಷಿಪಟ್ಟೆವು.

ಈ ನಡುವೆ 1992ರಲ್ಲಿ ನಿನ್ನ ಅಗ್ನಿ ಪರೀಕ್ಷೆಗೆಂದು ವೇದಿಕೆ ಸಜ್ಜಾಗಿತ್ತು. ಅದು ಜಗತ್ತಿನಲ್ಲಿಯೇ ಅತ್ಯಂತ Bouncy ಮತ್ತು Fastest ಪಿಚ್ ಎಂಬ ಖ್ಯಾತಿ ಪಡೆದಿದ್ದ ಪರ್ತ್! ಭಾರತ ಸೋಲುವುದು ಪೂರ್ವ ನಿರ್ಧಾರಿತ ಎಂದು ಅದಾಗಲೇ ಷರಾ ಬರೆದಿದ್ದರೂ ಎಲ್ಲರ ಕಣ್ಣು ನಿನ್ನ ಮೇಲಿತ್ತು. ಆ ದಿನ ನೀ ಬ್ಯಾಟ್ ಹಿಡಿದು ಬಂದೆ.... ಪರ್ತ್‌ನಲ್ಲಿ ಆಡಿದ ಮೊದಲ ಇನಿಂಗ್ಸ್‌ನಲ್ಲೇ ಶತಕ ಬಾರಿಸಿದ ಜಗತ್ತಿನ ಮೊದಲ ಆಟಗಾರ ಎಂಬ ಹೆಗ್ಗಳಿಕೆಯನ್ನೂ ಪಡೆದೆ. ನೀ ಹೊಡೆದ 118 ರನ್‌ಗಳು ನಿಜಕ್ಕೂ ಅದ್ಭುತ. ಮುಂದಿನ ಟೆಸ್ಟ್ ಸಿಡ್ನಿಯಲ್ಲಿ. ಪಟಪಟನೆ ವಿಕೆಟ್ ಕಳೆದುಕೊಂಡಿದ್ದ ಭಾರತ ಡ್ರಾ

ಮಾಡಿಕೊಳ್ಳಲು ಹೆಣಗುತ್ತಿತ್ತು. ಆಗ ರವಿಶಾಸ್ತ್ರಿಗೆ, ಹೆಗಲಿಗೆ ಹೆಗಲು ಕೊಟ್ಟು ನೀ ಗಳಿಸಿದ ಅಜೇಯ 148 ರನ್‌ಗಳು ಭಾರತವನ್ನು ಮುಖಭಂಗದಿಂದ ತಪ್ಪಿಸಿದವು. ಆ ನಿನ್ನ ಅದ್ಭುತ ಆಟವನ್ನು ಕಂಡು ಕ್ರಿಕೆಟ್‌ನ ಸಾಮ್ರಾಟ ಡಾನ್ ಬ್ರಾಡ್ಮನ್, This little bonzer plays like me ಅಥವಾ 'ಈ ಕುಳ್ಳ ನನ್ ಥರಾನೇ ಆಡ್ತಾನೆ' ಅಂತಾ ಹೊಗಳಿದಾಗ, ಆ ಹೊಗಳಿಕೆಗೆ ಪಾತ್ರರಾಗಿರುವುದು ನಾವೇ ಎಂಬಂತೆ ಆನಂದಿಸಿದೆವು. ಅದೇ ವರ್ಷ ಕೇಪ್ ಟೌನ್‌ನಲ್ಲಿ ಅಜರ್ ಜತೆಗೂಡಿ ನೀ ಗಳಿಸಿದ 179 ರನ್‌ಗಳು ತಂದುಕೊಟ್ಟ ಖುಷಿ ಇಂದಿಗೂ ಮನದಲ್ಲಿ ಬೆಚ್ಚಗಿದೆ. ನೀನು ಮೋಡದ ಮರೆಯಿಂದ ಇಂಚಿಂಚಿ ಹೊರಬರುವ ಸೂರ್ಯನಂತೆ ಬಂದವನಲ್ಲ. ಮುಖದಲ್ಲಿ ಮೀಸೆ ಮೂಡುವ ಮೊದಲೇ ಅಂತಾರಾಷ್ಟ್ರೀಯ ಮಟ್ಟದಲ್ಲಿ ಹೆಸರು ಮಾಡಿದವನು.

1998ರಲ್ಲಿ ಶಾರ್ಜಾದಲ್ಲಿ ನ್ಯೂಜಿಲೆಂಡ್ ಮತ್ತು ಆಸ್ಟ್ರೇಲಿಯಾ ವಿರುದ್ಧ ಸತತ ಎರಡು ಸೆಂಚುರಿ ಹೊಡೆದು ಕಪ್ ತಂದುಕೊಟ್ಟಿದ್ದೂ ನೆನಪಿದೆ. ಟೆನ್‌ಸ್ಪೋರ್ಟ್ಸ್ ಚಾನೆಲ್‌ನಲ್ಲಿ ಆ ಆಟವನ್ನು ಇಂದಿಗೂ ಕುತೂಹಲದಿಂದ ನೋಡ್ತೀವಿ. ನೇರ ಪ್ರಸಾರ ಆಗುತ್ತಿದೆ ಅನ್ನೋ ರೀತಿ ಟೀವಿ ಮುಂದೆ ಕುಳಿತ್ಕೊತೀವಿ. ವರ್ಲ್ಡ್ ಕಪ್‌ನಲ್ಲಿ ಪಾಕಿಸ್ತಾನ ಮೊದಲು ಬ್ಯಾಟಿಂಗ್ ಮಾಡಿ 271 ರನ್ ಹೊಡೆದಾಗ 'ಸೋತುಬಿಡ್ತೀವೇನೋ' ಅಂತಾ ಅನ್ನಿಸಿತ್ತು. ಆದರೆ ರಣಹದ್ದಿನಂತೆ ಬರುವ ಶೋಯೆಬ್ ಅಖ್ತರ್‌ನ ಬೌಲಿಂಗ್‌ನ ಲಯವನ್ನೇ ಹಾಳು ಮಾಡಿ, ಅಂದು ನೀನು ಗಳಿಸಿದ ಬಿರುಸಿನ 98 ರನ್‌ಗಳು ಭಾರತದ ಗೆಲುವಿಗೆ ಕಾರಣವಾದವು. ಪಾಕ್ ವಿರುದ್ಧ ನಾಲ್ಕನೇ ಯುದ್ಧದಲ್ಲಿ ಜಯಿಸಿದಷ್ಟು ಖುಷಿಯಾಯಿತು.

ಜತೆಗೆ ನೀನೆಂದೂ ಸೋಗು ಹಾಕಿದವನಲ್ಲ. ಅಂದು ನಿನ್ನ ಹುಟ್ಟುಹಬ್ಬದ ದಿನ ಶಾರ್ಜಾದಲ್ಲಿ ಸೆಂಚುರಿ ಹೊಡೆದು ಪತ್ನಿಗೆ ಅರ್ಪಣೆ ಮಾಡಿದೆ. ಕೆಲವರು ಬೇಸರಪಟ್ಟುಕೊಂಡರು. ಆದರೆ ಅವತ್ತು 'ಈ ಸೆಂಚುರಿ ಶತಕೋಟಿ ಭಾರತೀಯರಿಗೆ' ಅಂತ ಎಲ್ಲರಂತೆ ನೀನೂ ಸೋಗು ಹಾಕಬಹುದಿತ್ತು. ಆದರೆ ಟೀಕಾಕಾರರ ಬಗ್ಗೆ ತಲೆಕೆಡಿಸಿಕೊಳ್ಳದೆ, ಪತ್ನಿಯ ಮೇಲಿನ ಪ್ರೀತಿಯನ್ನು ತೋರಿಸಿಕೊಂಡೆ. ಆಟವೊಂದೇ ಅಲ್ಲ, ವ್ಯಕ್ತಿತ್ವದಿಂದಲೂ ಆದರ್ಶ ವ್ಯಕ್ತಿಯೆನಿಸಿದೆ. ಸೋಗಲಾಡಿತನಕ್ಕೆ ಬದಲು ಆಟದಿಂದ ದೊಡ್ಡವನೆನಿಸಿದೆ. ಹೆಸರು ಹೇಳಿಕೊಳ್ಳದೆ ತೆರೆಮರೆಯಲ್ಲಿ ಮುಕ್ತ ಮನಸ್ಸಿನಿಂದ ದಾನ ಕಾರ್ಯವನ್ನು ಮಾಡುತ್ತಾ ಬಂದಿದ್ದೀಯಾ. ಮ್ಯಾಚ್‌ಫಿಕ್ಸಿಂಗ್ ಕಳಂಕ ಎಲ್ಲರನ್ನೂ ಅಂಟಿದರೂ ನಿನ್ನ ನಿಷ್ಠೆ ಬಗ್ಗೆ, ದೇಶಪ್ರೇಮದ ಬಗ್ಗೆ ನಮ್ಮ ಮನದಲ್ಲಿ ಕಿಂಚಿತ್ತೂ ಸಂಶಯ ಮೂಡಲಿಲ್ಲ.

Thank you Sachin!

ನೀನು ಕೊಟ್ಟ ಖುಷಿಯನ್ನು ಖಂಡಿತಾ ಮರೆಯಲು ಸಾಧ್ಯವಿಲ್ಲ. ಇವತ್ತೇ ನೀನು ನಿವೃತ್ತಿ ಘೋಷಿಸಿದರೂ ಇತಿಹಾಸದಲ್ಲಿ ನಿನಗೆ ಖಂಡಿತಾ ಸ್ಥಾನವಿದೆ. ನಮ್ಮ ನಿರೀಕ್ಷೆಯನ್ನು ನೀನು

ಯಾವತ್ತೂ ಹುಸಿ ಮಾಡಿಲ್ಲ. ನಮ್ಮೊಳಗಿರುವ ಆಕ್ರಮಣಕಾರಿ ಭಾವನೆಗೆ ನಿನ್ನ ಬಿರುಸಿನ ಬ್ಯಾಟಿಂಗ್ ಯಾವತ್ತೂ ಅಭಿವ್ಯಕ್ತಿಯಾಗಿತ್ತು. ಆದರೂ ಇತ್ತೀಚೆಗೆ ನಿನ್ನ ಆಟವನ್ನು ನೋಡಿದಾಗ ಮೊದಲಿನ ತೆಂಡೂಲ್ಕರ್ ಎಲ್ಲಿ ಹೋದ ಎಂಬ ಅನುಮಾನ ಕಾಡುತ್ತಿದೆ. ಖಂಡಿತಾ ಇಂದಿಗೂ ನೀನು Average ಅಥವಾ ಸರಾಸರಿಯನ್ನು ಕಾದುಕೊಂಡು ಬರುತ್ತಿದ್ದೀಯಾ. ಸೆಂಚುರಿನೂ ಹೊಡಿತಿದ್ದೀಯಾ. ನಿನ್ನ ಬ್ಯಾಟಿನಿಂದ ರನ್‌ಗಳೂ ಹರಿದು ಬರುತ್ತಿವೆ. ಆದರೂ ನೀನು ನಾವಿಷ್ಟಪಡುವ ಸಚಿನ್ ಆಗಿ ಉಳಿದಿಲ್ಲ. ಫಸ್ಟ್ ಬಾಲ್‌ನಿಂದಲೇ Attack ಮಾಡುವ ನಿನ್ನ ಆಟವನ್ನು ಮರೆಯುವ ಮಟ್ಟಿಗೆ ಬೇಸರ ತಂದಿದ್ದೀಯಾ. ಆ ತುಡಿತ, ಮಿಡಿತ, ನಿನ್ನ ಆಟ ನೋಡಬೇಕೆಂಬ ಆತುರ, ಕಾತರ, ಸೆಂಚುರಿ ಹೊಡೆಯಲಿ ಅಂತಾ ದೇವರಿಗೆ ಮೊರೆಯಿಡೋದನ್ನೇ ನಾವು ಮರೀತಿದ್ದೀವಿ. ಕಾರಣ ನೀನೇ! ನಮ್ಮನ್ನ ಈ ಸ್ಥಿತಿಗೆ ತಂದಿದ್ದೂ ನೀನೇ. ಏಕೆಂದರೆ ನಾವಿಷ್ಟಪಡುವ ಸಿಡಿಲಮರಿ ಈಗ ನೀನಾಗಿಲ್ಲ. ಬೌಲರ್‌ಗಳನ್ನು ಸತಾಯಿಸಿ ನೀನು ಸೆಂಚುರಿ ಹೊಡಿತ್ತಿದ್ದೀಯೇ ಹೊರತು, ಮೊದಲಿನಂತೆ ಬೌಲಿಂಗನ್ನು ಚಚ್ಚಿ ಚಿಂದಿ ಮಾಡುತ್ತಿಲ್ಲ. ಹತ್ತರೊಳಗೆ ಹನ್ನೊಂದನೇ ಬ್ಯಾಟ್ಸ್‌ಮನ್ ಥರಾ ಆಡ್ತಾ ಇದ್ದೀಯಾ. ನಿನ್ನೆ, ಮೊನ್ನೆ ಬಂದ ಸೆಹವಾಗ್ ನಿನ್ನ ಮುಂದೆ ಶೈನ್ ಆಗುವಾಗ ಎಷ್ಟು ಬೇಸರವಾಗುತ್ತೆ ಗೊತ್ತಾ?

ಸಚಿನ್ ಬರ್‍ತಾನೆ, ಬರ್‍ತಾನೆ.... ಅಂತಾ ಟೀವಿ ಮುಂದೆ ಉಸಿರು ಬಿಗಿ ಹಿಡಿದುಕೊಂಡು, ತುಟಿಕಚ್ಚಿಕೊಂಡು, ಸಚಿನ್ ಸೆಂಚುರಿ ಹೊಡೆಯಲಿ ಅಂತಾ ದೇವರಿಗೆ ಮೊರೆಯಿಡುತ್ತಿದ್ದುದು, ಯಾರಾದ್ರೂ Sachin is not a match winner ಅಂತಾ ಟೀಕಿಸಿದರೆ ಹುಬ್ಬು ಗಂಟಿಕ್ಕಿಕೊಂಡು, ಮುಖ ಸಿಂಡರಿಸಿಕೊಂಡು, ಕಾಲು ಕೆರೆದು ಜಗಳಕ್ಕಿಳೀತಿದ್ದುದು 'ಇದೇ ಸಚಿನ್ ಬಗ್ಗೇನಾ' ಅಂತಾ ನಮ್ಮನ್ನು ನಾವೇ ಪ್ರಶ್ನಿಸಿಕೊಳ್ಳಬೇಕಾದ ಹಂತಕ್ಕೆ ತಲುಪಿದ್ದೇವೆ!

ಇಲ್ಲಾ ನನ್ನ ಮೇಲೆ ಜವಾಬ್ದಾರಿಯಿದೆ. ಮೊದಲಿನಂತೆ ಯದ್ರಾಬಿದ್ರಿಯಾಗಿ ಆಡೋಕಾ ಗೋಲ್ಲ ಅಂತಾ ನೀನು ಕಾರಣ ಕೊಡಬಹುದು. ಆಕಾಶವೇ ತಲೆಮೇಲೆ ಬಂದು ಕುಳಿತಿದೆ ಅನ್ನೋ ಥರಾ ನೀನು ವರ್ತಿಸಬಹುದು. ಆದರೆ ನಾವಿಷ್ಟಪಡೋದು ಸಿಡಿಲಮರಿ ಸಚಿನ್‌ನನ್ನೇ ಹೊರತು ಪ್ರಬುದ್ಧತೆ ಅಥವಾ ಜವಾಬ್ದಾರಿ ಅನ್ನೋ ಭ್ರಮೆಯಲ್ಲಿರುವ ಬ್ಯಾಟ್ಸ್‌ಮನ್‌ನಲ್ಲ! ಇಂಡಿಯಾ ಸೋತ್ರು ಪರವಾಗಿಲ್ಲ ನೀನು ಸೆಂಚುರಿ ಹೊಡೆಯಲಿ ಅಂತಾ ಆಶಿಸುತ್ತಿದ್ದುದು ಆ ನಿನ್ನ ಆಕ್ರಮಣಕಾರಿ ಆಟಕ್ಕಾಗಿಯೇ ಅನ್ನೋದನ್ನ ಮರೆಯಬೇಡ. ನಿನ್ನಲ್ಲಿ ಮೊದಲಿನ ಹಸಿವು, ಚೈತನ್ಯ ಇನ್ನೂ ಇದೇ ಅನ್ನೋದಕ್ಕೆ ಕೇವಲ ಒಂದು ವರ್ಷದ ಹಿಂದಷ್ಟೇ ನಡೆದ ವಿಶ್ವಕಪ್‌ನಲ್ಲಿ ಪಾಕಿಸ್ತಾನದ ವಿರುದ್ಧ ನೀನಾಡಿದ ಆಟವೇ ಸಾಕ್ಷಿ. ಒಂದು ವೇಳೆ ಅವತ್ತು ನೀನೇನಾದರೂ ಈಗಿನಂತೆ 50 ಓವರ್‌ವರೆಗೂ ಆಡೋಣ ಅಂತಾ ಕುಟುಕಲು ಆರಂಭಿಸಿದ್ದರೆ ನೀನು ಔಟಾಗುವ ಜತೆಗೆ ಭಾರತ ಕೂಡ ಸೋತು ಸುಣ್ಣವಾಗಿರುತ್ತಿತ್ತು. ಡಿಫೆನ್ಸಿವ್ ಆಟವಾಡಿ ನೀನು ಸೆಂಚುರಿ ಹೊಡೆದರೂ ನಮಗೆ ಖುಷಿಯಾಗೊಲ್ಲ. ಮೊದಲಿನ ಸಚಿನ್‌ನಂತೆ ಐವತ್ತೇ ರನ್ ಹೊಡೆದರೂ ತೃಪ್ತಿಪಟ್ಟುಕೊಳ್ಳುತ್ತೇವೆ.

ನೀನು ಮುತ್ಸದ್ದಿ ಥರಾ ಆಗೋದು ನಮಗಿಷ್ಟವಿಲ್ಲ. ಬ್ಯಾಟಿಂಗ್‌ನ ಎ.ಬಿ.ಸಿ.ಡಿ. ಗೊತ್ತಿಲ್ಲದ ಬಿಷನ್ ಸಿಂಗ್ ಬೇಡಿ ಕೂಡ 'ನಿನಗಿಂತ ಮಾಥ್ಯೂ ಹೇಡನ್ ಒಳ್ಳೆಯ ಬ್ಯಾಟ್ಸ್‌ಮನ್' ಅಂತಾ ಅಣಕಿಸುತ್ತಿದ್ದಾನೆ. ಮೈಯೆಲ್ಲ ಉರಿದರೂ ಸುಮ್ಮನಾಗಬೇಕಾಗಿ ಬಂದಿದೆ. ಏಕೆಂದರೆ ಟೀಕಾಕಾರರಿಗೆ ವೃತ್ತಿಕೊಟ್ಟಿರುವವನು ನೀನೇ. ಬಾಯ್ತೆಗೆಯಲು ಅವರಿಗೆ ಅವಕಾಶ ಕೊಡುತ್ತಿರುವುದು ಸೋನೆ ಮಳೆ ಥರದ ನಿನ್ನ ಜಿಗುಟು ಬ್ಯಾಟಿಂಗ್.

ನೋಡು...ಸ್ಟೀವ್ ವಾ ಒಬ್ಬ ಮಹಾನ್ ಹೋರಾಟಗಾರ ಅನ್ನಿಸಿ ಕೊಂಡಿರಬಹುದು, ಅಲನ್ ಬಾರ್ಡರ್ ಟೆಸ್ಟ್ ಕ್ರಿಕೆಟ್‌ನಲ್ಲಿ ಅತಿ ಹೆಚ್ಚು ರನ್ ಗಳಿಸಿರಬಹುದು, ಗವಾಸ್ಕರ್ 34 ಸೆಂಚುರಿ ಹೊಡೆದಿರಬಹುದು. ಆದರೆ ಜನ ಇಷ್ಟಪಡೋದು ವಿವಿಯನ್ ರಿಚರ್ಡ್ಸ್, ಜಿ.ಆರ್. ವಿಶ್ವನಾಥ್, ಇಯಾನ್ ಬೋಥಂ, ಮಾರ್ಕ್ ವಾ, ಲಾರಾ ಮತ್ತು ನಿನ್ನ ಆಟವನ್ನು! ಏಕೆಂದರೆ ನೀವೆಲ್ಲ ಪ್ರೇಕ್ಷಕರಿಗೆ ಖುಷಿಕೊಡುವ Gallery Players! (ಒಂಥರಾ ಪ್ರೇಕ್ಷಕರನ್ನು ಹುಚ್ಚೆಬ್ಬಿಸುವ ದೈವಗಳು). ಹಾಗಾಗಿಯೇ ವೆಸ್ಟ್ ಇಂಡೀಸ್ ಸೋಲುತ್ತದೆ ಎಂಬುದು ಖಚಿತವಾಗಿ ತಿಳಿದಿದ್ದರೂ ಲಾರಾನ ಆಟ ನೋಡೋಕಾಗಿ ಜನ ಬರ್ತಾರೆ. ನಾವೂ ಕೂಡ ನಿನ್ನ ಆಟಕ್ಕಾಗಿ ಹಪಹಪಿಸುತ್ತೇವೆ.

ಸಚಿನ್.... ಆ ನಿನ್ನ ಮನಮೋಹಕ ಸ್ಟ್ರೈಟ್ ಡ್ರೈವ್‌ಗಳು, ಕಟ್, ಪುಲ್, ಹುಕ್, ಕವರ್ ಡ್ರೈವ್‌ಗಳನ್ನು ಮತ್ತೆ ನೋಡಬೇಕು ಅನ್ನಿಸ್ತಿದೆ. ಪ್ಲೀಸ್....ಧುಮ್ಮಿಕ್ಕಿ ಹರಿಯುವ ಜಲಧಾರೆಯಂತೆ ಮೊದಲಿನ ತೆಂಡೂಲ್ಕರ್ ಆಗು!

ಜೆರ್ರಿಕ್ ಡಿ ಲಿಯೋನ್ ಜನಿಸಿದ್ದು ಜನವರಿ 30ರಂದು.

ನಿಗದಿತ ಅವಧಿಗಿಂತ 13 ವಾರಗಳ ಮೊದಲೇ ಹುಟ್ಟಿದ್ದ. Transposition of the great arteries, ಅಂದರೆ ಮಹಾಧಮನಿಗಳ ಸ್ಥಾನಪಲ್ಲಟ. ಹೃದಯದ ಎಡಗಡೆಯ ದೊಡ್ಡ ಶುದ್ಧರಕ್ತನಾಳ ಮತ್ತು ಶ್ವಾಸಕೋಶದ ನಾಳಗಳು ಜೆರ್ರಿಕ್‌ನ ಹೃದಯದ ಹೃತ್ಕುಕ್ಷಿಯಲ್ಲಿ ಸ್ಥಾನಪಲ್ಲಟಗೊಂಡಿದ್ದವು. ತೆರೆದ ಹೃದಯ ಶಸ್ತ್ರಚಿಕಿತ್ಸೆ ಮಾಡಲು ಸಾಧ್ಯವೇ ಇರಲಿಲ್ಲ. ಏಕೆಂದರೆ ಕೇವಲ 700 ಗ್ರಾಂ ತೂಗುತ್ತಿದ್ದ ಜೆರ್ರಿಕ್‌ನ ಹೃದಯದ ಗಾತ್ರ ದ್ರಾಕ್ಷಿಯಷ್ಟಿತ್ತು. ಒಂದು ವೇಳೆ ಆಪರೇಶನ್ ಮಾಡಿದರೂ ಮಗು ಬದುಕುಳಿಯುವ ಯಾವುದೇ ಸಾಧ್ಯತೆಯಿರಲಿಲ್ಲ. ಹಾಗೆಂದು ದಕ್ಷಿಣ ಕ್ಯಾಲಿಫೋರ್ನಿಯಾದ ವೈದ್ಯರು ಸ್ಪಷ್ಟವಾಗಿ ಹೇಳಿಯೂ ಆಗಿತ್ತು. ಆದರೂ ಮಗುವಿನ ಜೀವದ ಬಗ್ಗೆ ಅನುಮಾನ ವ್ಯಕ್ತಪಡಿಸಿದ ವೈದ್ಯರೇ, ಡಾ. ವಿ. ಮೋಹನ್ ರೆಡ್ಡಿ ಅವರ ಬಳಿಗೆ ಹೋಗುವಂತೆ ಸೂಚಿಸಿದರು.

ಆಂಧ್ರಪ್ರದೇಶದ ವಾರಂಗಲ್‌ನವರಾದ ಡಾ. ರೆಡ್ಡಿ, ದಿಲ್ಲಿಯ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯಿಂದ ಮೆಡಿಕಲ್ ಪದವಿ ಪಡೆದಿದ್ದಾರೆ. 1980ರ ದಶಕದಲ್ಲಿ ವೈದ್ಯ ವೃತ್ತಿಯನ್ನರಸಿ ಅಮೆರಿಕಕ್ಕೆ ತೆರಳಿದ ಅವರು, ಕ್ಯಾಲಿಫೋರ್ನಿಯಾದ ಸ್ಟ್ಯಾನ್‌ಫೋರ್ಡ್‌ನ ಲೂಸಿಲ್ ಪೆಕಾರ್ಡ್ ಮಕ್ಕಳ ಆಸ್ಪತ್ರೆಯಲ್ಲಿ ಹೃದಯ ಶಸ್ತ್ರಚಿಕಿತ್ಸೆ ವಿಭಾಗದ ಮುಖ್ಯಸ್ಥರಾಗಿದ್ದಾರೆ. ಜತೆಗೆ ಸ್ಟ್ಯಾನ್‌ಫೋರ್ಡ್ ಮೆಡಿಕಲ್ ಕಾಲೇಜಿನಲ್ಲಿ ಪ್ರೊಫೆಸರ್ ಕೂಡ. ಅದುವರೆಗೂ ಸುಮಾರು 150 ಬಾರಿ ಹೃದಯ ಶಸ್ತ್ರಚಿಕಿತ್ಸೆ ಮಾಡಿದ್ದ ರೆಡ್ಡಿ ಅವರೇ ಅಳುಕುವಂತಿತ್ತು ಜೆರ್ರಿಕ್‌ನ ಸ್ಥಿತಿ. ಏಕೆಂದರೆ ಆತನ ಸಮಸ್ಯೆ ಹೇಗಿತ್ತೆಂದರೆ ಶಸ್ತ್ರಚಿಕಿತ್ಸೆಯ ವಿಧಾನದ ಬಗ್ಗೆ ವೈದ್ಯಕೀಯ ವಿವರಗಳೇ ಇರಲಿಲ್ಲ. ಆದರೂ ಫೆ.6ರಂದು ಭೂತಗನ್ನಡಿ ಹಾಕಿಕೊಂಡು ಆಪರೇಶನ್ ಆರಂಭಿಸಿದ ಡಾ. ರೆಡ್ಡಿ, 7 ಗಂಟೆಗಳ ಕಾಲ ಸತತ ಪ್ರಯತ್ನ ಪಡಬೇಕಾಯಿತು. ಕೊನೆಗೂ ಬಾಲ್‌ಪಾಯಿಂಟ್ ಪೆನ್‌ನ ತುದಿಗಿಂತಲೂ ಚಿಕ್ಕದಾದ ಮಹಾಧಮನಿಗಳನ್ನು ಆಪರೇಶನ್ ಮೂಲಕ ಸರಿಪಡಿಸಿ ಮಾಂತ್ರಿಕತೆ ಪ್ರದರ್ಶಿಸಿದರು! ಅಲ್ಲದೆ, ಇಂತಹ ಆಪರೇಶನ್ ಬಳಿಕವೂ ಬದುಕುಳಿದಿರುವ ಅತ್ಯಂತ ಕಡಿಮೆ ತೂಕದ ಮಗು ಎನಿಸಿದ ಜೆರ್ರಿಕ್. ಜತೆಗೆ ಡಾ. ರೆಡ್ಡಿ ವಿಶ್ವದ ಅತ್ಯುನ್ನತ ಹಾರ್ಟ್ ಸರ್ಜನ್ ಎಂದು ಜಗತ್ತಿನಾದ್ಯಂತ ಇರುವ ವೈದ್ಯರೇ ಒಪ್ಪಿಕೊಂಡರು. ಇಂತಹ ಸಾಧನೆಯ ನಂತರ ರೆಡ್ಡಿಯವರು ಹೇಳಿದ್ದೇನು ಗೊತ್ತೆ?

''ನಾನೊಬ್ಬ ಭಾರತೀಯ ಎಂದು ಹೇಳಿಕೊಳ್ಳಲು ಇವತ್ತು ಹೆಮ್ಮೆಯೆನಿಸುತ್ತಿದೆ''!!

ಹಾವಾಡಿಗರ, ಬುಡಬುಡಿಕೆಯವರ ರಾಷ್ಟ್ರವೆಂದೇ ಮೂದಲಿಸಿಕೊಳ್ಳುತ್ತಿದ್ದ ಭಾರತ ನಿಜಕ್ಕೂ ಒಂದು ಮಹಾನ್ ಶಕ್ತಿಯಾಗಿ ಹೊರ ಹೊಮ್ಮುತ್ತಿದೆಯೇ? ಭಾರತೀಯರೆಂದು ತಲೆಯೆತ್ತಿ, ಎದೆಸೆಟೆಸಿ ಹೇಳಿಕೊಳ್ಳುವಂತಹ ಸಾಧನೆಯನ್ನು ನಾವು ತೋರುತ್ತಿದ್ದೇವೆಯೇ?

19ನೇ ಶತಮಾನ ಯುರೋಪ್‌ನದ್ದಾಯಿತು. 20 ಅಮೆರಿಕಕ್ಕೆ ಸೇರಿತು. 21ನೇ ಶತಮಾನ ಭಾರತದ್ದೇ?

ಕೋಪ್ ಇಂಡಿಯಾ!

2004, ಫೆಬ್ರವರಿ 15ರಿಂದ 27ರವರೆಗೂ ಗ್ವಾಲಿಯರ್ ವಾಯು ನೆಲೆಯಲ್ಲಿ ಭಾರತ ಮತ್ತು ಅಮೆರಿಕ ನಡುವೆ ಮೊಟ್ಟಮೊದಲ ಬಾರಿಗೆ ವಾಯು ಸಮರ ಕವಾಯತು ಏರ್ಪಟ್ಟಿತ್ತು. 'ಕೋಪ್ ಇಂಡಿಯಾ' ಎಂಬ ಹೆಸರಿಡಲಾಗಿದ್ದ ಈ ವಾಯು ಸಮರದಲ್ಲಿ ಫ್ರೆಂಚ್ ನಿರ್ಮಿತ ಮಿರೇಜ್-2000, ರಷ್ಯಾ ನಿರ್ಮಿತ ಮಿಗ್-27, ಮಿಗ್-29, ಸುಖೋಯ್-30ಕೆ ಮತ್ತು ಮಿಗ್ 21 ಬೈಸನ್ ವಿಮಾನ ಗಳನ್ನು ಭಾರತ ಕಣಕ್ಕಿಳಿಸಿತ್ತು. ಕರ್ನಲ್ ಮೈಕ್ ಸ್ನೋಡ್‌ಗ್ರಾಸ್ ನೇತೃತ್ವದಲ್ಲಿ ಆಗಮಿಸಿದ್ದ ಅಮೆರಿಕದ ವಾಯುಪಡೆ, ಅತ್ಯಾಧುನಿಕ ಎಫ್-15 ವಿಮಾನಗಳನ್ನು ಪಣಕ್ಕಿಟ್ಟಿತ್ತು. ಅವರದ್ದು 'ರೆಡ್ ಏರ್' ತಂತ್ರ. ಅಂದರೆ ಭಾರತೀಯ ಪೈಲಟ್‌ಗಳು ಆಗಸದಲ್ಲಿ ತೋರಿಸುವ ಚಾಕಚಕ್ಯತೆಯನ್ನು ತಾವೂ ಅನುಕರಣೆ ಮಾಡುವ ಮೂಲಕ ಜಾಣತನದಲ್ಲಿ ಮೀರಿಸುವುದು ಮತ್ತು ಭಾರತದ ಯುದ್ಧತಂತ್ರಗಳನ್ನು ಕದಿಯುವುದು. 12 ದಿನಗಳ ವಾಯು ಸಮರದ ನಂತರ ಅಮೆರಿಕದ ಪಡೆ ಸ್ವದೇಶಕ್ಕೆ ಮರಳಿತು.

ಆದರೆ ಮಾರ್ಚ್‌ನಲ್ಲಿ ಸೆನೆಟ್ ಸಮಿತಿಯ ಮುಂದೆ ಹಾಜರಾದ ಅಮೆರಿಕದ ವಾಯುಪಡೆ ಮುಖ್ಯಸ್ಥ ಜನರಲ್ ಜಾನ್ ಜಂಪರ್, 'ಅತ್ಯಾಧುನಿಕ ತಂತ್ರಜ್ಞಾನದಿಂದ ಏನನ್ನೂ ಸಾಧಿಸಬಹುದು. ತಂತ್ರಜ್ಞಾನವೇ ನಮ್ಮ ತಾಕತ್ತು. ವಿರೋಧಿಗಳಿಗಿಂತ ಉನ್ನತ ತಂತ್ರಜ್ಞಾನ ನಮ್ಮಲ್ಲಿರುವುದರಿಂದ ಯಾರನ್ನೂ ಸೋಲಿಸಬಹುದು ಎಂದುಕೊಂಡಿದ್ದೆವು. ಆದರೆ ಭಾರತೀಯ ಪೈಲಟ್‌ಗಳು ವಾಯು ಸಮರದಲ್ಲಿ ಶೇ.90ರಷ್ಟು ಬಾರಿ ನಮ್ಮನ್ನು ಸೋಲಿಸಿದರು! ದಾಳಿ ಮತ್ತು ಪ್ರತಿದಾಳಿಯನ್ನು ಸಮರ್ಥವಾಗಿ ಹಿಮ್ಮೆಟ್ಟಿಸುವುದರೆರಡರಲ್ಲೂ ನಾವು ಸೋಲಬೇಕಾಗಿ ಬಂತು. ಭಾರತೀಯ ಪೈಲಟ್‌ಗಳು ಎಲ್ಲ ವಿಧದ ಯುದ್ಧ ತಂತ್ರಗಳಲ್ಲೂ ಗೆದ್ದರು. ಭಾರತ ನಮ್ಮ ಮಿತ್ರರಾಷ್ಟ್ರವಾಗಿರ ಬಹುದು. ಒಂದು ವೇಳೆ, ಅಮೆರಿಕ ತನ್ನ ತರಬೇತಿ ತಂತ್ರವನ್ನು ಬದಲಾಯಿಸಿಕೊಳ್ಳದಿದ್ದರೆ, ಉನ್ನತ ಮಾರ್ಗವನ್ನು ಕಂಡುಕೊಳ್ಳದಿದ್ದರೆ ಯಾವುದೇ ರಾಷ್ಟ್ರ ಕೂಡ ಅಮೆರಿಕಕ್ಕೆ ಸವಾಲೊಡ್ಡಬಹುದು ಎಂಬುದೇ ಕೋಪ್ ಇಂಡಿಯಾ ಕಲಿಸಿದ ದೊಡ್ಡ ಪಾಠ' ಎಂದು ಭಾರತೀಯ ಪೈಲಟ್‌ಗಳ ಸಾಮರ್ಥ್ಯವನ್ನು ಮುಕ್ತಕಂಠದಿಂದ ಶ್ಲಾಘಿಸಿದರು!

ಖಂಡಿತ ಇಂದು ಚೀನಾ ಹಲವಾರು ಕ್ಷೇತ್ರಗಳಲ್ಲಿ ಭಾರತಕ್ಕಿಂತ ಮುಂದಿದೆ. ಅದರ ಆರ್ಥಿಕ ಅಭಿವೃದ್ಧಿ ವೇಗ ಕೂಡ ಭಾರತಕ್ಕಿಂತ ಹೆಚ್ಚಿದೆ. ಭಾರತಕ್ಕಿಂತ ಹಲವು ಪಟ್ಟು ಹೆಚ್ಚು ವಿದೇಶಿ ನೇರ ಬಂಡವಾಳ ಚೀನಾಕ್ಕೆ ಹರಿದು ಬರುತ್ತಿದೆ. ಆದರೂ 2020ರ ವೇಳೆಗೆ ಭಾರತ ವಿಶ್ವದಲ್ಲೇ ಅತಿ ವೇಗದಲ್ಲಿ ಅಭಿವೃದ್ಧಿ ಹೊಂದುತ್ತಿರುವ ಅರ್ಥವ್ಯವಸ್ಥೆ ಯಾಗಿ ಹೊರಹೊಮ್ಮಲಿದೆ. ಈ

ಬಗ್ಗೆ ಸಂಶಯ ಬೇಡ. ಏಕೆಂದರೆ 'ಕುಟುಂಬಕ್ಕೊಂದೇ ಮಗು' ನೀತಿಯಿಂದಾಗಿ 2020ರ ವೇಳೆಗೆ ಚೀನಾದ ನೌಕರ ವರ್ಗದ ಸಾಮರ್ಥ್ಯ ಕುಸಿಯಲು ಆರಂಭಿಸುತ್ತದೆ. ಅಂದರೆ ಅರ್ಥವ್ಯವಸ್ಥೆಯ ವೇಗವನ್ನು ಕಾಯ್ದುಕೊಳ್ಳಲು ಅಗತ್ಯವಾದ ಮಾನವ ಸಂಪನ್ಮೂಲದ ಕೊರತೆ ಚೀನಾಕ್ಕೆ ಎದುರಾಗಲಿದೆ. ಅಲ್ಲದೆ ಕೈತುಂಬ ಹಣ ಹೊಂದಿರುವ ಅಲ್ಲಿನ ಮಧ್ಯಮವರ್ಗ ಈಗಾಗಲೇ ಪ್ರಜಾತಾಂತ್ರಿಕ ಹಕ್ಕುಗಳ ಬಗ್ಗೆ ಧ್ವನಿಯೆತ್ತುತ್ತಿದ್ದು ಮುಂಬರುವ ದಿನಗಳಲ್ಲಿ ರಾಜಕೀಯ ಅಸ್ಥಿರತೆ ತಲೆದೋರುವ ಎಲ್ಲ ಲಕ್ಷಣಗಳೂ ಕಂಡುಬರುತ್ತಿವೆ. ಭಾರತ ಕೂಡ ಕೋಮು ಹಿಂಸಾಚಾರ, ಜಾತಿ ಆಧಾರಿತ ರಾಜಕಾರಣದ ಸುಳಿಗೆ ಸಿಲುಕುತ್ತಿದ್ದರೂ ಬಲವಾದ ಪ್ರಜಾ ತಾಂತ್ರಿಕ ವ್ಯವಸ್ಥೆಗೆ ಇದನ್ನೆಲ್ಲ ಮೆಟ್ಟಿಮುನ್ನಡೆಯುವ ಸಾಮರ್ಥ್ಯವಿದೆ. ಅಲ್ಲದೆ ಮಾಜಿ ಪ್ರಧಾನಿ ನರಸಿಂಹರಾವ್ ಆರಂಭಿಸಿದ "Look East" (ಆಗ್ನೇಯ ಏಷ್ಯಾ ರಾಷ್ಟ್ರಗಳ ಜತೆ ಸ್ನೇಹ ಸಂಬಂಧ) ಪಾಲಿಸಿ ಈಗ ಫಲಕೊಡಲು ಆರಂಭಿಸಿದೆ. ಏಕೆಂದರೆ ಏಷ್ಯಾದಲ್ಲಿ ಚೀನಾಕ್ಕೆ ಪ್ರತಿಸ್ಪರ್ಧಿಯಾಗುವ ಸಾಮರ್ಥ್ಯವಿರುವುದು ಭಾರತಕ್ಕೆ ಮಾತ್ರ. ಇದನ್ನರಿತಿರುವ ಆಗ್ನೇಯ ಏಷ್ಯಾ ರಾಷ್ಟ್ರಗಳಾದ ಮಲೇಷಿಯಾ, ಇಂಡೋನೇಷ್ಯಾ, ಸಿಂಗಪುರ್, ಥಾಯ್ಲೆಂಡ್‌ಗಳು ಭಾರತದೊಂದಿಗೆ ಕೈಜೋಡಿಸಲು, ಉತ್ತಮ ಬಾಂಧವ್ಯ ಹೊಂದಲು ಪ್ರಯತ್ನಿಸಬೇಕಾದ ಅನಿವಾರ್ಯತೆ ಸೃಷ್ಟಿಯಾಗುತ್ತಿದೆ.

ಈ ಮಧ್ಯೆ, ತೈವಾನ್ ವಿಚಾರದಲ್ಲಿ ಅಮೆರಿಕ-ಜಪಾನ್‌ಗಳೊಂದಿಗೆ ಚೀನಾ ಸಂಘರ್ಷಕ್ಕಿಳಿಯುವ ಎಲ್ಲ ಕುರುಹುಗಳೂ ಕಾಣುತ್ತಿವೆ. ಆಗ ಚೀನಾಕ್ಕೆ ಕಡಿವಾಣ ಹಾಕಲು ಜಪಾನ್ ಮತ್ತು ಅಮೆರಿಕಕ್ಕೆ ಭಾರತದ ಅಗತ್ಯ ಹೆಚ್ಚಾಗುತ್ತದೆ. ಇಂತಹ ಲೆಕ್ಕಾಚಾರಗಳು ಈಗಾಗಲೇ ಪ್ರಾರಂಭವಾಗಿವೆ. ಜನವರಿ 14 ರಂದು ಬಿಡುಗಡೆ ಮಾಡಿರುವ ''21ನೇ ಶತಮಾನ ಏಷ್ಯಾದ ದೈತ್ಯ ಶಕ್ತಿಗಳಾದ ಭಾರತ ಮತ್ತು ಚೀನಾಕ್ಕೆ ಸೇರುತ್ತದೆ' ಎಂಬ ವರದಿಯಲ್ಲಿ ಅಮೆರಿಕ ಸೆಂಟ್ರಲ್ ಇನ್ವೆಸ್ಟಿಗೇಶನ್ ಏಜೆನ್ಸಿ(ಸಿಐಎ)ಹೇಳಿರುವುದು ಇದೇ ಮಾತನ್ನು.

ಆದರೆ ಭಾರತ ಮಾತ್ರ ಮೈಮರೆಯುತ್ತಿಲ್ಲ. ಚೀನಾದೊಂದಿಗೂ ಸಂಬಂಧ ಬೆಳೆಸುತ್ತಿದೆ. ಅಮೆರಿಕಕ್ಕೂ ಕಿವಿಗೊಡುತ್ತಿದೆ! ದಿನವೊಂದಕ್ಕೆ 5.56 ದಶಲಕ್ಷ ಬ್ಯಾರೆಲ್ ಪೆಟ್ರೋಲಿಯಂ ಉತ್ಪನ್ನಗಳು ಚೀನಾಕ್ಕೆ ಬೇಕು. ಭಾರತಕ್ಕೆ ಇದರ ಅರ್ಧದಷ್ಟು ತೈಲ ಸಾಕು. ಆದರೆ 2010ರ ವೇಳೆಗೆ ಅಮೆರಿಕ, ಚೀನಾ ಮತ್ತು ಜಪಾನ್ ನಂತರ ಅತಿ ಹೆಚ್ಚು ಪೆಟ್ರೋಲಿಯಂ ಉತ್ಪನ್ನಗಳ ಅಗತ್ಯವಿರುವ ರಾಷ್ಟ್ರ ಭಾರತವಾಗಲಿದೆ. ಈಗಾಗಲೇ ಶೇ.70 ರಷ್ಟು ತೈಲ ಉತ್ಪನ್ನಗಳನ್ನು ಆಮದು ಮಾಡಿಕೊಳ್ಳುತ್ತಿರುವ ಭಾರತ, ಅಂತಾರಾಷ್ಟ್ರೀಯ ತೈಲ ಮಾರುಕಟ್ಟೆಯ ಮೇಲೆ ಮತ್ತಷ್ಟು ಅವಲಂಬಿತವಾಗಬೇಕಾಗುತ್ತದೆ. ಹಾಗಾಗಿ, ಜಗತ್ತಿನಾದ್ಯಂತ ಇರುವ ತೈಲ ಮತ್ತು ಅನಿಲ ಸಂಶೋಧನೆ ಗುತ್ತಿಗೆಗಳನ್ನು ಪಡೆದುಕೊಳ್ಳಲು ಭಾರತ ಹವಣಿಸುತ್ತಿದೆ. ಆದರೆ ನಮ್ಮ ಒಎನ್‌ಜಿಸಿಯ ವಿದೇಶ ನಿಗಮ ಚೀನಾದ ರಾಷ್ಟ್ರೀಯ ಪೆಟ್ರೋಲಿಯಂ ನಿಗಮದ ಜತೆ ಪೈಪೋಟಿ ನಡೆಸಲಾರದೆ ಕಜಕಿಸ್ತಾನ, ಸುಡಾನ್, ಅಂಗೋಲಾ ಮತ್ತು ಇಂಡೋನೇಷ್ಯಾದಲ್ಲಿನ ತೈಲ

ಸಂಶೋಧನೆ ಗುತ್ತಿಗೆಗಳನ್ನು ಕೊನೆ ಕ್ಷಣದಲ್ಲಿ ಕಳೆದುಕೊಂಡಿದೆ. ಎಚ್ಚೆತ್ತ ಪೆಟ್ರೋಲಿಯಂ ಸಚಿವ ಮಣಿಶಂಕರ್ ಅಯ್ಯರ್, ಚೀನಾದೊಂದಿಗೆ ಸಹಭಾಗಿತ್ವದ ಪ್ರಸ್ತಾವ ಮುಂದಿಟ್ಟಿದ್ದಾರೆ. ಈಗಾಗಲೇ ಮಹಾ ನೈಲ್ ನದಿ ಯೋಜನೆಯಲ್ಲಿ ಭಾರತ-ಚೀನಾ ನಡುವೆ ಸಹಯೋಗ ಏರ್ಪಟ್ಟಿದೆ. ಅಲ್ಲದೆ ಭಾರತೀಯ ಅನಿಲ ಪ್ರಾಧಿಕಾರ ಚೀನಿ ಗ್ಯಾಸ್ ಹೋಲ್ಡಿಂಗ್ಸ್‌ನಲ್ಲಿ ಶೇ.10ರಷ್ಟು ಈಕ್ವಿಟಿಗಳನ್ನು ಖರೀದಿ ಮಾಡಿದೆ. ಇದೊಂದು ಸಣ್ಣ ಹೆಜ್ಜೆಯಿರಬಹುದು. ಆದರೆ, ಇಂತಹ ಪ್ರಬುದ್ಧತೆಯನ್ನು ಭಾರತ ಹಿಂದೆಂದೂ ತೋರಿರಲಿಲ್ಲ.

ಇಂತಹ ಸಾಧನೆ ಕೇವಲ ಒಂದು ಕ್ಷೇತ್ರಕ್ಕೆ ಮಾತ್ರ ಸೀಮಿತವಾಗಿಲ್ಲ. ಕಳೆದ ಒಂದೂವರೆ ದಶಕದಲ್ಲಿ ಭಾರತ ತೋರುತ್ತಿರುವ ಕುರುಹುಗಳು 21ನೇ ಶತಮಾನ ನಮ್ಮದೆಂದು ಧೈರ್ಯದಿಂದ ಹೇಳಿಕೊಳ್ಳುವಂತಹ ಆತ್ಮವಿಶ್ವಾಸ ತುಂಬುತ್ತಿವೆ. ಇದಕ್ಕೆ ಕಾರಣವಿಲ್ಲವೆಂದೇನೂ ಅಲ್ಲ. ಈ ಹಿಂದೆ ಭಾರತ ಶಸ್ತ್ರಾಸ್ತ್ರಗಳನ್ನು ಖರೀದಿ ಮಾಡುತ್ತಿತ್ತು. ಆದರೆ ಈಗ ಜಂಟಿ ಯೋಜನೆಗಳ ಮೂಲಕ ಭಾರತದಲ್ಲೇ ಶಸ್ತ್ರಾಸ್ತ್ರ ಉತ್ಪಾದನೆ ಆರಂಭಿಸಿದೆ. ರಷ್ಯಾದ ಸಹಯೋಗದಿಂದ ಉತ್ಪಾದನೆಯಾಗುತ್ತಿರುವ ಬ್ರಹ್ಮೋಸ್ (BRAHMOS) ಸೂಪರ್‌ಸಾನಿಕ್ ಕ್ಷಿಪಣಿಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. ಈ ಮಧ್ಯೆ, ಭಾರತದ ದೂರಸಂಪರ್ಕ ಕ್ಷೇತ್ರ ಜಗತ್ತಿನಲ್ಲಿಯೇ ಅತ್ಯಂತ ವೇಗವಾಗಿ ಅಭಿವೃದ್ಧಿ ಹೊಂದುತ್ತಿರುವ ರಂಗ ಎಂಬ ಖ್ಯಾತಿ ಪಡೆದಿದೆ. 36 ಸಾವಿರ ಕಿ.ಮೀ. ದೂರದಲ್ಲಿರುವ ಭೂಸ್ಥಿರ ಕಕ್ಷೆಗೆ ಉಪಗ್ರಹವನ್ನು ಉಡಾಯಿಸುವ ಸಾಮರ್ಥ್ಯ ಹೊಂದಿರುವ 6 ರಾಷ್ಟ್ರಗಳಲ್ಲಿ ಭಾರತವೂ ಒಂದಾಗಿದೆ. 'ಫೋರ್ಬ್ಸ್' ಮ್ಯಾಗಝಿನ್ ಪ್ರಕಟಿಸಿರುವ ಜಗತ್ತಿನ 200 ಅತ್ಯಂತ ಪ್ರಭಾವಿ ಕಂಪನಿಗಳ ಪಟ್ಟಿಯಲ್ಲಿ ಭಾರತದ 18 ಕಂಪನಿಗಳಿವೆ. 'ಫಾರ್ಚೂನ್' ಪತ್ರಿಕೆ ಪಟ್ಟಿ ಮಾಡಿರುವ ವಿಶ್ವದ ಒಟ್ಟು 500 ಪ್ರತಿಷ್ಠಿತ ಕಂಪನಿಗಳಲ್ಲಿ ಸುಮಾರು 100 ಕಂಪನಿಗಳು ಭಾರತದಲ್ಲಿ ಸಂಶೋಧನೆ ಮತ್ತು ಅಭಿವೃದ್ಧಿ ಘಟಕಗಳನ್ನು ಆರಂಭಿಸಿವೆ. ಪ್ರವಾಸಿಗರು ನೋಡಲೇಬೇಕಾದ 10 ರಾಷ್ಟ್ರಗಳಲ್ಲಿ ಭಾರತವೂ ಒಂದೆಂಬ ಹೆಗ್ಗಳಿಕೆ ದೊರೆತಿದೆ. ಈ ನಡುವೆ, 'ಪರಮ್ ಪದ್ಮಾ' .ಎಂಬ ನಾಲ್ಕನೇ ತಲೆಮಾರಿನ ಸ್ವದೇಶಿ ಸೂಪರ್ ಕಂಪ್ಯೂಟರ್ ಅಭಿವೃದ್ಧಿ ಆರಂಭವಾಗಿದೆ. 39 ಸಾಫ್ಟ್‌ವೇರ್ ಪಾರ್ಕ್‌ಗಳಲ್ಲಿರುವ 3500 ಕಂಪನಿಗಳು 8 ಶತಕೋಟಿ ಡಾಲರ್ ಬೆಲೆಯ ಸಾಫ್ಟ್‌ವೇರ್ ಉತ್ಪನ್ನಗಳನ್ನು ರಫ್ತುಮಾಡುತ್ತಿವೆ. ಅಮೆರಿಕದ ಸಿಲಿಕಾನ್ ವ್ಯಾಲಿಯಲ್ಲಿ ಪ್ರಾರಂಭವಾಗುವ ಮೂರನೇ ಒಂದರಷ್ಟು ಕಂಪನಿಗಳು ಭಾರತೀಯರದ್ದಾಗಿವೆ. ಅಮೆರಿಕದ ಔಷಧ ಹಾಗೂ ಜೈವಿಕ ತಂತ್ರಜ್ಞಾನ ಕ್ಷೇತ್ರದಲ್ಲಿ ಶೇ.10ರಷ್ಟು ಸಂಶೋಧನಾಕಾರರು ಮತ್ತು ಶೇ.15ರಷ್ಟು ವಿಜ್ಞಾನಿಗಳು ಭಾರತೀಯ ಮೂಲದವರಾಗಿದ್ದಾರೆ. ನಮ್ಮ ವಿಜ್ಞಾನ ಮತ್ತು ಕೈಗಾರಿಕಾ ಸಂಶೋಧನಾ ಮಂಡಳಿ (ಸಿಎಸ್‌ಐಆರ್), 2002ರಲ್ಲಿ 145 ಪೇಟೆಂಟ್‌ಗಳನ್ನು ತನ್ನದಾಗಿಸಿ ಕೊಂಡಿದೆ. ಇಂತಹ ಸಾಧನೆಗಳಿಂದಾಗಿ ಚಂದ್ರಶೇಖರ್ ಪ್ರಧಾನಿಯಾಗಿದ್ದಾಗ ಚಿನ್ನ ಅಡವಿಟ್ಟಿದ್ದ ಭಾರತದ ಬಳಿ, ಇಂದು 6 ಲಕ್ಷ ಕೋಟಿ ರೂ. ವಿದೇಶಿ ಮೀಸಲು ನಿಧಿಯಿದೆ! ಜತೆಗೆ ವರ್ಷಕ್ಕೆ 30 ಲಕ್ಷ ಪದವೀಧರರು, 7 ಲಕ್ಷ ಸ್ನಾತಕೋತ್ತರ ಪದವೀಧರರು, 1500ಕ್ಕೂ ಅಧಿಕ ಪಿಎಚ್‌ಡಿ ಪದವೀಧರರನ್ನು ರೂಪಿಸುತ್ತಿರುವ ಭಾರತಕ್ಕೆ ನಾಗರಿಕರ ಜ್ಞಾನವೇ ಅತಿದೊಡ್ಡ ಕರೆನ್ಸಿಯಾಗಿದೆ.

ಕಮ್ಯುನಿಸ್ಟರಂತೆ ಕೊರಗುವುದನ್ನು, ದೇಶವನ್ನೆಲ್ಲಾ ಕೊಳ್ಳೆಹೊಡೆಯಲಾಗುತ್ತಿದೆ ಎಂಬ ಬೊಬ್ಬೆಯನ್ನು ಬದಿಗಿಟ್ಟು ನೋಡಿದರೆ ಭಾರತ ಒಂದು ಜಾಗತಿಕ ಶಕ್ತಿಯಾಗಿ ಹೊರಹೊಮ್ಮುತ್ತಿರುವುದು ಕಂಡುಬರುತ್ತದೆ. ಡಾ. ರೆಡ್ಡಿಯವರಂತೆ ನಾವೂ ಕೂಡ ಭಾರತೀಯರೆಂದು ಹೆಮ್ಮೆಯಿಂದ ಹೇಳಿಕೊಳ್ಳುವ ಕಾಲ ಖಂಡಿತಾ ಬಂದಿದೆ!



ನಿಜಕ್ಕೂ ಕ್ರಿಶ್ಚಿಯನ್ನರು ಮಹಾಬುದ್ಧಿವಂತರು!

ನಮಗೋ, ನೇಣುಹಾಕಿಕೊಳ್ಳಲು ಅಪ್ಪಹಾಕಿದ ಆಲದ ಮರವೇ ಬೇಕು. ಹೊಸ ಸಸಿ ನೆಡುವ ಜಾಯಮಾನ ನಮ್ಮದಲ್ಲ. ಹಾಗಾಗಿಯೇ ಜಗತ್ತಿನಲ್ಲಿರುವುದೊಂದೇ ಹಿಂದೂ ರಾಷ್ಟ್ರ, ನೇಪಾಳ. ಇನ್ನೊಂದು ಮಿಲೇನಿಯಂ ಬಂದರೂ ಹಿಂದೂ ರಾಷ್ಟ್ರಗಳ ಸಂಖ್ಯೆ ಎರಡಾಗುವುದಿಲ್ಲ. ಇನ್ನೂ ಸ್ಪಷ್ಟವಾಗಿ ಹೇಳಬೇಕೆಂದರೆ ಇರುವ ಒಂದು ಹಿಂದೂ ರಾಷ್ಟ್ರ ಅಳಿಸಿ ಹೋದರೂ ಆಶ್ಚರ್ಯವಿಲ್ಲ.

ಅದಕ್ಕೇ ಹೇಳಿದ್ದು ಕ್ರಿಶ್ಚಿಯನ್ನರು ಮಹಾಬುದ್ಧಿವಂತರು ಅಂತಾ! ಸ್ವಾತಂತ್ರ್ಯ ಬಂದಾಗ ಕ್ರೈಸ್ತರು ಗಣನೀಯ ಸಂಖ್ಯೆಯಲ್ಲಿದ್ದ ಏಕೈಕ ರಾಜ್ಯವೆಂದರೆ ಗೋವಾ. ಆದರೆ ಇಂದು ಮೇಘಾಲಯ, ನಾಗಾಲ್ಯಾಂಡ್, ಅರುಣಾಚಲ ಪ್ರದೇಶ, ಸಿಕ್ಕಿಂಗಳೂ ಕ್ರಿಸ್ತನ ಜನ್ಮಸ್ಥಳವಾದ ಬೆತ್ಲೆಹೇಮ್‌ನ ಪ್ರತಿರೂಪಗಳಾಗಿವೆ. ಸಾಲದೆಂಬಂತೆ ಜಾರ್ಖಂಡ್ ಕೂಡ ಮತ್ತೊಂದು ಕ್ರೈಸ್ತ ರಾಜ್ಯವಾಗುವ ಎಲ್ಲ ಲಕ್ಷಣಗಳನ್ನೂ ಹೊರಹಾಕುತ್ತಿದೆ. ಹಾಗಂತ, ಕನ್ನಡಿಗರಾದ ನಾವು Safe ಎಂದು ಸಮಾಧಾನಪಟ್ಟುಕೊಳ್ಳಬೇಡಿ. ಒಮ್ಮೆ ಮಲೆನಾಡಿಗೆ ಕಾಲಿಟ್ಟರೆ ಮುಂದೆ ಎದುರಾಗಲಿರುವ ಪರಿಸ್ಥಿತಿಯ ಭೀಕರತೆ ಅರಿವಾಗುತ್ತದೆ.

ನೋವಿನ ಸಂಗತಿಯೆಂದರೆ 150 ವರ್ಷಗಳ ಕಾಲ ಬ್ರಿಟಿಷರ ಗುಲಾಮಗಿರಿಯಲ್ಲಿದ್ದರೂ, ಸತತ ದಾಳಿ, ದೌರ್ಜನ್ಯಗಳಿಗೆ ಒಳಗಾದರೂ ನಾವೆಂದೂ ಧರ್ಮವನ್ನು ದಾಸ್ಯಕ್ಕಿಡಲಿಲ್ಲ. ಆದರೆ ಈಗ, ನಾಲ್ಕು ಯುಗಗಳನ್ನು ಕಂಡಿರುವ ಹಿಂದೂ ಸಂಸ್ಕೃತಿಯನ್ನು ಸ್ವತಃ ನಾವೇ ಗುಲಾಮಗಿರಿಗೆ ದೂಡಲು ಮುಂದಾಗಿದ್ದೇವೆಯೇನೋ ಎಂಬ ಆತಂಕ ಕಾಡುತ್ತಿದೆ. ಈ ಭಯ, ಆತಂಕಕ್ಕೆ ಕಾರಣವೂ ಇದೆ.

ಕರ್ನಾಟಕದ ಇತರ ಭಾಗಗಳಂತೆ ಮಲೆನಾಡಿನಲ್ಲೂ ಭೂಮಿ ಹಿಂದೂಗಳ ಹಿಡಿತದಲ್ಲೇ ಇದೆ. ಆದರೆ ಕಳೆದ ಐದಾರು ವರ್ಷ ಗಳಿಂದ ಶುಂಠಿ ಬೆಳೆಯಲೆಂದು ಕೇರಳದ ಕ್ರಿಶ್ಚಿಯನ್ನರು ಆಗಮಿಸುತ್ತಿದ್ದಾರೆ. ಅವರೇನೂ ಪುಕ್ಕಟೆಯಾಗಿ ಜಮೀನು ನೀಡಿ ಎಂದು ಕೇಳುವುದಿಲ್ಲ. ಮನೆಗೆ ಬರುತ್ತಾರೆ. ನಿಮ್ಮ ಮುಂದೆ ವಿನೀತರಾಗಿಯೇ ಕೈಕಟ್ಟಿ ನಿಲ್ಲುತ್ತಾರೆ. 'ಸರ್', ನಿಮ್ಮ ಗದ್ದೆಯನ್ನು ಗುತ್ತಿಗೆಗೆ ಕೊಡುತ್ತೀರಾ? ಎಂದು ನಯ-ನಾಜೂಕಿನಿಂದಲೇ ಕೇಳುತ್ತಾರೆ. ಒಂದು ಎಕರೆಗೆ ವರ್ಷಕ್ಕೆ 15 ಸಾವಿರ ರೂ. ಕೊಡುತ್ತೇನೆ ಎಂಬ ಆಸೆಯನ್ನೂ ತೋರಿಸುತ್ತಾರೆ. ಭೂ ಮಾಲೀಕರಾದ ನೀವೂ ಕೂಡ ದಡ್ಡರಲ್ಲ! ಎಲ್ಲ ಲೆಕ್ಕ ಹಾಕುತ್ತೀರಿ. ಕೂಡಿ, ಕಳೆದು ನೋಡುತ್ತೀರಿ. ಭತ್ತ ಬೆಳೆದರೆ, ಒಳ್ಳೆ ಇಳುವರಿ ಬಂದರೆ, ಯೋಗ್ಯ ಬೆಲೆಯೂ ದೊರೆತರೆ ಹೆಚ್ಚೆಂದರೆ ಒಂದು ಎಕರೆ ಭೂಮಿಯಿಂದ 6 ರಿಂದ 8 ಸಾವಿರ ರೂ. ಆದಾಯ ಬರಬಹುದು. ಖರ್ಚು, ವೆಚ್ಚ, ಶ್ರಮವನ್ನು ಕಳೆದರೆ ಆದಾಯ 3 ಸಾವಿರಕ್ಕಿಳಿಯುತ್ತದೆ. ಆದರೆ ಮಲೆಯಾಳಿ ಕ್ರೈಸ್ತನಿಗೆ ನೀಡಿದರೆ

ಬೆವರು ಸುರಿಸದೇ, ಮೈಬಗ್ಗಿಸದೆ ಕುಳಿತಲ್ಲೇ 15 ಸಾವಿರ ಎಣಿಸಬಹುದು ಎಂಬ ಜ್ಞಾನೋದಯ ನಿಮ್ಮಲ್ಲುಂಟಾಗುತ್ತದೆ. ಕೂಡಲೇ Yes ಎನ್ನುತ್ತೀರಿ. ಆ ಮಲೆಯಾಳಿ ಕ್ರಿಶ್ಚಿಯನ್, ನಿಮ್ಮ ಗದ್ದೆಗೆ ಶುಂಠಿ ಹಾಕುತ್ತಾನೆ. ರಸಗೊಬ್ಬರ ಸುರಿಯುತ್ತಾನೆ. 6 ರಿಂದ 12 ರೌಂಡ್ ಕೀಟ, ಕ್ರಿಮಿನಾಶಕವನ್ನು ಸಿಂಪಡಿಸುತ್ತಾನೆ. ರೇಡೋಮಿಲ್ ಎಂಬ ಭಯಂಕರ ವಿಷವನ್ನು ಸುರಿದ ಮೇಲೆ ಗದ್ದೆ ಉಳಿಯುತ್ತದೆಯೇ? ಶಾಶ್ವತವಾಗಿ ಸತ್ವ ಕಳೆದುಕೊಳ್ಳುತ್ತದೆ. ಎಂಟು ತಿಂಗಳ ವೇಳೆಗೆ ಶುಂಠಿ ಬೆಳೆದು ನಿಲ್ಲುತ್ತದೆ. ಪ್ರತಿ ಗುಣಿಯಲ್ಲೂ 1 ರಿಂದ 3 ಕೆ.ಜಿ. ಇಳುವರಿ ಬರುತ್ತದೆ. ಖರ್ಚು ಕಳೆದರೂ ಎರಡೂವರೆಯಿಂದ ಮೂರು ಲಕ್ಷ ರೂ. ಆದಾಯ ಬರುತ್ತದೆ! ನೂರಾರು ಎಕರೆ ಭೂಮಿಯಲ್ಲಿ ಶುಂಠಿ ಬೆಳೆಯುವ ಆತನಿಗೆ ಬರುವ ಒಟ್ಟು ಆದಾಯ ಎಷ್ಟಾದೀತು ಲೆಕ್ಕಹಾಕಿ? ಹೀಗೆ ಬಂದ ಕೋಟ್ಯಂತರ ರೂ.ಗಳನ್ನು ಹಿಂದೂಗಳಂತೆ ಆತ ಪೆಟ್ಟಿಗೆಯಲ್ಲಿ ಕಟ್ಟಿಡುವುದಿಲ್ಲ. ನಿಮ್ಮ ಗದ್ದೆಯಲ್ಲೇ ಶುಂಠಿ ಬೆಳೆದು ಕೊನೆಗೆ ನಿಮ್ಮ ತೋಟವನ್ನೇ ಖರೀದಿ ಮಾಡುತ್ತಾನೆ! ಇದು ಕಥೆಯಲ್ಲ. ಮಡಿಕೇರಿ, ಹಾಸನ ಮತ್ತು ಚಿಕ್ಕಮಗಳೂರು ಜಿಲ್ಲೆಗಳಲ್ಲಿ ಕಂಡುಬರುತ್ತಿರುವ ಅಪಾಯಕಾರಿ ಬೆಳವಣಿಗೆ. ಹಿಂದೂಗಳ ನೂರಾರು ಎಕರೆ ಕಾಫಿ ಮತ್ತು ಅಡಿಕೆ ತೋಟಗಳು ಕ್ರೈಸ್ತರ ಕೈವಶವಾಗುತ್ತಿವೆ. ತೋಟಕ್ಕೆ ಬರುವ ಕೂಲಿ ಕಾರ್ಮಿಕರನ್ನು ಬೋನಸ್ ನೀಡುವ, ಮಕ್ಕಳಿಗೆ ಉಚಿತ ವಿದ್ಯಾಭ್ಯಾಸ ನೀಡುವ ಆಮಿಷವೊಡ್ಡಿ ವ್ಯವಸ್ಥಿತವಾಗಿ ಮತಾಂತರ ಮಾಡಲಾಗುತ್ತಿದೆ. ಕಾಲೋನಿಗಳಲ್ಲಿ ಮಾರಿಯಮ್ಮ ಮಾಯವಾಗಿ, ಮನೆ ಮನೆಗಳಿಗೆಲ್ಲ ಮೇರಿಯಮ್ಮ ಬಂದಿದ್ದಾಳೆ! ಇದು ಹಳ್ಳಿ ಗಳಿಗೆ ಮಾತ್ರ ಸೀಮಿತವಾಗಿಲ್ಲ. ಮೆಟ್ರೋಪಾಲಿಟನ್ ಸಿಟಿಯಾದ ಬೆಂಗಳೂರಿನಲ್ಲಿ ನಮ್ಮ ಗಣಪತಿಗೆ ಪ್ರತಿಸ್ಪರ್ಧಿಯಾಗಿ 'ಸಂತ ಆ್ಯಂಟನಿ' ವಿಗ್ರಹಗಳನ್ನು ಸೃಷ್ಟಿಸಿ ಆರಾಧನೆ ಆರಂಭಿಸಿದ್ದಾರೆ! ಹೇಗಿದೆ ನೋಡಿ, ಕೃತ್ರಿಮತೆ? ನಿಜಕ್ಕೂ ಎದೆ ಝಲ್ಲೆನ್ನುತ್ತಿದೆ. ಹಿಂದೂಗಳು ಕೂಡಲೇ ಎಚ್ಚೆತ್ತುಕೊಳ್ಳದಿದ್ದರೆ ಮುಂದೊಂದು ದಿನ ತಮ್ಮ ತೋಟ, ಗದ್ದೆ, ಹೊಲಕ್ಕೆ ತಾವೇ ಕೂಲಿ ಕೆಲಸಕ್ಕೆ ಹೋಗಬೇಕಾಗುವ ಪರಿಸ್ಥಿತಿ ಖಂಡಿತಾ ಬರಲಿದೆ. ಆಗ ತಲೆ ಮೇಲೆ ಕೈಹೊತ್ತು, 'ವೇದಗಳಿಗೆ ಹಿಂದಿರುಗಿ' ಎಂದ ದಯಾನಂದ ಸರಸ್ವತಿ, ಗಣೇಶೋತ್ಸವ ಆರಂಭಿಸಿದ ತಿಲಕ್ ಮತ್ತೆ ಹುಟ್ಟಿಬರಲಿ ಎಂದು ಆಕಾಶವನ್ನು ನೋಡಬೇಕಾಗುತ್ತದೆ. ಹಿಂದೂಗಳ ತಾಕತ್ತು ಇರುವುದು ಒಗ್ಗಟ್ಟಿನಲ್ಲಲ್ಲ, ಭೂಮಿಯ ಮಾಲೀಕತ್ವದಲ್ಲಿ. ಅಂತಹ ಮಾಲೀಕತ್ವವನ್ನೇ ಕಳೆದುಕೊಳ್ಳುವುದು ಮತ್ತೊಂದು ಗುಲಾಮಗಿರಿಗೆ, ಧಾರ್ಮಿಕ ದಾಸ್ಯಕ್ಕೆ ಆಹ್ವಾನ ನೀಡಿದಂತೆ.

ಯಾವುದೇ ನಗರಗಳನ್ನು ತೆಗೆದುಕೊಳ್ಳಿ. ಆ ನಗರದ ಆಯಕಟ್ಟಿನ ಸ್ಥಳದಲ್ಲಿ ಕ್ರಿಶ್ಚಿಯನ್ನರು ಭೂಮಿ ಖರೀದಿ ಮಾಡುತ್ತಾರೆ. ಅಲ್ಲೊಂದು ಭವ್ಯ ಚರ್ಚ್ ಕಟ್ಟುತ್ತಾರೆ. ಜತೆಗೊಂದು ವಿದ್ಯಾಸಂಸ್ಥೆ ಮತ್ತು ಆಸ್ಪತ್ರೆ ನಿರ್ಮಿಸುತ್ತಾರೆ. ನಿಮಗೆ ಜ್ವರ ಬಂದರೂ, ಸೊಂಟ ನೋವಾದರೂ ಅದೇ ಆಸ್ಪತ್ರೆಗೆ ಹೋಗುತ್ತೀರಿ. ಮಕ್ಕಳನ್ನು ಶಾಲೆಗೆ ಸೇರಿಸುವಾಗಲೂ ಮೊದಲು ನಿಮ್ಮ ಗಮನಕ್ಕೆ ಬರುವುದು ಚರ್ಚ್ ಆವರಣದಲ್ಲೇ ಇರುವ ಕಾನ್ವೆಂಟ್. ಇನ್ನು ಕ್ರಿಸ್ತನ ಶಾಲೆಗೆ ಹೋದ ಮಕ್ಕಳು ಮನೆಗೆ ಬಂದು ಕ್ಯಾಂಡಲ್ ಹಚ್ಚದೆ ದೀಪ ಹಚ್ಚಲು ಸಾಧ್ಯವೆ? ಆಗ ಕೈ ಕೈ ಹಿಸುಕಿಕೊಂಡರೂ ಲಾಭವಿಲ್ಲ. ಏಕೆಂದರೆ ಸೈಂಟ್ ಮಾರ್ಕ್ಸ್, ಜಾನ್ಸ್, ಆ್ಯನ್ಸ್, ಜೋಸೆಫ್ಸ್ ಎಂಬ ಹೆಸರು ಕೇಳಿದ ಕೂಡಲೇ ಇಂಗ್ಲೀಷ್

ಹುಟ್ಟಿರುವುದೇ ಕ್ರೈಸ್ತರ ಶಾಲೆಗಳಲ್ಲಿ, ಕ್ವಾಲಿಟಿ ಎಜುಕೇಷನ್ ಅನ್ನೋದು ದೊರೆಯುವುದೇ ಕ್ರೈಸ್ತ ಕಾನ್ವೆಂಟ್‌ಗಳಲ್ಲಿ ಎಂಬ ಭ್ರಮೆಯಿಂದ ಮಿಷನರಿಗಳ ಶಾಲೆಗೆ ಮಕ್ಕಳನ್ನು ಕಳುಹಿಸಿದ ಮೂರ್ಖರು ನಾವೇ ಅಲ್ಲವೆ? ಮತ್ತೇಕೆ ಮಕ್ಕಳನ್ನು ದೂರಬೇಕು? ಕಾನ್ವೆಂಟ್‌ಗಳಲ್ಲೋ... ನಮ್ಮ ಮಕ್ಕಳು ಹೂವು ಮುಡಿಯುವಂತಿಲ್ಲ, ಕೈಗೆ ಬಳೆ ತೊಡುವಂತಿಲ್ಲ, ಹಣೆಗೆ ಕುಂಕುಮ ಇಡುವಂತಿಲ್ಲ. ಡಿಸಿಪ್ಲೀನ್ ಹೆಸರಿನಲ್ಲಿ ಹಿಂದೂ ಧರ್ಮದ ಎಲ್ಲ ಸಂಕೇತಗಳನ್ನು ವ್ಯವಸ್ಥಿತವಾಗಿ ಹೊಸಕಿಹಾಕುತ್ತಾರೆ. ಎಳೆ ಮನಸುಗಳಿಗೆ ಕ್ರಿಶ್ಚಿಯಾನಿಟಿಯನ್ನು ತುರುಕುತ್ತಾರೆ.

ಇನ್ನು ನಮಗೋ ಸಿಸ್ಟರ್ರು, ಫಾದರ್ರು, ಮದರ್ರು ಹೇಳಿದ್ದೇ ವೇದ ವಾಕ್ಯ! ಬೂದಿದಾಸರು, ಬುಡುಬುಡಿಕೆಯವರು, ಗಿಳಿಶಾಸ್ತ್ರ ಹೇಳುವವರು ಅಂತಾ ಹಿಂದೂ ಧರ್ಮದ ಪದ್ಧತಿಗಳ ಬಗ್ಗೆ ನಾವೇ ಮೂಗು ಮುರಿಯುತ್ತೇವೆ. ಆದರೆ ಕ್ಯಾಥೋಲಿಕ್ ಪಾದ್ರಿಗಳು ಇಂಗ್ಲಿಷ್‌ನಲ್ಲಿ ಬುಡುಬುಡಿಕೆ ಹೇಳಿದರೆ ನಮ್ಮ ಕಿವಿ ನೆಟ್ಟಗಾಗುತ್ತವೆ. ಮದರ್ ತೆರೆಸಾ ಅವರಿಗೆ 'ಮಾಟಗಾತಿ' ಪಟ್ಟ ಕಟ್ಟಿದ್ದನ್ನು 'ಜೀ ಹುಜೂರ್' ಅಂತಾ ಒಪ್ಪಿಕೊಳ್ಳುತ್ತೇವೆ. ಹಲೋ..... ಸ್ವಲ್ಪ ಪ್ರಜ್ಞಾವಸ್ಥೆಗೆ ಬನ್ನಿ. ಮದರ್ ತೆರೆಸಾ ಸಂತ ಪದವಿಗೇರಿದ ಕಥೆ ಗೊತ್ತಾ? ವ್ಯಾಟಿಕನ್‌ನಲ್ಲಿ ಆಸೀನರಾಗಿರುವ ಪೋಪ್ ಜಾನ್‌ಪಾಲ್‌ಗೆ ಮೊದಲಿನಿಂದಲೂ ಮದರ್‌ತೆರೆಸಾ ಬಗ್ಗೆ ಒಲವು. ಹಾಗಾಗಿ ಆಕೆ ಸತ್ತು(1997, ಸೆಪ್ಟೆಂ ಬರ್ 5) ಐದು ವರ್ಷ ಕಳೆಯುವ ಮೊದಲೇ ಸಂತ ಪದವಿಗೇರಿಸುವ ಯೋಜನೆಯೊಂದನ್ನು ರೂಪಿಸಿದರು. ಆದರೆ ಸಂತ ಪದವಿಗೇರಿಸಲು ಸತ್ತ ನಂತರ ಮದರ್ ಎರಡು ಪವಾಡಗಳನ್ನು ತೋರಬೇಕಿತ್ತು. ಆಗ ಸಿಕ್ಕಿದವಳೇ ಮೋನಿಕಾ ಬೆಸ್ರಾ ಎಂಬ ಕೋಲ್ಕತಾದ ಅಮಾಯಕಿ. ಆಕೆ ತನ್ನ ಹೊಟ್ಟೆಯಲ್ಲಿದ್ದ ಕ್ಯಾನ್ಸರ್ ಗಡ್ಡೆಗೆ ವೈದ್ಯರಿಂದ ಚಿಕಿತ್ಸೆ ಪಡೆಯುತ್ತಿದ್ದಳು. ಕೊನೆಗೊಂದು ದಿನ ಗಡ್ಡೆ ಕರಗಿಯೂ ಹೋಯಿತು. ಆದರೆ 'ಮದರ್ ಪವಾಡದಿಂದ ಗಡ್ಡೆ ಕರಗಿತು' ಎಂದು ಮಿಷನರೀಸ್ ಆಫ್ ಚಾರಿಟಿ ಕಥೆ ಕಟ್ಟಿತು!! ಅಲ್ಲಿಗೆ ಸಂತ ಪದವಿಗೇರಿಸುವ ನಿಟ್ಟಿನಲ್ಲಿ ಮೊದಲ ಹಂತವಾದ 'ಬೀಟಿಫಿಕೇಶನ್'ಗೆ (Beatification) ಹಾದಿ ಸುಗಮವಾಯಿತು. ಅಕ್ಟೋಬರ್ 19, 2003ರಂದು ಬೀಟಿಫಿಕೇಶನ್ ಮುಗಿದಿದೆ. ಆದರೆ ಅಂತಿಮವಾಗಿ ಸಂತ ಪದವಿಗೇರಿಸುವ (Canonization) ಮೊದಲು ಮದರ್ ತೆರೆಸಾ ಮತ್ತೊಂದು ಪವಾಡವನ್ನು ತೋರಬೇಕಿದೆ. ಹಾಗಾಗಿ, ಪವಾಡಗಳೇನಾದರೂ ಸಂಭವಿಸಿದ್ದರೆ ಕೂಡಲೇ ಗಮನಕ್ಕೆ ತರುವಂತೆ ಮಿಷನರೀಸ್ ಆಫ್ ಚಾರಿಟಿಯ ಮುಖ್ಯಸ್ಥೆ ಸಿಸ್ಟರ್ ನಿರ್ಮಲಾ ಕಳೆದ ತಿಂಗಳು ಮನವಿ ಮಾಡಿದ್ದಾರೆ. ಆದರೆ ಪ್ರಶ್ನೆಯಿಷ್ಟೆ. ಮದರ್ ತೆರೆಸಾಗೆ ನಿಜವಾಗಿಯೂ ಪವಾಡ ಶಕ್ತಿ ಇದೆಯೆಂದಾದರೆ ತಮ್ಮನ್ನು ಸಂತಪದವಿಗೇರಿಸಲು ಪ್ರಯತ್ನಿಸುತ್ತಿರುವ ಪೋಪ್ ಜಾನ್‌ಪಾಲ್ ಅವರನ್ನೇ ಮೊದಲು ಗುಣಪಡಿಸಲಿ. ಏಕೆಂದರೆ ಪೋಪ್ ಜಾನ್‌ಪಾಲ್ ಪಾರ್ಕಿನ್ಸನ್(ನರದೌರ್ಬಲ್ಯ) ರೋಗದಿಂದ ಬಳಲುತ್ತಿದ್ದು ತಮ್ಮ ತಲೆಯನ್ನು ಎತ್ತುವುದಕ್ಕೂ ಅವರಿಗೆ ಸಾಧ್ಯವಿಲ್ಲ. ಒಂದು ವೇಳೆ ಸ್ವರ್ಗ ಸೇರಿರುವ ಮದರ್ ಅವರೇನಾ ದರೂ ತಮ್ಮ ಪವಾಡ ಶಕ್ತಿಯಿಂದ ಜಾನ್‌ಪಾಲ್ ಅವರನ್ನು ಗುಣಪಡಿಸಿದರೆ ಮೋನಿಕಾ ಬೆಸ್ರಾಗಳ ಕ್ಯಾನ್ಸರ್ ಗಡ್ಡೆಯನ್ನು ಕರಗಿಸಿದ್ದು ಕೋಲ್ಕತಾದ ವೈದ್ಯರಲ್ಲ, ಮದರ್ ತೆರೆಸಾ ಎಂದು ಒಪ್ಪಿಕೊಳ್ಳಬಹುದು. ಕ್ರೈಸ್ತ ಧರ್ಮದ ಕಟ್ಟಾ ಪ್ರತಿಪಾದಕರು, ಸಮರ್ಥಕರೂ

ಆಗಿರುವ ಜಾನ್ ದಯಾಳ್, ಸಜನ್ ಜಾರ್ಜ್, ಸೆಡ್ರಿಕ್ ಪ್ರಕಾಶ್, ವಾಲ್ಸನ್ ಥಂಪೂ, ವಿಶಾಲ್ ಮಂಗಳ್‌ವಾಡಿಯವರೇ ಏನಂತೀರಿ? ಹಿಂದೂ ಧರ್ಮದಲ್ಲಿನ ಅಸಮಾನತೆ, ಮೌಢ್ಯತೆಯನ್ನು ಪ್ರಶ್ನಿಸುವ ಮೊದಲು ನಿಮ್ಮದು ಮೌಢ್ಯತೆಯಲ್ಲ ಎಂದು ಸಾಬೀತುಪಡಿಸಿ. ತಮ್ಮದು ಅತ್ಯಂತ 'ಪ್ರಗತಿಪರ' ಧರ್ಮ ಎನ್ನುತ್ತಿರುವ ನೀವು ಜಗತ್ತಿಗೆ ನೀಡುತ್ತಿರುವ ಸಂದೇಶವಾದರೂ ಏನು? 'ಯೇಸು ನಿನ್ನನ್ನು ಕರೆ ಯುತ್ತಿದ್ದಾನೆ', 'ಬಾಲ ಯೇಸುವನ್ನು ಪೂಜಿಸಿ, ಸಮಸ್ಯೆಗಳಿಗೆ ಪರಿಹಾರ ಪಡೆಯಿರಿ', 'ಸಾಮೂಹಿಕ ಪ್ರಾರ್ಥನೆಗೆ ಬನ್ನಿ, ನಿಮ್ಮ ರೋಗ ಗುಣವಾಗುತ್ತದೆ'! ಇದೆಲ್ಲಾ ಏನು? ಯೇಸುವನ್ನು ಪ್ರಾರ್ಥಿಸಿದ ಕೂಡಲೇ ರೋಗ ಗುಣವಾಗುವುದಾದರೆ ವೈದ್ಯರೇಕೆ ಬೇಕು? ಮೆಡಿಕಲ್ ಕಾಲೇಜುಗಳನ್ನು ಮುಚ್ಚಿ ಚರ್ಚ್‌ಗಳಾಗಿ ಪರಿವರ್ತಿಸಬಹುದಲ್ಲವೇ? ದಕ್ಷಿಣ ಆಫ್ರಿಕಾ, ಜಿಂಬಾಬ್ವೆ, ಬ್ರೆಜಿಲ್ ಮುಂತಾದ ಕ್ರೈಸ್ತ ರಾಷ್ಟ್ರಗಳಲ್ಲಿ ಜಗತ್ತಿನಲ್ಲಿಯೇ ಅತಿ ಹೆಚ್ಚು ಏಯ್ಡ್ಸ್ ರೋಗಿಗಳಿದ್ದಾರೆ. ಪ್ರತಿ ಭಾನುವಾರ ಅವರು ತಪ್ಪದೇ ಚರ್ಚಿಗೆ ಹೋಗುತ್ತಾರೆ. ಆದರೂ ಏಯ್ಡ್ಸ್‌ನಿಂದ ಗುಣಮುಖರಾಗಿಲ್ಲವೇಕೆ? ಅಂದಹಾಗೇ, ಅಮೆರಿಕ, ಜರ್ಮನಿ ಮುಂತಾದ ಕ್ರೈಸ್ತ ರಾಷ್ಟ್ರಗಳಲ್ಲೇ ವೈದ್ಯಕೀಯ ಸಂಶೋಧನೆಗೆ ಅತಿ ಹೆಚ್ಚಿನ ಹಣ ಸುರಿಯುತ್ತಿರುವುದೇಕೆ? ಅದೇ ಹಣದಲ್ಲಿ ಬಾಲ ಯೇಸುವಿನ ಚರ್ಚ್ ಕಟ್ಟಬಹುದಲ್ಲವೇ? ಎಷ್ಟೇ ಆಗಲಿ, ಯೇಸುವಿನ ಭಜನೆ ಮಾಡಿದರೆ, ಸಾಮೂಹಿಕ ಪ್ರಾರ್ಥನೆಯಲ್ಲಿ ಪಾಲ್ಗೊಂಡರೆ ಸಮಸ್ಯೆ ಪರಿಹಾರವಾಗುತ್ತದಲ್ಲವೇ? ಇಂತಹ ಮಧ್ಯಯುಗದ ಮೂರ್ಖತನ, ಮೌಢ್ಯವನ್ನು ನೀವು ಬಿಡುವುದು ಯಾವಾಗ?

ಇತ್ತ ಹಿಂದೂಗಳಾದ ನಾವೂ ಕೂಡ ಕಾನ್ವೆಂಟ್ ಮೋಹ ಬಿಡಬೇಕು. ನಮ್ಮದೇ ಆದ ಮಠ-ಮಂದಿರಗಳು ಕಟ್ಟಿರುವ ಖ್ಯಾತ ಸಿದ್ಧಗಂಗಾ, ಜಗದ್ಗುರು ಶ್ರೀ ಶಿವರಾತ್ರೀಶ್ವರ(ಜೆಎಸ್‌ಎಸ್), ಶ್ರೀ ತರಳಬಾಳು ಜಗದ್ಗುರು (ಎಸ್‌ಟಿಜೆ)ಗಳಂತಹ ಅದ್ಭುತ ವಿದ್ಯಾಕೇಂದ್ರಗಳು ನಿಸ್ವಾರ್ಥದಿಂದ ವಿದ್ಯಾದಾನ ಮಾಡುತ್ತಿವೆ. ಪ್ರತಿವರ್ಷವೂ ಐದಾರು ಐಎಎಸ್ ಅಧಿಕಾರಿಗಳನ್ನು ರೂಪಿಸುತ್ತಿರುವ ಇತಿಹಾಸ ನಮ್ಮ ಜೆ.ಎಸ್.ಎಸ್.ಗಿದೆ. ಕಣ್ತೆರೆದು ನೋಡಬೇಕಷ್ಟೆ. ಜತೆಗೆ 'ನಿರ್ಮಾ'ಗಿಂತ ಸರ್ಫ್ ಎಕ್ಸೆಲ್ ಮತ್ತು ಏರಿಯಲ್‌ನಲ್ಲಿ ಚೆನ್ನಾಗಿ ಕೊಳೆ ಹೋಗುತ್ತದೆ ಎಂಬಂತೆ ಧರ್ಮ ಪ್ರಚಾರ ಮಾಡುತ್ತಿರುವ ಮಿಷನರಿಗಳ ಮಾತಿಗೆ ಮರುಳಾಗುವುದನ್ನು ಇನ್ನಾದರೂ ನಿಲ್ಲಿಸಬೇಕು. ಏಕೆಂದರೆ ಕ್ರೈಸ್ತ ಧರ್ಮಕ್ಕೆ ಮತಾಂತರಗೊಂಡ ಮಾತ್ರಕ್ಕೆ ತಮಗೆ ಸಮಾನತೆ, ಸಮಾನ ಆದ್ಯತೆ ದೊರೆತೇ ಬಿಡುತ್ತದೆಂಬ ಭ್ರಮೆ ಬೇಡ. ಸಣ್ಣ, ಪುಟ್ಟ, ದೊಡ್ಡ ಎಂಬ ಹಿಂದೂ ಹೆಸರುಗಳು ಬದಲಾಗಿ ಮೈಕೆಲ್ಲು, ಜಾನು, ಪೇದ್ರುಗಳಾಗುತ್ತವೆಯೇ ಹೊರತು ಸಾಮಾಜಿಕ ಸ್ಥಾನಮಾನ ಎಂದೂ ಬದಲಾಗುವುದಿಲ್ಲ. ಅಲ್ಲೂ ದಲಿತ ಕ್ರೈಸ್ತರಾಗಿಯೇ ಉಳಿಯಬೇಕಾಗುತ್ತದೆ. ಆದ್ದರಿಂದ ನಮ್ಮ ಹಿರಿಯರು ಉಳಿಸಿ, ಬೆಳೆಸಿ, ಪೋಷಿಸಿದ ಹಿಂದೂ ಸಂಸ್ಕೃತಿಯನ್ನು ತಿರಸ್ಕರಿಸುವ ಮೊದಲು ಯೋಚಿಸಿ. ಎಷ್ಟೇ ಆಗಲಿ, ಹಂಗಿನರಮನೆಯಲ್ಲಿ ಮತ್ತೆ ಆಳಾಗಿ ಬಾಳುವುದಕ್ಕಿಂತ ಸ್ವಂತ ಗೂಡಿನಲ್ಲಿ ಸಾಯುವುದೇ ಲೇಸು.

ಶ್ರೀಕೃಷ್ಣ ಹೇಳಿದಂತೆ....

'ಸ್ವಧರ್ಮೇ ನಿಧನಂ ಶ್ರೇಯಃ'!

'ಬೆತ್ತಲೆ ಜಗತ್ತು' ಅಂಕಣದ 'ಮರೆಯಾಗುತ್ತಿರುವ ಮಾರಿಯಮ್ಮ, ಮನೆಮನೆಗಳಲ್ಲಿ ಮೇರಿಯಮ್ಮ' ಲೇಖನ ಓದಿ ಹಿಂದೂಗಳಾದ ನಮಗೆ ಆತಂಕವಾಗುತ್ತಿದೆ. ಮೊನ್ನೆ ತಾನೇ ಪ್ರಕಟವಾದ ಸಮೀಕ್ಷೆಯೊಂದರ ಪ್ರಕಾರ ಹಿಂದೂಗಳ ಸಂಖ್ಯೆ ಗಣನೀಯವಾಗಿ ಕಡಿಮೆಯಾಗುತ್ತಿದೆ. ನಮ್ಮ ನೆಲದಲ್ಲೇ ನಾವು ಕೂಲಿಗಳಾಗುವ ಲಕ್ಷಣ ಗೋಚರವಾಗುತ್ತಿದೆ. ನಮ್ಮ ಹಿಂದೂ ಸಂಸ್ಕೃತಿ, ಸಂಪ್ರದಾಯವನ್ನು ಕಾಪಾಡಲು ನಾವು ಮುಂದಾಗಬೇಕು.

ಗಣೇಶ್ ಜಿ.
ಬೆಂಗಳೂರು

ಅದು, ಸಂಸದರಾಗಿ ನಾಮಕರಣಗೊಂಡಿರುವ ಫ್ರಾನ್ಸಿಸ್ ಫ್ಯಾನ್‌ದೋಮ್ ಅವರ ಸನ್ಮಾನ ಸಮಾರಂಭ. ಅಸೋಸಿಯೇಷನ್ ಆಫ್ ಸ್ಕೂಲ್ಸ್ ಫಾರ್ ದಿ ಇಂಡಿಯನ್ ಸ್ಕೂಲ್ ಸರ್ಟಿಫಿಕೇಟ್‌ನ ರಾಜ್ಯ ಶಾಖೆ, ಕಳೆದ ಶನಿವಾರ ಬೆಂಗಳೂರಿನಲ್ಲಿ ಸಮಾರಂಭವನ್ನು ಆಯೋಜನೆ ಮಾಡಿತ್ತು. ಕಾರ್ಯಕ್ರಮಕ್ಕೆ ಆಗಮಿಸಿದ ಹೈಕೋರ್ಟ್‌ನ ನಿವೃತ್ತ ನ್ಯಾಯಾಧೀಶರಾದ ಎಂ.ಎಫ್. ಸಲ್ದಾನ, ''ಹಾಲಿ ರಾಷ್ಟ್ರಪತಿ ಅಬ್ದುಲ್ ಕಲಾಂ ಬಗ್ಗೆ ತಮಗೆ ಉತ್ತಮ ಅಭಿಪ್ರಾಯವಿಲ್ಲ. ರಾಷ್ಟ್ರಪತಿಯವರು ಪುಟಾಣಿಗಳೊಂದಿಗೆ ಕಾಲ ಕಳೆಯುವುದರಲ್ಲೇ ಖುಷಿಪಡುತ್ತಿದ್ದಾರೆ'' ಎಂಬ ನುಡಿಮುತ್ತೊಂದನ್ನು ಉದುರಿಸಿದ್ದಾರೆ!

ಈ ಮಾತನ್ನು ಒಪ್ಪಲು ಸಾಧ್ಯವೆ?

ಒಬ್ಬ ನ್ಯಾಯಾಧೀಶರಾಗಿ ಸಲ್ದಾನ ಅವರು ಮಾಡಿರುವ ಸಾಧನೆ, ಗಳಿಸಿರುವ ಹೆಸರಿನ ಬಗ್ಗೆ ಖಂಡಿತಾ ಬೆರಳೆತ್ತಲು ಸಾಧ್ಯವಿಲ್ಲ. ಆದರೆ ಅವರ ಪ್ರಚಾರಪ್ರಿಯತೆ, ಗಿಮಿಕ್ಕು, ಗಿಲೀಟುಗಳೂ ಅಷ್ಟೇ ಸತ್ಯ. ಹಾಗಾಗಿಯೇ ರಾಷ್ಟ್ರಪತಿಯವರನ್ನು ಟೀಕಿಸಿದರೆ ಪುಕ್ಕಟೆ ಪ್ರಚಾರ ಸಿಗಬಹುದು ಎಂಬುದು ಸಲ್ದಾನ ಅವರ ಉದ್ದೇಶವಾಗಿರಬಹುದು. ಆದರೆ ಅಬ್ದುಲ್ ಕಲಾಂ ಬಗ್ಗೆ ಅವರಾಡಿರುವ ಮಾತುಗಳನ್ನು ಜೀರ್ಣಿಸಿಕೊಳ್ಳುವುದು ಖಂಡಿತಾ ಕಷ್ಟವಾಗುತ್ತದೆ. ಸಲ್ದಾನ ಅವರಂತೆಯೇ ಯೋಚಿಸಿದರೆ, ರಾಷ್ಟ್ರಪತಿಯಾಗಿ ಅಬ್ದುಲ್ ಕಲಾಂ ಏನೂ ಮಾಡುತ್ತಿಲ್ಲ, ಬರೀ ಮಕ್ಕಳ ಜತೆ ಹರಟೆ ಹೊಡೆಯುವುದರಲ್ಲೇ ಕಾಲ ಕಳೆಯುತ್ತಿದ್ದಾರೆ ಎಂದು ನಮಗೂ ಅನಿಸಬಹುದು. ಆದರೆ ರಾಷ್ಟ್ರಪತಿ ಸ್ಥಾನದಲ್ಲಿ ಯಾರೇ ಕುಳಿತುಕೊಂಡರೂ ಅವರಿಗೆ ಎಕ್ಸಿಕ್ಯುಟಿವ್ ಪವರ್ ಇಲ್ಲ. ಬರೀ ರಬ್ಬರ್ ಸ್ಟಾಂಪ್. ಸಂಸತ್ತಿನಲ್ಲಿ ಅಂಗೀಕಾರವಾದ ವಿಧೇಯಕಗಳು, ನೂತನ ಕಾಯಿದೆ-ಕಾನೂನುಗಳು, ಸುಗ್ರೀವಾಜ್ಞೆಗಳಿಗೆ ಸಹಿ ಹಾಕುವುದನ್ನು ಬಿಟ್ಟರೆ ಬೇರೆ ಕೆಲಸಗಳಿಲ್ಲ. ಹೆಚ್ಚೆಂದರೆ ಆಳುವ ಸರಕಾರ ಇಚ್ಛಿಸಿದರೆ ಹೊರ ರಾಷ್ಟ್ರಗಳಿಗೆ ಭೇಟಿ ಕೊಟ್ಟು ಬರಬಹುದು. ಅಂತಹ ಭೇಟಿಗಳು 'ವಿಹಾರ'ವಲ್ಲದೆ ಮತ್ತಾವುದೇ ಮಹತ್ವ ಹೊಂದಿರುವುದಿಲ್ಲ. ಅದನ್ನು ಬಿಟ್ಟರೆ, ಉತ್ಸವ ಮೂರ್ತಿಗಳಾದ ರಾಜ್ಯಪಾಲರಂತೆ ಯಾವುದಾದರೂ ವಿಶ್ವವಿದ್ಯಾಲಯಗಳ ಘಟಿಕೋತ್ಸವ ಸಮಾರಂಭಗಳಿಗೆ ಹೋಗಿ, ಭಾಷಣ ಮಾಡಿಬರಬಹುದು. ಬಾಬು ರಾಜೇಂದ್ರ ಪ್ರಸಾದ್ ಅವರಿಂದ ಶಂಕರ್ ದಯಾಳ್ ಶರ್ಮಾವರೆಗೂ ಎಲ್ಲ ರಾಷ್ಟ್ರಪತಿಗಳು ಮಾಡಿದ್ದು ಇದೇ ಕೆಲಸವನ್ನು! ಇನ್ನು ಹತ್ತು ವರ್ಷ ಕರ್ನಾಟಕದ ರಾಜ್ಯಪಾಲರಾಗಿದ್ದ ಖುರ್ಷಿದ್ ಆಲಂ ಖಾನ್, ರಾಜಭವನವನ್ನು ಭೂತಬಂಗಲೆ ಮಾಡಿಹೋಗಿದ್ದರು. ಹಾಗಾಗಿಯೇ ಜನರೊಂದಿಗೆ ಬೆರೆಯಲು, ಅವರ ಸಮಸ್ಯೆಗಳಿಗೆ ಸ್ಪಂದಿಸಲು, ಕನ್ನಡ ಕಲಿತು ಕನ್ನಡದಲ್ಲೇ ಭಾಷಣ ಮಾಡಲು ಪ್ರಯತ್ನಿಸಿದ ಮಾಜಿ ರಾಜ್ಯಪಾಲೆ ರಮಾದೇವಿ ನಮಗೆ ಆಪ್ತವೆನಿಸುತ್ತಾರೆ, ಅಬ್ದುಲ್ ಕಲಾಂ ಮನಸ್ಸಿಗೆ ಹತ್ತಿರವಾಗುತ್ತಾರೆ. ರಾಷ್ಟ್ರಪತಿ ಸ್ಥಾನವೆಂಬ 'ದಂತಗೋಪುರ'ವನ್ನು ಒಡೆದು ಜನರನ್ನು ತಲುಪಲು, ರಾಷ್ಟ್ರಪತಿಗಳೇನು ಅತಿಮಾನವರಲ್ಲ, ಸಾಮಾನ್ಯರಲ್ಲಿ ಸಾಮಾನ್ಯ ಎಂಬ ಭಾವನೆಯನ್ನು ಮೂಡಿಸಲು ಅವರು ಮಾಡುತ್ತಿರುವ ಪ್ರಯತ್ನ ಗ್ರೇಟ್ ಎನಿಸುತ್ತದೆ.

2004, ಮಾರ್ಚ್ 6ರಂದು ದೇಶಾದ್ಯಂತ ಸಂಭ್ರಮದ ಹೋಳಿ ಹಬ್ಬ. ಕಾಂಗ್ರೆಸ್ ಅಧ್ಯಕ್ಷೆ ಸೋನಿಯಾ ಗಾಂಧಿ, ಅಂದಿನ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ಲಾಲೂ ಪ್ರಸಾದ್ ಯಾದವ್‌ಬಣ್ಣ ಹಚ್ಚಿಕೊಂಡು ಖುಷಿ ಹಂಚಿಕೊಂಡರೆ, ಬಿಹಾರದ ಸಂಸದರು ಮನೆಯಲ್ಲೇ 'ನಂಗಾನಾಚ್' ಏರ್ಪಡಿಸಿ ಸುಖ ಅನುಭವಿಸಿದರು. ಆದರೆ, ಅಂಗವಿಕಲ ಮಕ್ಕಳನ್ನು ರಾಷ್ಟ್ರಪತಿ ಭವನಕ್ಕೆ ಕರೆಸಿದ ಅಬ್ದುಲ್ ಕಲಾಂ, ಸ್ವತಃ ಸಿಹಿ ಹಂಚಿ ಖುಷಿಪಟ್ಟರು. ಒಬ್ಬ ರಾಷ್ಟ್ರಪತಿ ಕೈಯಿಂದ ಸಿಹಿ ತಿಂದ ಆ ಮಕ್ಕಳ ಮನದಲ್ಲಿ, ಹೃದಯದಲ್ಲಿ ಯಾವ ಭಾವನೆ ಮೂಡಿರಬಹುದು? ಒಮ್ಮೆ ಯೋಚಿಸಿ ನೋಡಿ.. ಇಂತಹ ಸೂಕ್ಷ್ಮಗ್ರಾಹಿತ್ವ, ಸಂವೇದನಾಶೀಲತೆ ಸಲ್ಡಾನ ಅವರಿಗಿದ್ದಿದ್ದರೆ ಅಬ್ದುಲ್ ಕಲಾಂ ಬಗ್ಗೆ ಖಂಡಿತಾ ಕೀಳು ಮಾತನಾಡುತ್ತಿರಲಿಲ್ಲ, ಮಕ್ಕಳೊಂದಿಗೆ ಬೆರೆಯುವ ಅವರ ಮೃದು ಹೃದಯವನ್ನು ಪರಿಹಾಸ್ಯದ ವಸ್ತುವಾಗಿಸಿಕೊಳ್ಳುತ್ತಿರಲಿಲ್ಲ.

ಹಾಗಂತ..ಅಬ್ದುಲ್ ಕಲಾಂ ಅವರನ್ನ ದೊಡ್ಡ ವಿಜ್ಞಾನಿ ಅನ್ನೋದು, ಕ್ಷಿಪಣಿ ಜನಕ ಎಂದು ಬಿರುದು ಕೊಡುವುದು, ಅಣುಶಕ್ತಿಯ ಪಿತಾಮಹ ಎಂದು ಹೊಗಳುವುದೂ ಸರಿ ಕಾಣಸುವುದಿಲ್ಲ! ಏಕೆಂದರೆ ಕಲಾಂ ಇದುವರೆಗೂ ಯಾವುದೇ ಸಂಶೋಧನೆ ಮಾಡಿಲ್ಲ, ಅವರ ಬಳಿ ವಿದೇಶಿ ಡಿಗ್ರಿಗಳಿಲ್ಲ, ತಮ್ಮ ಹೆಸರಿನಲ್ಲಿ ಯಾವುದೇ ಪ್ರೌಢ ಪ್ರಬಂಧಗಳನ್ನೂ ಹೊಂದಿಲ್ಲ, ಖ್ಯಾತ ಅಂತಾರಾಷ್ಟ್ರೀಯ ವಿಜ್ಞಾನ ಪತ್ರಿಕೆಗಳಲ್ಲಿ ಅವರ ಸಂಶೋಧನಾ ಲೇಖನಗಳು ಪ್ರಕಟವಾಗಿಲ್ಲ. ಅವುಗಳ ಬಗ್ಗೆ ವಿಶ್ವಮಟ್ಟದಲ್ಲಿ ಚರ್ಚೆ ನಡೆದಿಲ್ಲ. ಅವರೊಬ್ಬ ಯಶಸ್ವಿ ಪ್ರಾಜೆಕ್ಟ್ ಮ್ಯಾನೇಜರ್ ಅಷ್ಟೇ. ಇರುವ ಒಂದು ಪದವಿ(ಡಾ.) ಕೂಡ ಅಣ್ಣಾ ವಿಶ್ವವಿದ್ಯಾಲಯ ನೀಡಿರುವ ಗೌರವ ಡಾಕ್ಟರೇಟ್.

ಅಬ್ದುಲ್ ಕಲಾಂ ಹುಟ್ಟಿದ್ದು ಅಕ್ಟೋಬರ್ 15, 1931ರಲ್ಲಿ, ತಮಿಳುನಾಡಿನ ಧನುಷ್ಕೋಟಿಯಲ್ಲಿ. ಶಾಲಾಭ್ಯಾಸವನ್ನು ಸ್ಥಳೀಯ ರಾಮೇಶ್ವರದಲ್ಲೇ ಪೂರೈಸಿದ ಕಲಾಂ, 1958ರಲ್ಲಿ ಮದ್ರಾಸ್ ತಾಂತ್ರಿಕ ಸಂಸ್ಥೆಯಿಂದ ಏರೋನಾಟಿಕ್ಸ್ ಎಂಜನಿಯರಿಂಗ್‌ನಲ್ಲಿ ಪದವಿ ಪಡೆದರು. ಪ್ರಾರಂಭದಲ್ಲಿ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಸಂಸ್ಥೆಯನ್ನು (ಡಿ.ಆರ್.ಡಿ.ಒ)ಸೇರಿಕೊಂಡರೂ, 1962ರಲ್ಲಿ ಭಾರತೀಯ ಬಾಹ್ಯಾಕಾಶ ಸಂಶೋಧನಾ ಸಂಸ್ಥೆಯತ್ತ ಆಕರ್ಷಿತರಾದರು. ಅಲ್ಲಿ ಉಪಗ್ರಹಗಳ ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದ್ದ ವಿಕ್ರಮ್ ಸಾರಾಭಾಯ್, ಸತೀಶ್ ಧವನ್, ಪ್ರೊ. ಯು.ಆರ್. ರಾವ್ ಅವರಂತಹ ಅತಿರಥ ಮಹಾರಥರ ಸಾನ್ನಿಧ್ಯ ದೊರೆಯಿತು.

ಇತ್ತ ಹೋಮಿ ಜೆ. ಬಾಬಾ ಅವರಿಂದ ಪ್ರಭಾವಿತರಾಗಿದ್ದ ಡಾ. ರಾಜಾರಾಮಣ್ಣನವರು ಅಣುಶಕ್ತಿ ಉತ್ಪಾದನೆಯಲ್ಲಿ ತೊಡಗಿದ್ದರು. ಅವರ ಅನುಯಾಯಿಯೇ ಡಾ.ವಿ.ಎಸ್. ಅರುಣಾಚಲಂ. 1974ರಲ್ಲಿ ರಾಜಾರಾಮಣ್ಣನವರ ಮೇಲುಸ್ತುವಾರಿಯಲ್ಲಿ ಭಾರತ ಮೊದಲ ಬಾರಿಗೆ ಅಣುಪರೀಕ್ಷೆ ನಡೆಸಿದಾಗ ಅರುಣಾಚಲ ಅವರಿನ್ನೂ ಯುವ ವಿಜ್ಞಾನಿ. ಆದರೆ ಮೈಸೂರು

ವಿಶ್ವವಿದ್ಯಾಲಯದಲ್ಲಿ ಬಿ.ಎಸ್ಸಿ, ಸಂಗೋರ್ ವಿಶ್ವವಿದ್ಯಾಲಯದಲ್ಲಿ ಎಂ.ಎಸ್ಸಿ ಪೂರೈಸಿದ್ದ ಅರುಣಾಚಲಂ, 1965ರಲ್ಲಿ ಇಂಗ್ಲೆಂಡ್‌ನ ವೇಲ್ಸ್ ವಿಶ್ವವಿದ್ಯಾಲಯದಲ್ಲಿ ಪಿಎಚ್.ಡಿ. ಪಡೆದಿದ್ದರು. ಜತೆಗೆ 8 ಸಂಶೋಧನಾ ಪ್ರಬಂಧಗಳನ್ನೂ ಮಂಡಿಸಿದ್ದರು. ಇಂತಹ ಸಾಬೀತುಗೊಂಡ ಪ್ರತಿಭೆಯಿಂದಾಗಿಯೇ 1982ರಲ್ಲಿ ರಾಜಾರಾಮಣ್ಣನವರು ನಿವೃತ್ತಿಗೊಂಡ ನಂತರ ರಕ್ಷಣಾ ಸಚಿವರ ವೈಜ್ಞಾನಿಕ ಸಲಹೆಗಾರ, ಡಿ.ಆರ್.ಡಿ.ಓ.ದ ಮಹಾನಿರ್ದೇಶಕ ಹಾಗೂ ರಕ್ಷಣಾ ಇಲಾಖೆಯ ಅಭಿವೃದ್ಧಿ ಮತ್ತು ಸಂಶೋಧನಾ ವಿಭಾಗದ ಸೆಕ್ರೆಟರಿಯಾಗಿ ಅರುಣಾಚಲಂ ನಿಯುಕ್ತರಾದರು. ಅತ್ಯಂತ ಕಿರಿಯ ವಯಸ್ಸಿನಲ್ಲಿ ಹಿರಿಯ ಜವಾಬ್ದಾರಿಗಳು ದೊರೆತವು. ತಮ್ಮ ದೂರದೃಷ್ಟಿಯ ಬಗ್ಗೆ, ಆಗಿನ ರಕ್ಷಣಾ ಸಚಿವ ಆರ್. ವೆಂಕಟರಾಮನ್ ಅವರಿಗೆ ಅರಿವು ಮೂಡಿಸಲು ಪ್ರಯತ್ನಿಸಿದ ಅರುಣಾಚಲಂ, ನಿರ್ದೇಶಿತ ಕ್ಷಿಪಣಿ ಅಭಿವೃದ್ಧಿ ಕಾರ್ಯಕ್ರಮಕ್ಕೆ 388 ಕೋಟಿ. ರೂ. ಧನಸಹಾಯ ನೀಡುವಂತೆ ಮಾಡುವಲ್ಲಿ ಯಶಸ್ವಿಯಾದರು. ಹಣ ಬಿಡುಗಡೆಯಾಯಿತು. ಆಗ ಅರುಣಾಚಲಂ ಕಣ್ಣಿಗೆ ಕಂಡವರೇ ಅಬ್ದುಲ್ ಕಲಾಂ. ಕಲಾಂ ಅವರನ್ನು ಕರೆತಂದು, ಹೈದರಾಬಾದ್‌ನ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಪ್ರಯೋಗಾಲಯದ ನಿರ್ದೇಶಕರಾಗುವಂತೆ ಮಾಡಿದರು. ಹೀಗೆ ಅರುಣಾಚಲಂ ದೂರದೃಷ್ಟಿಯ ಫಲವಾಗಿ ಅರ್ಜುನ್ ಯುದ್ಧ ಟ್ಯಾಂಕ್, ತ್ರಿಶೂಲ್, ನಾಗ್, ಪೃಥ್ವಿ, ಅಗ್ನಿ ಮುಂತಾದ ಕ್ಷಿಪಣಿಗಳ ಅಭಿವೃದ್ಧಿ ಕಾರ್ಯ ಪ್ರಾರಂಭವಾಯಿತು.

ಈ ಮಧ್ಯೆ, 1991ರಲ್ಲಿ ಹೈದರಾಬಾದ್‌ನ ರಕ್ಷಣಾ ಸಂಶೋಧನೆ ಮತ್ತು ಅಭಿವೃದ್ಧಿ ಪ್ರಯೋಗಾಲಯದ ನಿರ್ದೇಶಕ ಸ್ಥಾನದಿಂದ ನಿವೃತ್ತರಾದ ಕಲಾಂ, ನಿರ್ಗತಿಕ ಮಕ್ಕಳಿಗೊಂದು ಶಾಲೆ ಪ್ರಾರಂಭ ಮಾಡುವ ಆಶಯ ಹೊಂದಿದ್ದರು. ಇತ್ತ ರಕ್ಷಣಾ ಕಾರ್ಯದರ್ಶಿ(ಡಿಫೆನ್ಸ್ ಸೆಕ್ರೆಟರಿ) ಸ್ಥಾನ ನನೆಗುದಿಗೆ ಬಿದ್ದಿತ್ತು. ಸಾಮಾನ್ಯವಾಗಿ ಬಾಹ್ಯಾಕಾಶ ಅಥವಾ ಅಣುಸಂಶೋಧನೆ ಬಗ್ಗೆ ಎ.ಬಿ.ಸಿ.ಡಿ ಗೊತ್ತಿಲ್ಲದ ಐ.ಎ.ಎಸ್. ಅಧಿಕಾರಿಗಳೇ ಆ ಸ್ಥಾನವನ್ನು ಅಲಂಕರಿಸುತ್ತಿದ್ದರು. ಎಂತಹ ಪ್ರತಿಭಾನ್ವಿತ, ಅನುಭವಿ ವಿಜ್ಞಾನಿಯಾಗಿದ್ದರೂ ಯಕಶ್ಚಿತ್ ಐ.ಎ.ಎಸ್. ಅಧಿಕಾರಿಗಳ ಅಡಿಯಾಳಾಗಿ ಕೆಲಸ ನಿರ್ವಹಿಸಬೇಕಿತ್ತು. ಇದನ್ನು ಅರುಣಾಚಲಂ ಸಹಿಸದಾದರು. 10 ವರ್ಷಗಳ ಕಾಲ ರಕ್ಷಣಾ ಸಚಿವರ ವೈಜ್ಞಾನಿಕ ಸಲಹೆಗಾರ, ಡಿ.ಆರ್.ಡಿ.ಓ.ದ ಮಹಾನಿರ್ದೇಶಕ ಹಾಗೂ ರಕ್ಷಣಾ ಇಲಾಖೆಯ ಅಭಿವೃದ್ಧಿ ಮತ್ತು ಸಂಶೋಧನಾ ವಿಭಾಗದ ಸೆಕ್ರೆಟರಿಯಾಗಿ ಕಾರ್ಯನಿರ್ವಹಿಸಿದ್ದ ಅವರು ಐ.ಎ.ಎಸ್. ಅಧಿಕಾರಿಯೊಬ್ಬನ ಅಡಿಯಾಳಾಗಲು ಒಪ್ಪಲಿಲ್ಲ. ವಿರೋಧ ವ್ಯಕ್ತಪಡಿಸಿದರು. ಮಂತ್ರಿಗಳ ಬಾಲ ಹಿಡಿಯುವುದರಲ್ಲಿ, ಅಡ್ಡಮಾರ್ಗದಲ್ಲಿ ಅಗಾಧ ಅನುಭವ ಹೊಂದಿರುವ ನಮ್ಮ ಅಧಿಕಾರಶಾಹಿ ವರ್ಗವೇ ಅರುಣಾಚಲಂ ವಿರುದ್ಧ ತಿರುಗಿ ಬಿತ್ತು. ಸಲ್ಲದ ಆರೋಪ ಹೊರಿಸಲಾಯಿತು. ಅನಿವಾರ್ಯವಾಗಿ ರಾಜೀನಾಮೆ ನೀಡುವಂತೆ ಮಾಡಲಾಯಿತು. ಬೇಸತ್ತ ಅರುಣಾಚಲಂ 1992ರಲ್ಲಿ ದೇಶವನ್ನೇ ತೊರೆದು, ಪ್ರೊಫೆಸರ್ ಆಗಿ ಅಮೆರಿಕದ ಪಿಟ್ಸ್‌ಬರ್ಗ್‌ನ 'ಕಾರ್ನೆಗಿ ಮೆಲ್ಲಾನ್' ವಿಶ್ವವಿದ್ಯಾಲಯ ಸೇರಿದರು.

ಹೀಗೆ ಅರುಣಾಚಲಂ ನಿರ್ಗಮನದ ನಂತರ ಡಿ.ಆರ್.ಡಿ.ಒ.ದ ಮಹಾನಿರ್ದೇಶಕನ ಸ್ಥಾನ ಖಾಲಿಯಾಯಿತು. ಆ ಸ್ಥಾನಕ್ಕೆ ಒಬ್ಬ ವಿವಾದಾತೀತ ವ್ಯಕ್ತಿಯನ್ನು ಸರಕಾರ ಹುಡುಕತೊಡಗಿತು. ಕಲಾಂಗೆ ಅದೃಷ್ಟವಿತ್ತು. 1991, ಅಕ್ಟೋಬರ್‌ನಲ್ಲಿ ನಿವೃತ್ತರಾಗಿದ್ದ ಕಲಾಂ, ನವೆಂಬರ್‌ನಲ್ಲಿ ಡಿ.ಆರ್.ಡಿ.ಓ.ದ ಮುಖ್ಯಸ್ಥರಾಗಿ ನೇಮಕಗೊಂಡರು. ಆ ವೇಳೆಗಾಗಲೇ ಅರುಣಾಚಲಂ ಕನಸಿನ ಅರ್ಜುನ್, ನಾಗ್, ಪೃಥ್ವಿ ಕ್ಷಿಪಣಿಗಳು ಪರೀಕ್ಷಾ ಹಂತಕ್ಕೆ ಬಂದಿದ್ದವು. ಕಲಾಂ ಮುಖ್ಯಸ್ಥರಾದ ಕೂಡಲೇ ಪರೀಕ್ಷೆಗಳು ಪ್ರಾರಂಭವಾದವು. ಜತೆಗೆ ಅಮೋಘ ಯಶಸ್ಸೂ ದೊರೆಯಿತು. ಕೀರ್ತಿಯೆಲ್ಲಾ ಕಲಾಂ ಅವರದ್ದಾಯಿತು. ಅರುಣಾಚಲಂ ಶ್ರಮ ಬೆಳಕಿಗೆ ಬರಲೇ ಇಲ್ಲ!

1998ರಲ್ಲಿ ಎರಡನೇ ಬಾರಿಗೆ ಅಧಿಕಾರಕ್ಕೇರಿದ ಅಟಲ್ ಸರಕಾರ, ಅಬ್ದುಲ್ ಕಲಾಂ ಅವರನ್ನು 'ಪ್ರಧಾನಿಯವರ ವೈಜ್ಞಾನಿಕ ಸಲಹೆಗಾರ'ರಾಗಿ ನೇಮಕ ಮಾಡಿ, ಅಣುಪರೀಕ್ಷೆಯ ಉಸ್ತುವಾರಿ ನೀಡಿತು. ಮೇ.11 ಮತ್ತು 13ರಂದು ಯಶಸ್ವಿ ಅಣುಪರೀಕ್ಷೆಗಳೂ ನಡೆದವು. ಆದರೆ ಮಾಧ್ಯಮಗಳು ಭಾರತೀಯ ಅಣುಶಕ್ತಿ ಆಯೋಗ ಅಧ್ಯಕ್ಷರಾಗಿದ್ದ ಆರ್. ಚಿದಂಬರಂ ಮತ್ತು ಭಾಭಾ ಅಣು ಸಂಶೋಧನಾ ಸಂಸ್ಥೆಯ ಮುಖ್ಯಸ್ಥ ಅನಿಲ್ ಕಾಕೋಡ್ಕರ್ ಅವರಿಗೆ ಸಲ್ಲಬೇಕಿದ್ದ ಗೌರವವನ್ನು ಕಲಾಂಗೆ ಅರ್ಪಿಸಿದವು! ಕಲಾಂ ಹೀರೊ ಆದರು.

ಇದೇನೆ ಇದ್ದರೂ, ಸಲ್ಡಾನ ಅವರಂತೆ ಕಲಾಂ ಬಗ್ಗೆ ಹುಚ್ಚುಚ್ಚಾಗಿ ಮಾತಾಡುವುದೂ ಬೇಡ. ನಮ್ಮ ಕುರುಡು ಮಾಧ್ಯಮಗಳಂತೆ ದೇಶದ ಎಲ್ಲ ಪ್ರಗತಿಗಳನ್ನು, ಸಾಧನೆಗಳನ್ನು, ಯಶಸ್ಸುಗಳನ್ನು ಅವರೊಬ್ಬರ ತಲೆಗೇ ಕಟ್ಟುವುದೂ ಬೇಡ. ಕಲಾಂ ಏನು, ಏನಲ್ಲ ಎಂಬ ಬಗ್ಗೆ ತಿಳಿದುಕೊಂಡರಷ್ಟೇ ಸಾಕು.

ಏನಂತೀರಿ?

"ನಾನು ವೈಯಕ್ತಿಕ ಕಾರಣಕ್ಕಾಗಿ ರಾಜೀನಾಮೆ ನೀಡಿದ್ದೇ ಹೊರತು, ಯಾವುದೇ ಭಿನ್ನಾಭಿಪ್ರಾಯದ ಸಲುವಾಗಿ ಅಲ್ಲ. ಭಾರತದ ವೈಜ್ಞಾನಿಕ ಯಶಸ್ಸಿಗೆ ನಾನೊಬ್ಬನೇ ಕಾರಣನಲ್ಲ".

ಡಾ.ಎ.ಎಸ್. ಅರುಣಾಚಲಂ

ಕನ್ನಡ ಸಾಹಿತ್ಯ ಪರಿಷತ್ತು
ಕನ್ನಡ ಸಾಹಿತ್ಯ ಅಕಾಡೆಮಿ
ಕನ್ನಡ ಪುಸ್ತಕ ಪ್ರಕಾಶನ
ಕನ್ನಡ ಅಭಿವೃದ್ಧಿ ಪ್ರಾಧಿಕಾರ
ಕನ್ನಡ ಕಾವಲು ಪಡೆ
ಕನ್ನಡ ಅಭಿವೃದ್ಧಿಗಾಗಿಯೇ ಇರುವ ಹಂಪಿ ವಿಶ್ವವಿದ್ಯಾಲಯ
ಕನ್ನಡ ಮತ್ತು ಸಂಸ್ಕೃತಿ ಇಲಾಖೆ.

..... ಪಟ್ಟಿ ಮಾಡುತ್ತಲೇ ಹೋಗಬಹುದು. ಇವುಗಳು ಪ್ರತಿ ವರ್ಷವೂ ನೀಡುವ ಬಿಲ್‌ಗಳ ಪಟ್ಟಿಗಂತೂ ಕೊನೆ ಮೊದಲೆಂಬುದಿಲ್ಲ. ಜತೆಗೆ ಇಷ್ಟೊಂದು ಸಂಘ, ಸಂಸ್ಥೆ, ಇಲಾಖೆ, ಪ್ರಾಧಿಕಾರಗಳನ್ನು ಬೇರೆಲ್ಲೂ, ಮತ್ತಾವ ಭಾಷೆಯಲ್ಲೂ ಕಾಣಲು ಸಾಧ್ಯವೇ ಇಲ್ಲ. ಆದರೆ ಅವು ಮಾಡುತ್ತಿರುವ, ಮಾಡಿದ ಘನ ಕಾರ್ಯಗಳ ಬಗ್ಗೆ ಹೇಳಲು ಬಹುಶಃ ಏನೂ ಇಲ್ಲ. ಏಕೆಂದರೆ ಈ ಪರಿಷತ್ತು, ಪ್ರಾಧಿಕಾರ, ಅಕಾಡೆಮಿಗಳು ಸುದ್ದಿಯಾಗುವುದು ಒಂದೋ ಅಧ್ಯಕ್ಷಗಿರಿಗೆ ನಡೆಯುವ ಚುನಾವಣೆ ವೇಳೆ, ಇಲ್ಲವೆ ದುಡ್ಡು ನುಂಗಿ ಹಗರಣ ಬಯಲಾದಾಗ ಮಾತ್ರ. ಇವುಗಳ ಮಧ್ಯೆ ಕನ್ನಡ ಗಣಕ ಪರಿಷತ್ತು, 'ನುಡಿ' ಎಂಬ ಕನ್ನಡ ಸಾಫ್ಟ್‌ವೇರ್ ಅಭಿವೃದ್ಧಿಯಂತಹ ಕಾರ್ಯಕ್ಕೆ ಕೈಹಾಕಿ ಎಲ್ಲೋ ಒಂದು ಕಡೆ ಭಾಷಾ ಬೆಳವಣಿಗೆಗೆ ಪ್ರಯತ್ನಪಡುತ್ತಿದ್ದರೆ ಛಂದಸ್ಸು, ವ್ಯಾಕರಣವೆನ್ನುತ್ತಾ ಸಲ್ಲದ ವಿವಾದ ಸೃಷ್ಟಿಸುವ 'ಡಾಸ್' ಪ್ರೇಮಿ ಸಾ(ಸ್ವ)ಹಿತಿಗಳು ಕನ್ನಡದಲ್ಲೇ ಇದ್ದಾರೆ. ಅಷ್ಟರ ಮಟ್ಟಿಗೆ ಕನ್ನಡದ ಅಭಿವೃದ್ಧಿ ಕಾರ್ಯ ನಡೆಯುತ್ತಿದೆ!

ಹಾಗಂತ ದೂರುವ ಭರದಲ್ಲಿ ನಮ್ಮ ಅಭಿಮಾನಶೂನ್ಯತೆಯನ್ನೂ ಮರೆಯುವುದು ಬೇಡ.....

ಇದು ಗೊಡ್ಡು ಮಾತಲ್ಲ, ಉದ್ದೇಶಪೂರ್ವಕವಾಗಿ ತೆಗಳುವ ಪ್ರಯತ್ನವೂ ಅಲ್ಲ, ಭಾಷಾಂಧತೆಯಂತೂ ಖಂಡಿತಾ ಅಲ್ಲ. ಆದರೆ ನಾಚಿಕೆಪಡಬೇಕಾದ ವಿಷಯವೆಂದರೆ, ಕನ್ನಡವನ್ನೇ ಗೇಲಿ ಮಾಡುವ, ಉಡಾಫೆಯ ಮಾತನಾಡುವ, ನಾಲ್ಕು ಜನರ ಮಧ್ಯೆ ಹಾಸ್ಯದ ವಸ್ತುವಾಗಿಸಿಕೊಳ್ಳುವ ಕೆಟ್ಟ ಚಟ ನಮಗಂಟಿಕೊಂಡು ಎಷ್ಟೋ ಕಾಲವಾಯಿತು. ಆದರೂ ಇಂತಹ ಅಭಿಮಾನಶೂನ್ಯತೆಯನ್ನು ಮುಚ್ಚಿಕೊಳ್ಳುವ ಸಲುವಾಗಿ, ನಮ್ಮ ರಾಜ್ಯದಲ್ಲಿ ತಮಿಳರ ಪ್ರಮಾಣ ಇಷ್ಟಿದೆ, ತೆಲುಗು ಮಾತನಾಡುವವರ ಹಾವಳಿ ಹೆಚ್ಚಾಗುತ್ತಿದೆ, ಹಾಗಾಗಿ ಕನ್ನಡ ಮರೆಯಾಗುತ್ತಿದೆ ಎಂದು ಬೊಬ್ಬೆ ಹಾಕುತ್ತೇವೆ, ಸಲ್ಲದ ಸಬೂಬು ನೀಡುತ್ತೇವೆ. ಆದರೆ ಮನೆಯಲ್ಲಿ ನಾವೆಷ್ಟು ಜನರು ಕನ್ನಡ ಮಾತನಾಡುತ್ತೇವೆ, ನಮ್ಮ ಮಕ್ಕಳಿಗೆ ಕನ್ನಡ ಕಲಿಸುತ್ತೇವೆ ಎಂಬುದನ್ನೇ ಮರೆಯುತ್ತೇವೆ. ಇನ್ನು ನಮ್ಮ ಯುವ ಜನಾಂಗವಂತೂ Knowing the language itself is intelligence! ಅಂದರೆ 'ಭಾಷೆ ಗೊತ್ತಿರುವುದೇ ಬುದ್ಧಿವಂತಿಕೆಯ ಲಕ್ಷಣ' ಎಂಬ ಭ್ರಮೆಯಲ್ಲಿದೆ. ಅದಕ್ಕೆ ತಕ್ಕಂತೆ ಪೋಷಕರೂ ಕೂಡ, ತಮ್ಮ ಮಗು ಬಳಪ ಹಿಡಿಯದಿದ್ದರೂ ಕಂಪ್ಯೂಟರ್ 'ಮೌಸ್'

ಅಲ್ಲಾಡಿಸುತ್ತಿದೆ ಎಂದರೆ ಮತ್ತೊಬ್ಬ ಸಬೀರ್ ಭಾಟಿಯಾ ಅಥವಾ ನಾರಾಯಣಮೂರ್ತಿ ಯಾಗುವ ಲಕ್ಷಣ ಎಂದೇ ಭಾವಿಸುತ್ತಾರೆ . ಒಂದು ವೇಳೆ ಎಲ್‌ಕೆಜಿ, ಯುಕೆಜಿ ಮುಗಿಯುವ ವೇಳೆಗೆ ತೊದಲು ಇಂಗ್ಲಿಷ್ ಕಲಿಯಿತೆಂದರೆ ಭವಿಷ್ಯ ಗಟ್ಟಿಯಾಯಿತು (Secured Future) ಎಂಬ ನಿರ್ಧಾರಕ್ಕೆ ಬಂದೇ ಬಿಡುತ್ತಾರೆ. ಇಂತಹ ಮಕ್ಕಳಲ್ಲಿ ಭಾಷಾಭಿಮಾನವನ್ನು ಕಾಣಲು ಹೇಗೆತಾನೇ ಸಾಧ್ಯ?

ಇಂದು ಸುಮಾರು 15,589 ಪ್ರಾಣಿಗಳು ಅಳಿದಿವೆ ಇಲ್ಲವೇ, ಅಳಿವಿನಂಚಿಗೆ (Endangered Species)ತಲುಪಿವೆ. ಅವುಗಳ ಪುನರುತ್ಥಾನಕ್ಕೆ ಜಗತ್ತಿನಾದ್ಯಂತ ಪ್ರಯತ್ನಪಡಲಾಗುತ್ತಿದೆ. ಕೆಲವರು ದುರ್ಬೀನು ಹಿಡಿದು ಕಾಡುಗಳಲ್ಲಿ ಅಲೆಯುತ್ತಿದ್ದಾರೆ. ನಶಿಸಿ ಹೋಗುತ್ತಿರುವ ಪ್ರಾಣಿ-ಪಕ್ಷಿಗಳ ಹುಡುಕಾಟ ನಡೆಸುತ್ತಿದ್ದಾರೆ. ಭಾಷೆ ಕೂಡ ಇದಕ್ಕೆ ಹೊರತಲ್ಲ. ಜೀವಸಂಕುಲದಂತೆ ಭಾಷೆಯೂ ಅಳಿದು, ನಾಶವಾಗಿ ಹೋಗಬಹುದು. ಸಂಸ್ಕೃತಕ್ಕಿಂತ ದೊಡ್ಡ ಉದಾಹರಣೆ ಬೇಕಿಲ್ಲ. ಇಸ್ರೇಲಿಯರು ಮರುಜೀವ ಕೊಡುವವರೆಗೂ ಹೀಬ್ರೂ ಭಾಷೆ ಕೂಡ ಅಳಿದು ಎಷ್ಟೋ ಶತಮಾನಗಳಾಗಿತ್ತು. ಲ್ಯಾಟಿನ್ ಭಾಷೆ ಇಂದು ಇಂಗ್ಲಿಷ್, ಫ್ರೆಂಚ್‌ನ ಕೆಲವು ಶಬ್ದಗಳಲ್ಲಿ ಉಳಿದುಕೊಂಡಿದೆ. ಹಾಗಾಗಿ ಏಷ್ಯಾದಲ್ಲೇ ಅತ್ಯಂತ ವೇಗವಾಗಿ ಅಳಿವಿನಂಚಿಗೆ ಸಾಗುತ್ತಿರುವ ಕನ್ನಡದ ಉಳಿವಿನ ಬಗ್ಗೆ ಆತಂಕಪಡಲೇಬೇಕಾಗಿದೆ. ಅಂದ ಮಾತ್ರಕ್ಕೆ ಕನ್ನಡ ಕಡ್ಡಾಯ ಮಾಡಿ, ಇಂಗ್ಲೀಷ್ ಶಾಲೆಗಳನ್ನು ಬಂದ್ ಮಾಡಿ ಅನ್ನುವ ಹುಚ್ಚಾಟಿಕೆಯೂ ಬೇಡ. ಏಕೆಂದರೆ ಯಾರದೋ ಆಕ್ರಮಣದಿಂದ, ಇನ್ನಾವುದೋ ಭಾಷೆಯ ಹಾವಳಿಯಿಂದ ಕನ್ನಡ ನಶಿಸುತ್ತಿಲ್ಲ. ಆದರೆ ಕನ್ನಡಿಗರಲ್ಲಿರುವ ಅಭಿಮಾನ ಶೂನ್ಯತೆಯೇ ಕನ್ನಡಕ್ಕೆ ಕಂಟಕವಾಗಿದೆ. ಹಾಗಾಗಿ ನಮ್ಮನ್ನು ನಾವೇ ದೂಷಿಸಿಕೊಳ್ಳಬೇಕಾಗಿ ಬಂದಿದೆ.

ಆದರೆ.......

ಕನ್ನಡ ಭಾಷೋದ್ಧಾರದ ಹೆಸರಿನಲ್ಲಿ ಗುರುವಾರ ನಡೆದ ಚಿತ್ರತಾರೆಗಳು ಮತ್ತು ಲೆಕ್ಕಕ್ಕೆ ಮಾತ್ರ ಸೀಮಿತವಾಗಿರುವ ಸಾಹಿತಿಗಳ ಜಾತ್ರೆಯನ್ನು, ಅವರ ಗೂಂಡಾಗಿರಿಯನ್ನು, ಚಪ್ಪಲಿ ತೂರಾಟವನ್ನು, ವಾಹನ ಜಖಂ ಅನ್ನು ಒಪ್ಪಲು ಸಾಧ್ಯವೇ?

ಕಳೆದ ವರ್ಷ ಆಂಧ್ರಪ್ರದೇಶದಲ್ಲಿ 1900 ರೈತರು ಆತ್ಮಹತ್ಯೆ ಮಾಡಿಕೊಂಡರೆ ಕರ್ನಾಟಕದಲ್ಲಿ 300ಕ್ಕೂ ಅಧಿಕ ರೈತರು ನೇಣಿಗೆ ಶರಣಾದರು. 2004, ಮೇನಿಂದ ಅಕ್ಟೋಬರ್ 25ರವರೆಗೂ ಸುಮಾರು 1.32 ಲಕ್ಷ ಪಿ.ಯು.ಸಿ ವಿದ್ಯಾರ್ಥಿಗಳ ಭವಿಷ್ಯ ಡೋಲಾಯಮಾನ ಸ್ಥಿತಿಯಲ್ಲಿತ್ತು. ಸಿಇಟಿ ಬರೆದು ಸೀಟು ಹಂಚಿಕೆಗಾಗಿ ಹಾತೊರೆದು ಇಬ್ಬರು ವಿದ್ಯಾರ್ಥಿನಿಯರು ಪ್ರಾಣ ಕಳೆದುಕೊಂಡರು. ಉಳಿದವರ ಅಮೂಲ್ಯ 6 ತಿಂಗಳುಗಳು ವ್ಯರ್ಥವಾದವು.

ಇತ್ತ ಪರಗೋಡು ಕಾಲುವೆ ನಿರ್ಮಾಣ ಕಾರ್ಯ ಕೈಗೆತ್ತಿಕೊಂಡ ಆಂಧ್ರದ ಮಾಜಿ

ಮುಖ್ಯಮಂತ್ರಿ ಚಂದ್ರಬಾಬು ನಾಯ್ಡು, ನಮ್ಮ ಪಾವಗಡಕ್ಕೆ ನೀರೇ ಬರದಂತೆ ತಡೆಯಲು ಪ್ರಯತ್ನಿಸಿದರು. ಈ ಮಧ್ಯೆ ಕೇಂದ್ರ ಪೆಟ್ರೋಲಿಯಂ ಖಾತೆ ಸಚಿವ ಮಣಿಶಂಕರ್ ಅಯ್ಯರ್, ಮಂಗಳೂರಿನಲ್ಲಿ ಸ್ಥಾಪನೆಯಾಗಬೇಕಿದ್ದ 25 ಸಾವಿರ ಕೋಟಿ ಮೊತ್ತದ ಪೆಟ್ರೊ ಕೆಮಿಕಲ್ ಘಟಕವನ್ನು ಸದ್ದಿಲ್ಲದೆ ತಮಿಳುನಾಡಿನ ಕಡಲೂರಿಗೆ ವರ್ಗಾವಣೆ ಮಾಡಿದ್ದಾರೆ. ರಾಜ್ಯ ತೀವ್ರ ವಿದ್ಯುತ್ ಕೊರತೆ ಎದುರಿಸುತ್ತಿದ್ದರೆ, ಕಡಲೂರಿನಲ್ಲೇ ಅಣುವಿದ್ಯುತ್ ಸ್ಥಾವರವನ್ನೂ ಹೊಂದಿರುವ ತಮಿಳುನಾಡಿನಲ್ಲಿ ಅಗತ್ಯಕ್ಕಿಂತ ಹೆಚ್ಚು ವಿದ್ಯುತ್ ಉತ್ಪಾದನೆಯಾಗುತ್ತಿದೆ. ಆದರೂ ಮಂಗಳೂರಿಗೆ ದೊರೆಯಬೇಕಿದ್ದ ವಿಶೇಷ ಆರ್ಥಿಕ ಯೋಜನೆಯನ್ನು ಮಣಿಶಂಕರ್ ಅಯ್ಯರ್ ಹೈಜಾಕ್ ಮಾಡಿದ್ದಾರೆ.

ಇಷ್ಟೆಲ್ಲಾ ಅನ್ಯಾಯಗಳು ಕಣ್ಣೆದುರಿಗೇ ನಡೆಯುತ್ತಿದ್ದಾಗ ಗೋಕಾಕ್ ಮಾದರಿ ಚಳವಳಿ ಮತ್ತು ಪ್ರಾಣತ್ಯಾಗದ ಬಗ್ಗೆ ಮಾತನಾಡುತ್ತಿರುವ ಡಾ. ರಾಜ್‌ಕುಮಾರ್ ಮತ್ತು ಕನ್ನಡ ಚಿತ್ರತಾರೆಗಳು ಎಲ್ಲಿದ್ದರು? ಈಗ ಕನ್ನಡಕ್ಕೆ ಎದುರಾಗಿರುವ ಅಪಾಯದ ಬಗ್ಗೆ, ಅಳಿವು-ಉಳಿವಿನ ಬಗ್ಗೆ ಮಾತನಾಡುತ್ತಿರುವುದು ಯಾರನ್ನು ಮೂರ್ಖರನ್ನಾಗಿಸುವ ಪ್ರಯತ್ನ? ಒಂದು ವೇಳೆ, ಕನ್ನಡ ಚಿತ್ರರಂಗ ರೂಪಿಸುತ್ತಿರುವ ಹಳಸಲು ಚಿತ್ರಗಳು ವಾರಗಟ್ಟಲೆ ಪ್ರದರ್ಶನಗೊಂಡು ಬಾಕ್ಸಾಫೀಸೆಂಬ ಗಲ್ಲಾಪೆಟ್ಟಿಗೆ ತುಂಬುತ್ತಿರುತ್ತಿದ್ದರೆ ಇವರು ಬೀದಿಗಿಳಿಯುತ್ತಿದ್ದರೇ? ಕನ್ನಡೋದ್ಧಾರದ ಹೆಸರಿನಲ್ಲಿ ತಮ್ಮ ವ್ಯಾವಹಾರಿಕ ನಷ್ಟವನ್ನು ತುಂಬಿಕೊಳ್ಳುವ ಪ್ರಯತ್ನ ಎಷ್ಟು ಸರಿ? ಕನ್ನಡದ ಬಗ್ಗೆ ಇಷ್ಟೆಲ್ಲಾ ಮಾತನಾ ಡುತ್ತಿರುವವರು, ಇನ್ನು ಮುಂದೆ ತಮಿಳು, ತೆಲುಗು, ಮಲೆಯಾಳಂ ಮತ್ತು ಹಿಂದಿ ಚಿತ್ರಗಳನ್ನು ರೀಮೇಕ್ ಮಾಡುವುದಿಲ್ಲ ಎಂದು ಹೇಳಲಿ ನೋಡೋಣ? ಅಥವಾ ಒಂದು ವೇಳೆ ಭಾಷೆ ಬಗ್ಗೆ ಅಷ್ಟೊಂದು ಕಾಳಜಿಯಿದ್ದರೆ ತಮಿಳು-ತೆಲುಗಿನವರಂತೆ ಪರಭಾಷಾ ಚಿತ್ರಗಳನ್ನು ಕನ್ನಡಕ್ಕೆ ಡಬ್ ಮಾಡಲಿ. ಕನ್ನಡ ಚಿತ್ರರಂಗದಲ್ಲಿ ತಮಿಳು-ತೆಲುಗು- ಮಲೆಯಾಳಂ ನಿರ್ದೇಶಕರಂತೆ ವರ್ಷಗಟ್ಟಲೆ ಕುಳಿತು ಸ್ಕ್ರಿಪ್ಟ್ ರೆಡಿ ಮಾಡುವ ಎದೆಗಾರಿಕೆ ಯಾರಿಗಿದೆ? ಪರಭಾಷಾ ಚಿತ್ರಗಳ ಸಂಗೀತ, ಕಥೆಯಿಂದ ಛಾಯಾಗ್ರಹಣದವರೆಗೂ ಎಲ್ಲವನ್ನೂ ಭಟ್ಟಿ ಇಳಿಸುವುದನ್ನು ನಿಲ್ಲಿಸುವ ತಾಕತ್ತಿದೆಯೇ? ಅದಿರಲಿ, ಅಚ್ಚಕನ್ನಡತಿಯರನ್ನು ನಿರ್ಲಕ್ಷಿಸಿ, ಪರಭಾಷಾ ನಟಿಯರನ್ನು ಕರೆಸಿ ಅರೆಬೆತ್ತಲೆ ಚಿತ್ರ ನಿರ್ಮಿಸುವವರಿಗೆ ಕನ್ನಡದ ಬಗ್ಗೆ ಮಾತನಾಡುವ ನೈತಿಕ ಹಕ್ಕಿದೆಯೇ?

ವಸ್ತುಸ್ಥಿತಿ ಹೀಗಿರುವಾಗ, ಪರಭಾಷಾ ಚಿತ್ರಗಳ ಬಿಡುಗಡೆಗೆ ಮೂರಲ್ಲ.... 30 ವಾರ ತಡೆ ಹಾಕಿದರೂ ಪ್ರಯೋಜನವಿಲ್ಲ. ಸಿಡಿ, ಡಿವಿಡಿ...ಗಳಿವೆ ಅಥವಾ ಜನ ಕಾದು ನೋಡುತ್ತಾರೆ. ಸಾಧು ಕೋಕಿಲಾ, ಥ್ರಿಲ್ಲರ್ ಮಂಜು, ಮಹೇಂದರ್, ಶಿವಮಣಿ ಅಥವಾ ಅಪ್ಪ-ಅಮ್ಮನ ಹೆಸರು ಹೇಳಿಕೊಂಡು ಸಾಲಾಗಿ ಇಪ್ಪತ್ತು ಫ್ಲಾಪ್ ಚಿತ್ರಗಳನ್ನು ನೀಡುವವರನ್ನು ತೆರೆ ಮೇಲೆ ಸಹಿಸಿಕೊಳ್ಳುವ ಅನಿವಾರ್ಯತೆಯಾಗಲಿ, ಕೆಲವು 'ಪೇಪರ್ ಟೈಗರ್' ನಿರ್ದೇಶಕರ ನಿಸ್ಸತ್ವ ಚಿತ್ರಗಳನ್ನು ನೋಡುವ ದೌರ್ಭಾಗ್ಯವಾಗಲಿ ಕನ್ನಡಿಗರಿಗಿಲ್ಲ. ಅಲ್ಲದೆ ಕನ್ನಡ ಚಿತ್ರರಂಗದ ವಿವಾದಾತೀತ ನಾಯಕರೆನಿಸಿಕೊಂಡಿರುವ ರಾಜ್‌ಕುಮಾರ್ ಅವರು, ತಮ್ಮ ಮಕ್ಕಳು ನಟಿಸುತ್ತಿರುವ ರೀಮೇಕ್

ಚಿತ್ರಗಳನ್ನು ಲೆಕ್ಕಹಾಕುವುದು ಒಳಿತು. 'ಅಪ್ಪು' ನಿರ್ದೇಶಕ ಪುರಿ ಜಗನ್ನಾಥ್ ಅವರಾಗಲಿ, 'ವೀರಕನ್ನಡಿಗ' ಚಿತ್ರದ ನಿರ್ಮಾಪಕ, ನಿರ್ದೇಶಕರಾಗಲಿ ಕನ್ನಡಿಗರಲ್ಲ. ಜತೆಗೆ, ತಮಗೆ ಖ್ಯಾತಿ ಹಾಗೂ ಕಾಸು ತಂದುಕೊಟ್ಟಿದ್ದು ಯಜಮಾನ ಎಂಬ ರೀಮೇಕ್ ಚಿತ್ರ ಎಂಬುದನ್ನು ವಿಷ್ಣುವರ್ಧನ್ ಮರೆಯಬಾರದು. ಇನ್ನು ನಮ್ಮ ನಟರು ಹ್ಯಾಟ್ರಿಕ್ ಹೀರೊ, ಹುಲಿ, ಸಿಂಹ, ಶೂರ, ವೀರ, ಧೀರ ಅಂತಾ ಆತ್ಮರತಿ ಮಾಡಿಕೊಂಡರೆ ಸಾಲದು, ಅಂತಹ ಚಿತ್ರಗಳನ್ನು ರೂಪಿಸಬೇಕು. ಆಗ ಜನ ಥಿಯೇಟರ್‌ಗೆ ಬರುತ್ತಾರೆ. ಇಷ್ಟೆಲ್ಲಾ ಮಾತನಾಡುತ್ತಿರುವ ಚಿತ್ರತಾರೆಗಳು, ತಮ್ಮ ಫ್ಲಾಪ್ ಚಿತ್ರಗಳಿಂದಾಗಿ ಮನೆ-ಮಠ ಕಳೆದುಕೊಂಡು ಭಿಕಾರಿಯಾಗಿರುವ ಡಿಸ್ಟ್ರಿಬ್ಯೂಟರ್‌ಗಳ ಬಗ್ಗೆ ಎಂದಾದರೂ ಯೋಚಿಸಿದ್ದಾರೆಯೇ? ಚಿತ್ರ ಫ್ಲಾಪ್ ಆದಾಗ ರಜನಿಕಾಂತ್, ಚಿರಂಜೀವಿ ಯವರಂತೆ ಹಣ ವಾಪಸ್ ಕೊಟ್ಟಂತಹ ಒಂದಾದರೂ ಉದಾಹರಣೆ ನಮ್ಮಲ್ಲಿದೆಯೇ? 'ಭಾರತ್ 2000' ಎಂಬ ಡಬ್ ಚಿತ್ರ ರೂಪಿಸಿ, ಚಿತ್ರರಂಗದಿಂದಲೇ ನಿಷೇಧ ಹಾಕಿಸಿಕೊಂಡಿದ್ದ ರಾಜೇಂದ್ರ ಸಿಂಗ್ ಬಾಬೂ ಕೂಡ ಕನ್ನಡಕ್ಕಾಗಿ 'ಓರಾಟ'ಕ್ಕಿಳಿದಿದ್ದಾರೆ!

ಇಂತಹ ಸ್ವಾರ್ಥಪರ ಓರಾಟಗಾರರಿಂದಾಗಿ, ಲೇಖನಿಯನ್ನು ತುಕ್ಕು ಹಿಡಿಯಲು ಬಿಟ್ಟಿರುವ ಸಾಹಿತಿಗಳಿಂದಾಗಿ ಕನ್ನಡಿಗರು 'ಭಾಷಾಂಧರು' ಎಂಬ ಹಣೆಪಟ್ಟಿ ಕಟ್ಟಿಕೊಳ್ಳಬೇಕಾಗಿ ಬಂದಿದೆ. ರಾಷ್ಟ್ರೀಯ ಮಾಧ್ಯಮಗಳಲ್ಲಿ ಕೆಟ್ಟದಾಗಿ ಚಿತ್ರಿತವಾಗಬೇಕಾಗಿದೆ. ಆದರೆ ಕನ್ನಡಿಗರ ಪ್ರತಿನಿಧಿಗಳಂತೆ ವರ್ತಿಸಲು ಇವರಿಗೆ ಅಧಿಕಾರ ಕೊಟ್ಟವರಾರು? ಒಂದು ವೇಳೆ ಒಳ್ಳೆಯ ಚಿತ್ರಗಳನ್ನು ನೀಡಿದರೆ, ಜನ ನೋಡುತ್ತಾರೆ ಎಂಬುದಕ್ಕೆ ಕಿರುತೆರೆಯೇ ಸಾಕ್ಷಿ. ಕನ್ನಡದ ನೈಜ ಸೊಗಡನ್ನು ಹೊಂದಿರುವ ಗರ್ವ, ಗೃಹಭಂಗ, ಮೂಡಲಮನೆ ಮತ್ತು ಟಿ.ಎನ್. ಸೀತಾರಾಮ್ ಅವರ ಜನಪ್ರಿಯ ಧಾರಾವಾಹಿಗಳು ನಮ್ಮ ಚಿತ್ರರಂಗದ ಕಣ್ತೆರೆಸಲಿ. ಖಂಡಿತಾ ಕನ್ನಡ ಚಿತ್ರರಂಗ ಉಳಿಯಬೇಕು. ಅಸ್ಸಾಮಿ, ಒರಿಯಾ ಅಥವಾ ಮರಾಠಿ ಚಿತ್ರರಂಗಗಳಂತೆ ಅಳಿಯುವುದು ನಮಗೂ ಇಷ್ಟವಿಲ್ಲ. ಹಾಗಂತ ಕಳಪೆ ಕನ್ನಡ ಚಿತ್ರಗಳನ್ನೇ ಪ್ರದರ್ಶನ ಮಾಡಿ, ಕೈಸುಟ್ಟುಕೊಳ್ಳಿ ಎಂದು ರಾಜ್ಯಾದ್ಯಂತ ಇರುವ 1167 ಚಿತ್ರಮಂದಿರಗಳ ಮಾಲೀಕರ ಮೇಲೆ ಒತ್ತಡ ಹೇರುವುದನ್ನು, ಬೆದರಿಸುವುದನ್ನು, ವಾಹನಗಳಿಗೆ ಕಲ್ಲೆಸೆಯುವುದನ್ನು ಸಹಿಸಲು ಸಾಧ್ಯವಿಲ್ಲ.

ಕನ್ನಡವನ್ನು, ಕನ್ನಡ ಚಿತ್ರರಂಗವನ್ನು ಉಳಿಸಿ, ಬೆಳೆಸಲು ಬೇಕಿರುವುದು 'ಓರಾಟ'ಗಾರರಲ್ಲ. ಮತ್ತೊಬ್ಬ ಶಂಕರ್‌ನಾಗ್, ಪುಟ್ಟಣ್ಣ ಕಣಗಾಲ್ ಮತ್ತು ದುಡಿದಿದ್ದೆಲ್ಲವನ್ನೂ ಕನ್ನಡ ಚಿತ್ರರಂಗದ ಅಭಿವೃದ್ಧಿಗೇ ಸುರಿದ ಬಾಲಣ್ಣ, ಅಬ್ಬಯ್ಯನಾಯ್ಡು ಅವರಂತಹವರು.

27-11-2004ರಂದು ಮೂಡಿಬಂದ ಪ್ರತಾಪ್ ಸಿಂಹ ಅವರ ''ಭಾಷಾಂಧರು ನಾವಲ್ಲ, ಭಾಷಾಭಿಮಾನವೂ ನಮಗಿಲ್ಲ'' ಎಂಬ ಲೇಖನದ ಶೀರ್ಷಿಕೆಯನ್ನು ಓದಿ ಅಚ್ಚರಿಯಾಯಿತು. ನಮ್ಮ ನಮ್ಮಲ್ಲೇ ಕನ್ನಡ ಭಾಷೆಗೆ ಕಳಂಕ ತರುತ್ತಿರುವ ಕೆಲವರು ಹೊರ ನೋಟಕ್ಕೆ ಕನ್ನಡ ಅಭಿಮಾನಿಗಳಾಗಿ ಪರಭಾಷೆಯ ಚಿತ್ರಗಳಿಗೆ ಘೇರಾವ್ ಹಾಕಲು ಹೊರಟಿದ್ದಾರೆ. ಆದರೆ ಪರಭಾಷೆ ಚಿತ್ರಗಳನ್ನು ರಿಮೇಕ್ ಮಾಡಿ ಕಾಸು ಮಾಡಲು ಇವರಿಗೆ ಯಾವುದೇ ಅಭ್ಯಂತರವಿಲ್ಲ!

ಬಿ.ಕೆ. ಜುಲ್ಫಿ, ಗೊರ್ಲೆಕೊಪ್ಪ
ಚುಟುಕು ಕವಿ, ಯಲಬುರ್ಗಾ

ಪ್ರೀತಿ ತುಂಬಿದ ಅಮ್ಮನ ಆ ಕಂಗಳನ್ನ, ಅಕ್ಕರೆಯಿಂದ ಮುತ್ತಿಕ್ಕುವ ತುಟಿಗಳನ್ನ, ನುಣ್ಣನೆ ಸ್ಪರ್ಶ ನೀಡುವ ಆಕೆಯ ಬೆಚ್ಚನೆಯ ಕೆನ್ನೆಯನ್ನ ಕಣ್ಣಾರೆ ನೋಡುವ ದೃಷ್ಟಿ.. ಅಪ್ಪನ ನೀತಿ ಪಾಠಗಳನ್ನ ಕೇಳುವ ಕಿವಿಗಳು.. ನೋವು, ನಲಿವನ್ನು ಹಂಚಿಕೊಳ್ಳುವ ಮಾತೇ ಇಲ್ಲದಂತಾದರೆ.. ಬದುಕು ಖಾಲಿ ಖಾಲಿ. ಶೂನ್ಯ ಕಾಡಲಾರಂಭಿಸುತ್ತದೆ. ಜೀವನ meaningless ಎಂದೆನಿಸುತ್ತದೆ.

ಮಿಶೆಲ್ ಮ್ಯಾಕ್‌ನಾಲಿ!

ಆಂಗ್ಲೋ ಇಂಡಿಯನ್ ಕುಟುಂಬದಲ್ಲಿ ಜನಿಸಿದ ಆಕೆ, ಬಹಳ ಚೂಟಿ ಹುಡುಗಿ. ಬುದ್ಧಿವಂತೆ ಕೂಡ. ಹುಟ್ಟಿ 18 ತಿಂಗಳು ತುಂಬುವ ಮೊದಲೇ ಆರೋಗ್ಯ ತಪ್ಪಿ ಕಿವುಡಾಗಿ ಶ್ರವಣ ಶಕ್ತಿಯನ್ನೇ ಕಳೆದುಕೊಳ್ಳುತ್ತಾಳೆ. ದೃಷ್ಟಿಯೂ ಹೋಗುತ್ತದೆ. ಮಾತೂ ಇಲ್ಲ. ಆಕೆಯ ಪಾಲಿಗೆ ಜಗತ್ತು ದಟ್ಟ ಕತ್ತಲು.

ಎಲ್ಲವೂ 'ಕಗ್ಗಲ ಮೌನ'. ಆದರೂ ಮಿಶೆಲ್ ಬುದ್ಧಿಮಾಂದ್ಯಳಾಗುವುದಿಲ್ಲ. ಹತಾಶೆಯ ಸುಳಿಗೆ ಸಿಲುಕುವ ಆ ಎಳೆಯ ಮನಸ್ಸು, ಹೊರ ಜಗತ್ತಿನೊಂದಿಗೆ ಬೆರೆಯಲು ಹೆಣಗಿ, ಸೋತು ಹಿಂಸಾರೂಪ ತಳೆಯುತ್ತದೆ. ಅಪ್ಪನಿಗೆ ದೊಡ್ಡ ತಲೆನೋವಾಗುತ್ತಾಳೆ. ಮನೆಯಿಂದ ಹೊರಹಾಕಬೇಕೆನ್ನುವಷ್ಟು ರೋಸಿ ಹೋಗುತ್ತಾನೆ. ಜನ್ಮ ನೀಡಿದ ಅಮ್ಮ ಮಾತ್ರ ಒಪ್ಪುವುದಿಲ್ಲ. ಮಗಳು ತನ್ನ ಕಣ್ಣಮುಂದೆಯೇ ಇರಬೇಕೆಂದು ಹಠಕ್ಕೆ ಬೀಳುತ್ತಾಳೆ.

ಇತ್ತ 48 ವರ್ಷದ ದೇಬ್ರಾಜ್ ಸಹಾಯ್ ಒಬ್ಬ ಟೀಚರ್. ಆದರೂ ಮನೆಯಲ್ಲೇ ಕುಳಿತು, ಸದಾ ಕುಡಿದು 'ಏತಕ್ಕೂ ಬೇಡದವ' ಎಂಬ ಪಟ್ಟ ಪಡೆಯುವಷ್ಟು ಸೋಮಾರಿಯಾಗಿರುತ್ತಾನೆ. After teaching my students for 20 years, when they go back, they see the other side and wave (bye). They cannot even make out me, though I teach them for such a long time! (ನನ್ನ ವಿದ್ಯಾರ್ಥಿಗಳಿಗೆ ಇಪ್ಪತ್ತು ವರ್ಷ ಪಾಠ ಮಾಡಿರುತ್ತೇನೆ. ಆದರೂ ವಿದಾಯ ಹೇಳುವಾಗ ಬೇರೆತ್ತಲೋ ತಿರುಗಿ 'ಬೈ' ಹೇಳಿ ಹೋಗುತ್ತಾರೆ. ಅಷ್ಟು ವರ್ಷ ಪಾಠ ಹೇಳಿಕೊಟ್ಟಿದ್ದರೂ ನನ್ನನ್ನೇ ಗುರುತಿಸಲು ಆಗುವುದಿಲ್ಲ) ಎಂದು ಹಳೆಯ ನೆನಪುಗಳನ್ನು ಮೆಲುಕು ಹಾಕುತ್ತಾ ಕಾಲ ತಳ್ಳುತ್ತಿರುತ್ತಾನೆ.

ಈ ಮಧ್ಯೆ, ದೇಬ್ರಾಜ್ ಮೊದಲು ಪಾಠ ಹೇಳಿಕೊಡುತ್ತಿದ್ದ ಶಾಲೆಯಲ್ಲಿ ಸಹೋದ್ಯೋಗಿಯಾಗಿದ್ದಾಕೆ ಬರುತ್ತಾಳೆ. ಮನೆಯಲ್ಲಿ ಏನು ಮಾಡುತ್ತೀಯಾ, ಕುಳಿತು ಕುಡಿಯುವುದನ್ನು ಬಿಟ್ಟು. ಮೂಕಿ, ಕಿವುಡಿ, ಕುರುಡಿಯಾಗಿರುವ ಹುಡುಗಿಯೊಬ್ಬಳಿದ್ದಾಳೆ. ಅವಳಿಗಾದರೂ ಪಾಠ ಹೇಳಿಕೊಡು. ನಿನಗೂ ನಾಲ್ಕು ಕಾಸು ಸಿಗುತ್ತೆ ಎನ್ನುತ್ತಾಳೆ. ದೇಬ್ರಾಜ್‌ಗೂ ಕುತೂಹಲ

ವುಂಟಾಗುತ್ತದೆ. ಮನೆಪಾಠಕ್ಕೆಂದು ಮಿಶೆಲ್ ಬಳಿಗೆ ಬರುತ್ತಾನೆ. ಪಾಠ ಪ್ರಾರಂಭಿಸುವುದಕ್ಕೂ ಮೊದಲೇ ಮಿಶೆಲ್‌ಳಿಂದ ಕಪಾಳಮೋಕ್ಷವೂ ಆಗುತ್ತದೆ. ಮಿಶೆಲ್ ಎಂತಹ ಹಠಮಾರಿ ಹುಡುಗಿಯೆಂದರೆ ಆಕೆಯ ಚೇಷ್ಟೆಗಳಿಗೆ ಕಡಿವಾಣ ಹಾಕಲು ಯತ್ನಿಸಿ ಮೊದಲ ದಿನವೇ ಕೆಲಸ ಕಳೆದುಕೊಳ್ಳುತ್ತಾನೆ. ಟ್ರೈನ್ ಟಿಕೆಟ್, ಚೆಕ್, ಟರ್ಮಿನೇಶನ್ ಆರ್ಡರ್ ಕೊಟ್ಟ ಮಿಶೆಲ್ ಅಪ್ಪ, 18 ದಿನಗಳ ಪ್ರವಾಸಕ್ಕೆಂದು ತೆರಳುತ್ತಾನೆ. ಆದರೆ ದೇಬ್ರಾಜ್ ಟ್ರೈನ್ ಹತ್ತುವುದಿಲ್ಲ. ಮಿಶೆಲ್‌ಳ ಅಮ್ಮನ ಬಳಿಗೆ ಬಂದು, ಆ 18 ದಿನಗಳನ್ನು ತನಗೆ ನೀಡುವಂತೆ ಬೇಡಿಕೊಳ್ಳುತ್ತಾನೆ. ಎಷ್ಟೇ ಆಗಲಿ, ಅಮ್ಮನ ಮನಸ್ಸಲ್ಲವೆ? ದೇಬ್ರಾಜ್ ಏನಾದರೂ ಮ್ಯಾಜಿಕ್ ಮಾಡಿ ತನ್ನ ಮಗಳು ಮೊದಲಿನಂತಾದಳೇನೋ ಎಂಬ ಆಸೆ.

ಪ್ರತ್ಯೇಕ ಕೊಠಡಿಯಲ್ಲಿ ಪಾಠ ಪ್ರಾರಂಭವಾಗುತ್ತದೆ. ಜಗತ್ತಿಗೆಲ್ಲ ಅ.ಆ.ಇ.ಈ.ಯಿಂದ ಪಾಠ ಪ್ರಾರಂಭವಾದರೆ ಮಿಶೆಲ್ ಜೀವನ B.L.A.C.K.ನಿಂದ ಆರಂಭವಾಗುತ್ತದೆ. ಮಿಶೆಲ್‌ಳ ಮೈ-ಮನಸ್ಸು, ಆತ್ಮಗಳ ಗಾರ್ಡಿಯನ್ ಆಗುತ್ತಾನೆ ದೇಬ್ರಾಜ್. ರಂಪ ಮಾಡುತ್ತಿದ್ದ ಮಿಶೆಲ್, ಚರ್ಚಿನ ಆ ಮಧುರ ಲಯಕ್ಕೆ ಹೆಜ್ಜೆಹಾಕಲು, ಮಂಜಿನ ಮಳೆಗೆ ಕೈ ಸೋಕಿಸಲು ಆರಂಭಿಸುತ್ತಾಳೆ. ನಿಧಾನವಾಗಿ ಪ್ರಕೃತಿಯೊಂದಿಗೆ ಬೆರೆಯುವುದನ್ನೂ ಕಲಿಯುತ್ತಾಳೆ. ಜೀವನದ ಸಿಹಿ ಆಕೆಗೆ ಅನುಭವವಾಗುತ್ತದೆ. ಒಂದು ದಿನವಂತೂ ದೇಬ್ರಾಜ್‌ನನ್ನೇ ಕೆಡವಿ, ಟೇಬಲ್ ಮೇಲೆ ಕುಳಿತು ಕೇಕ್ ತಿನ್ನುತ್ತಿದ್ದ ಮಿಶೆಲ್‌ಳನ್ನು ಕಂಡ ಅಮ್ಮ, You made a beautiful woman out of my daughter! ಅಂತಾ ಹೃದಯತುಂಬಿ ಹೇಳುತ್ತಾಳೆ. ಹೀಗೆ 18 ದಿನ ಕಳೆದಿದ್ದೇ ಗೊತ್ತಾಗುವುದಿಲ್ಲ. ಅಪ್ಪನ ಆಗಮನವಾಗುತ್ತದೆ. ಮನೆಯಲ್ಲೇ ಇದ್ದ ದೇಬ್ರಾಜ್‌ನನ್ನು ಕಂಡು ಮನಸು ಕುದಿಯುತ್ತದೆ. 'ದಾಟಾಚೆ' ಅಂತಾ ಅಬ್ಬರಿಸಿಕೊಳ್ಳುತ್ತಾನೆ. ಬೇರೆ ದಾರಿಯೇ ಇರಲಿಲ್ಲ. ಒಲ್ಲದ ಮನಸ್ಸಿನಿಂದ ಗಂಟು ಮೂಟೆ ಕಟ್ಟಿಕೊಂಡು ಮನೆಯಿಂದ ಹೊರನಡೆಯುತ್ತಿರುವಾಗ, 18 ದಿನ ಹೇಳಿಕೊಟ್ಟಿದ್ದೆಲ್ಲವನ್ನೂ ಮರೆತು ಡೈನಿಂಗ್ ಹಾಲ್‌ನಲ್ಲಿ ಮತ್ತೆ ಹಳೆ ಚಾಳಿ ತೋರುತ್ತಿದ್ದ ಮಿಶೆಲ್‌ಳನ್ನು ಕಂಡು ಕೋಪೋದ್ರಿಕ್ತನಾಗುವ ದೇಬ್ರಾಜ್, ಆಕೆಯನ್ನು ದರದರನೆ ಎಳೆದುಕೊಂಡು ಬಂದು ಅಂಗಳ ದಲ್ಲಿದ್ದ ಕಾರಂಜಿಯ ನೀರಿಗೆ ತಳ್ಳುತ್ತಾನೆ. ಆದರೆ ಮಿಶೆಲ್ ಅಳುವ ಬದಲು ಗಂಗೆಯ ಸ್ಪರ್ಶಕ್ಕೆ ಸ್ಪಂದಿಸಲಾರಂಭಿಸುತ್ತಾಳೆ. ತನ್ನ ಟೀಚರ್ ದೇಬ್ರಾಜ್‌ನನ್ನೂ ಬರಸೆಳೆದುಕೊಂಡು ಒಟ್ಟಿಗೆ ನೀರಲ್ಲಿ ಆಡಲು ಆರಂಭಿಸುತ್ತಾಳೆ.

ವಾಟರ್ ಎನ್ನುತ್ತಾಳೆ!

ನಂತರ ಮದರ್, ಫಾದರ್, ಟೀಚರ್...... ಅಪ್ಪ-ಅಮ್ಮನಿಗೆ ಸ್ವರ್ಗಕ್ಕೇ ಏಣಿ ಹಾಕಿದ ಅನುಭವ. ಕತ್ತಲಾಗಿದ್ದ ಬದುಕಿಗೆ ಮೊದಲ ಬಾರಿಗೆ ಬೆಳಕಿನ ಕಿರಣಗಳು ಮುತ್ತಿಕ್ಕಿರುತ್ತವೆ. ಟ್ರೈನ್ ಹತ್ತಬೇಕಾದ ದೇಬ್ರಾಜ್‌ನ ಪಾಠ ಮುಂದುವರಿಯುತ್ತದೆ. ಸ್ವತಂತ್ರವಾಗಿ ಬದುಕುವ ವಿಧಾನದ ಬಗ್ಗೆ ಹೇಳಿಕೊಡಲಾರಂಭಿಸುತ್ತಾನೆ. ಮಿಶೆಲ್ ಕಾಲೇಜು ಸೇರುತ್ತಾಳೆ. ಒಮ್ಮೆಯಂತೂ ಪಾಠ

ಹೇಳಿಕೊಡುತ್ತಿದ್ದ ಟೀಚರ್, 'ಕನಸು ಕಾಣಲು ಕಣ್ಣುಬೇಕು' ಎಂದಾಗ, 'ನನಗೆ ಕಣ್ಣು ಕಾಣುವುದಿಲ್ಲ. ಆದರೂ ಕನಸು ಕಾಣುತ್ತೇನೆ. ಕನಸ್ಸು ಕಾಣಲು ಕಣ್ಣೇಬೇಕಿಲ್ಲ, ಮನಸ್ಸು-ಹೃದಯವಿದ್ದರೆ ಸಾಕು' ಎಂದು ಮಿಶೆಲ್ ಭಾವುಕಳಾಗಿ ಹೇಳಿದಾಗ ಇಡೀ ತರಗತಿಯೇ ಒಂದು ಕ್ಷಣ ಕರಗಿಹೋಗುತ್ತದೆ. ಇತ್ತ, ಬಳಿಯಲ್ಲೇ ಕುಳಿತು ಆಂಗಿಕ ಭಾಷೆಯ ಮೂಲಕ ದೇಬ್ರಾಜ್ ಪಾಠ ಹೇಳಿಕೊಡುತ್ತಿರುತ್ತಾನೆ. ಆದರೂ ಪ್ರತಿಬಾರಿ ರಿಸಲ್ಟ್ ಬಂದಾಗಲೂ ಮಿಶೆಲ್ ಫೇಲಾಗಿರುತ್ತಿದ್ದಳು. 'ಫಾಲ್ ಆ್ಯಂಡ್ ರೈಸ್' ಅನ್ನುತ್ತಾ ಆಕೆಯನ್ನು ಹುರಿದುಂಬಿಸುವ, ಪ್ರೇರೇಪಿಸುವ ಪ್ರಯತ್ನವನ್ನು ಮಾತ್ರ ಬಿಡುವುದಿಲ್ಲ. ಈ ಮಧ್ಯೆ ಸ್ನೇಹಿತ ಫರ್ನಾಂಡಿಸ್, ಕರೆ ಕಳುಹಿಸಿರುತ್ತಾರೆ. ಕಚೇರಿಗೆ ಹೋದ ದೇಬ್ರಾಜ್‌ಗೆ ಮಿಶೆಲ್‌ಗೆಂದು ಬ್ರೈಲ್ ಲಿಪಿಯಲ್ಲಿರುವ ನೋಟ್ಸ್ ನೀಡುತ್ತಾರೆ. ದೇಬ್ರಾಜ್‌ನ ಮನ ತುಂಬಿ ಬರುತ್ತದೆ. ಮಿಶೆಲ್ ಪಾಸಾಗುತ್ತಾಳೆಂಬ ಆಸೆ ಚಿಗುರುತ್ತದೆ. ಆದರೆ ನೋಟ್ಸ್ ಕೈಗೆತ್ತಿಕೊಳ್ಳುವ ದೇಬ್ರಾಜ್, ಬೆಪ್ಪನಂತೆ ಕುಳಿತಿರುತ್ತಾನೆ. ಫರ್ನಾಂಡಿಸ್ ಪ್ರಶ್ನಿಸಿದಾಗ, ಕಚೇರಿಯಿಂದ ಹೊರಹೋಗುವ ಮಾರ್ಗ ಕೇಳುತ್ತಾನೆ! ಏಕೆಂದರೆ 18 ವರ್ಷದಿಂದ ಮಿಶೆಲ್‌ಳನ್ನು ತಿದ್ದಿ-ತೀಡುತ್ತಾ ದೇಬ್ರಾಜ್ ತನ್ನನ್ನು ತಾನೇ ಮರೆತಿರುತ್ತಾನೆ. ವೃದ್ಧಾಪ್ಯದಲ್ಲಿ ಕಾಣಿಸಿಕೊಳ್ಳುವ ಅಲ್‌ಝೈಮರ್ (ದೈಹಿಕ ನಿಯಂತ್ರಣ ಕಳೆದುಕೊಳ್ಳುವುದು ಮತ್ತು ಮರೆವು) ರೋಗ ಅಂಟಿಕೊಂಡಿರುತ್ತದೆ.

ಈ ನಡುವೆ ಮಿಶೆಲ್ ತಂಗಿ ಮದುವೆಗೆ ಸಿದ್ಧಳಾಗುತ್ತಾಳೆ. ಅದು ಚರ್ಚ್ ವೆಡ್ಡಿಂಗ್. ವಿವಾಹದ ಪ್ರತಿ ವಿಧಿ-ವಿಧಾನಗಳನ್ನ ದೇಬ್ರಾಜ್ ಸನ್ನೆಯ ಮೂಲಕ ಮಿಶೆಲ್‌ಗೆ ಮನವರಿಕೆ ಮಾಡಿಕೊಡುತ್ತಿರುತ್ತಾನೆ. ''ಈಗ ಮಧುಮಗ ಮಧುಮಗಳನ್ನು ಚುಂಬಿಸಬಹುದು'' ಎಂದಾಗ, ಮಿಶೆಲ್ ಕೆನ್ನೆಯ ಮೇಲೆಯೇ ಎಂದು ದೇಬ್ರಾಜ್‌ನನ್ನು ಕೇಳುತ್ತಾಳೆ. ಅಲ್ಲ, ತುಟಿಯ ಮೇಲೆ ಎಂದಾಗ ಕುತೂಹಲವುಂಟಾಗುತ್ತದೆ, ನಂತರ ದೈಹಿಕ ಕಾಮನೆಗಳು ಮಿಶೆಲ್‌ಳಲ್ಲೂ ಕಾಣಿಸಿಕೊಳ್ಳುತ್ತವೆ. ಇತ್ತ ದೇಬ್ರಾಜ್ ತನ್ನ ಕೊಠಡಿಗೆ ಮರಳಿದರೆ ಮಿಶೆಲ್ ಅಲ್ಲಿಯೇ ಕುಳಿತಿರುತ್ತಾಳೆ. ಆತನನ್ನು ಹತ್ತಿರ ಸೆಳೆದು ಸ್ಪರ್ಶಿಸುತ್ತಾಳೆ. ಒಮ್ಮೆ ತನ್ನ ತುಟಿಗೂ ಮುತ್ತಿಕ್ಕು ಎಂದು ಅಂಗಲಾಚುತ್ತಾಳೆ. ದೇಬ್ರಾಜ್‌ನ ಮನಸ್ಸು ಒಪ್ಪುವುದಿಲ್ಲ. ಆದರೂ ಮಿಶೆಲ್ ಜೀವನದಲ್ಲಿ ಮದುವೆಯೆಂಬ ಮಧುರ ಕ್ಷಣ ಬರುವುದಿಲ್ಲ ಎಂಬುದು ಅವನಿಗೆ ಗೊತ್ತಿರುತ್ತದೆ. ಅಲ್ಲದೆ ಮಿಶೆಲ್ ಪಾಲಿಗೆ ಆತ ಟೀಚರ್ ಮಾತ್ರವಲ್ಲ, ಅಪ್ಪ-ಅಮ್ಮನೂ ಆಗಿರುತ್ತಾನೆ. ಹಾಗಾಗಿಯೇ ಸಿಟ್ಟಿಗೆದ್ದಿದ್ದ ಆಕೆಯ ಕೋಪವನ್ನು ಎದುರಿಸಲಾರದೆ ತುಟಿಗೆ ಮುತ್ತಿಕ್ಕುತ್ತಾನೆ. ಅದೇ ಕೊನೆ!

12 ವರ್ಷ ಆತ ಕಣ್ಣಿಗೇ ಕಾಣುವುದಿಲ್ಲ. ಮರಳಿದಾಗ ದೇಬ್ರಾಜ್‌ನ ಕೈ ಕಾಲು ಪ್ರಾಣ ಕಳೆದುಕೊಂಡಿರುತ್ತವೆ. ಜ್ಞಾಪಕಶಕ್ತಿಯೇ ಇರುವುದಿಲ್ಲ. ಮಾತೂ ಮರೆತಿರುತ್ತಾನೆ. ಕಣ್ಣುಗಳೂ ಕುರುಡಾಗಿರುತ್ತವೆ. ಎಂಟು ಬಾರಿ ಫೇಲಾಗಿ ಕೊನೆಗೂ ಪಾಸಾಗಿದ್ದ ಮಿಶೆಲ್ ಪದವಿ ಪಡೆಯುವುದನ್ನು ಕಣ್ಣಾರೆ ನೋಡುವ ಭಾಗ್ಯವೂ ಆತನಿಗಿರುವುದಿಲ್ಲ. ಅವತ್ತು ಮಿಶೆಲ್ ಪಾಠ ಆರಂಭಿಸುತ್ತಾಳೆ. ದೇಬ್ರಾಜ್, ತಾನೇ ಹೇಳಿಕೊಟ್ಟಿದ್ದ ಪಾಠವನ್ನು ಮಿಶೆಲ್‌ಳಿಂದ ಕಲಿಯಲಾರಂಭಿಸುತ್ತಾನೆ.

Life comes full circle!

ಕಾಲಚಕ್ರ ಒಂದು ಸುತ್ತು ತಿರುಗುತ್ತದೆ.. ಎಲ್ಲವೂ ಮುಗಿದೇ ಹೋಯಿತು. ಜೀವನ ಅಂದರೆ ಇಷ್ಟೇ. ಭಾವನೆಗಳು ಬರಿದಾಗಿವೆ, ಸತ್ತೇ ಹೋಗಿವೆ. ಕಣ್ಣೀರಿನ ಸೆಲೆಯೇ ಬತ್ತಿಹೋಗಿದೆ ಅಂತಾ ಅನಿಸುತ್ತಿದ್ದರೆ ದಯವಿಟ್ಟು BLACK ಚಿತ್ರ ನೋಡಿ! 2 ಗಂಟೆ 2 ನಿಮಿಷ ನಿಮ್ಮನ್ನು ನೀವೇ ಮರೆತು ಬಿಡಿ! ಬತ್ತಿದ್ದ ಆ ಕಣ್ಣೀರಿನ ಸೆಲೆ ಮತ್ತೆ ಜಿನುಗುಲಾರಂಭಿಸುತ್ತದೆ. ಭಾವನೆಗಳು ಮೊಳಕೆಯೊಡೆಯಲಾರಂಭಿಸುತ್ತವೆ. ನೋವು, ಸಂಕಟ, ವೇದನೆ, ಕಷ್ಟಗಳೆಲ್ಲವನ್ನೂ ಮೀರಿದ ಜೀವನ ಅನ್ನೋದಿದೆ. ಆ ಜೀವನ ಮುಗಿದಿಲ್ಲ, ಈಗಷ್ಟೇ ಆರಂಭವಾಗಿದೆ ಅಂತಾ ಖಂಡಿತಾ ಅನಿಸುತ್ತದೆ. ಥಿಯೇಟರ್‌ನಿಂದ ಹೊರಬರುತ್ತಿರುವಾಗ ಮನ ಕಲಕಿದಂತಾಗಿದ್ದರೂ ಭಾವನೆಗಳು ಬರಿದಾಗಿಲ್ಲ ಎಂಬ ಭಾವನೆ ಖಂಡಿತಾ ನಿಮ್ಮಲ್ಲುಂಟಾಗಿರುತ್ತದೆ.

ನಮಗೆ ಟೀವಿ, ಫ್ರಿಡ್ಜು, ವಾಷಿಂಗ್‌ಮಷೀನ್, ಕಾರು-ಬೈಕುಗಳೇ ಜೀವನದ ಅತಿದೊಡ್ಡ ಐಭೋಗಗಳಾಗಿ ಕಾಣಸುತ್ತಿವೆ. ಕೈತುಂಬಾ ಸಂಬಳ ಗಳಿಸುವುದೇ ಅತ್ಯುನ್ನತ ಗುರಿಯಾಗಿದೆ. ನಮ್ಮ ಮಟ್ಟಿಗೆ ಸಾಫ್ಟ್‌ವೇರ್ ಎಂಜನಿಯರಿಂಗ್‌ನಲ್ಲೇ ಜೀವನದ ಸಾರ್ಥಕ್ಯ ಅಡಗಿದೆ. ಐಟಿ ಕ್ಷೇತ್ರದ ಕುಬೇರರೇ ನಮ್ಮ ಆದರ್ಶ ವ್ಯಕ್ತಿಗಳಾಗಿದ್ದಾರೆ. ಹಾಗಾಗಿಯೇ ತಮ್ಮ ಕಾಲಡಿ ಇರುವ ಭುವಿಯನ್ನೇ ನೋಡುವ, ಜನ್ಮ ನೀಡಿದ ಅಮ್ಮನನ್ನೇ ಕಾಣಲಾಗದ ದೌರ್ಭಾಗ್ಯವಂಥ ಕುರುಡರು, ಕಿವುಡರು, ಮೂಕರು, ಹೆಳವರು ನಮ್ಮ ಅಕ್ಕ-ಪಕ್ಕದಲ್ಲೇ ಇದ್ದರೂ ನಮಗೆ ಕಾಣುವುದಿಲ್ಲ. ಅವರ ಬಗ್ಗೆ ನಾವೆಂದೂ ಚಿಂತಿಸುವುದಿಲ್ಲ. ವಿದ್ಯಾದಾನದಲ್ಲೇ ಸರ್ವಸ್ವ ಕಾಣುವ ಅಬ್ಬೇಪಾರಿ ಶಿಕ್ಷಕನ ವೃತ್ತಿಯೂ ನಮಗಿಷ್ಟವಿಲ್ಲ. ನಮ್ಮ ದೃಷ್ಟಿಯೇನಿದ್ದರೂ ಮೇಲೆಯೇ ಹೊರತು ಕೆಳಗಲ್ಲ.

ಇಂತಹ ಕಂಫರ್ಟ್ ಹುಡುಕುವ, ಸಣ್ಣ-ಪುಟ್ಟ ಸಮಸ್ಯೆ ಎದುರಾದರೂ ಜೀವನವೇ ನರಕವಾಯಿತಲ್ಲಾ ಅಂತಾ ಆಕಾಶವೇ ಕಳಚಿ ಬಿದ್ದವರಂತೆ ವರ್ತಿಸುವ ನಾವೇ ನಿಜವಾದ ಕುರುಡರು....

ಹ್ಯಾಟ್ಸ್ ಆಫ್ ಟು ಯೂ ಬನ್ಸಾಲಿ!



ಮನ ಮಿಡಿಯುವಂತಿತ್ತು. ಇಂತಹ ಲೇಖನಗಳು ಹೆಚ್ಚು ಹೆಚ್ಚು ಮೂಡಿಬಂದು ಅಸಹಾಯಕರ ಸ್ಥಿತಿಗತಿಯ ಬಗ್ಗೆ ಎಲ್ಲರಿಗೂ ಅರಿವುಂಟಾಗಿ ಸಹೃದಯತೆ ಬೆಳೆಸಿಕೊಳ್ಳುವಂತಾಗಲಿ.

ರೂಪಾ
ಹಾಸನ

ಸುನಾಮಿ ಸಂಕಷ್ಟದ ಸಮಯದಲ್ಲಿ ಸ್ವಂತ ಕಿಸೆಯಿಂದ ನಯಾಪೈಸೆ ಬಿಚ್ಚದೆ ಬೆತ್ತಲಾದ ಕ್ರಿಕೆಟಿಗರೆಂಬ ಢೋಂಗಿ ದೇಶಪ್ರೇಮಿಗಳನ್ನು ಒಂದು ಕ್ಷಣ ಮರೆತುಬಿಡಿ!

ಫಾರ್ಮುಲಾ-1....

ಒಬ್ಬ ಫುಟ್ಬಾಲ್ ಆಟಗಾರನಿಗೆ ತನ್ನ ಪ್ರತಿಭೆಯನ್ನು ಸಾಬೀತುಪಡಿ'ಲು ಇರುವ ಅತ್ಯುನ್ನತ ವೇದಿಕೆಯೆಂದರೆ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಫೀಫಾ ವರ್ಲ್ಡ್‌ಕಪ್. ಆದರೆ ತನ್ನ ಕೈಚಳಕ ಮತ್ತು ಚಮತ್ಕಾರವನ್ನು ತೋರಲು ಒಬ್ಬ ಡ್ರೈವರ್‌ಗೆ ಇರುವ ಅತಿದೊಡ್ಡ ಪರೀಕ್ಷೆಯೇ ಫಾರ್ಮುಲಾ-1 ರೇಸ್.

ಜಗತ್ತಿನ ಜನಸಂಖ್ಯೆ 650 ಕೋಟಿ. ಅದರಲ್ಲಿ 20 ಜನರಿಗೆ ಮಾತ್ರ ಅಂತಹ ಅವಕಾಶ. ಫೆರಾರಿ, ಬಾರ್ ಹೋಂಡಾ, ರೆನಾಲ್ಟ್, ಬಿ.ಎಂ.ಡಬ್ಲ್ಯೂ-ವಿಲಿಯಮ್ಸ್, ಮ್ಯಾಕ್‌ಲಾರೆನ್-ಮರ್ಸಿಡಿಸ್, ಸೌಬರ್ ಪೆಟ್ರೋನಾಸ್, ರೆಡ್ ಬುಲ್, ಪ್ಯಾನಾಸೋನಿಕ್ ಟೊಯೋಟಾ, ಮಿನಾರ್ಡಿ-ಕಾಸ್‌ವರ್ತ್ ಮತ್ತು ಜೋರ್ಡಾನ್-ಟೊಯೋಟಾಗಳೆಂಬ ಜಗತ್ತಿನ 10 ತಂಡಗಳ 20 ಡ್ರೈವರ್‌ಗಳ ಪ್ರತಿಭೆಯನ್ನು ಪಣಕ್ಕಿಡಲಾಗಿರುತ್ತದೆ. ಇಲ್ಲಿ ಡ್ರೈವರ್‌ನ ಕೈಚಳಕ ಮತ್ತು ದೈಹಿಕ ಕ್ಷಮತೆಗಳಷ್ಟೇ ನಿರ್ಣಾಯಕ ಅಂಶಗಳಲ್ಲ. ಅವರು ಚಾಲನೆ ಮಾಡುವ ಕಾರಿನ ತಾಕತ್ತೂ ಕೂಡ ಸ್ಪರ್ಧೆಯ ಫಲಿತಾಂಶವನ್ನು ನಿರ್ಧರಿಸುತ್ತದೆ. ಫಾರ್ಮುಲಾ-1ನಲ್ಲಿ ಒಂದು ಸೆಕೆಂಡ್ ಹಿಂದೆಬಿದ್ದರೆ, ಸಾವಿರ ಕಿ.ಮೀ. ಹಿಂದುಳಿದಂತೆ. ಈ ವಿಷಯದಲ್ಲಿ ಫೆರಾರಿ ಕಾರುಗಳು ಮುಂಚೂಣಿಯಲ್ಲಿದ್ದರೆ, ನಮ್ಮ ಕೊಯಮತ್ತೂರಿನ ಕುಮಾರ್ ರಾಮ್‌ನಾರಾಯಣ್ ಕಾರ್ತಿಕೇಯನ್ ಡ್ರೈವ್ ಮಾಡುವ ಜೋರ್ಡಾನ್-ಟೊಯೋಟಾ ಕಾರು ಬಹುಶಃ ಕೊನೆಯ ಸ್ಥಾನ ಪಡೆಯುತ್ತದೆ!

ಪ್ರತಿ ಫಾರ್ಮುಲಾ-1 ಕಾರು, 80 ಸಾವಿರ ಕಾಂಪೋನೆಂಟ್ (ಭಾಗ)ಗಳಿಂದ ಕೂಡಿರುತ್ತದೆ. ಒಂದು ವೇಳೆ, ಈ ಕಾಂಪೋನೆಂಟ್ ಗಳನ್ನು ಶೇ.99.9ರಷ್ಟು ನಿಖರವಾಗಿ ಜೋಡಿಸಿದರೂ 80 ಕಾಂಪೋನೆಂಟ್‌ಗಳನ್ನು ದೋಷಪೂರಿತವಾಗಿ ಅಳವಡಿಸಲಾಗಿರುತ್ತದೆ. ಈ ಕಾರು, ಸೊನ್ನೆಯಿಂದ 160 ಕಿ.ಮೀ. ವೇಗಕ್ಕೇರಲು, 160 ಕಿ.ಮೀ. ವೇಗದಿಂದ ಸೊನ್ನೆಗಿಳಿಯಲು ಬೇಕಾಗುವ ಸಮಯ ಕೇವಲ 4 ಸೆಕೆಂಡ್! ಚಾಲಕನೇನಾದರೂ ಬ್ರೇಕ್ ಹಾಕಿದರೆ, 300 ಕಿ.ಮೀ. ವೇಗದಲ್ಲಿ ಚಲಿಸುತ್ತಿರುವ ಮಾಮೂಲಿ ಕಾರು ಗೋಡೆಯೊಂದಕ್ಕೆ ಡಿಕ್ಕಿ ಹೊಡೆದರೆ ಉಂಟಾಗುವ ಒತ್ತಡವನ್ನು ಸಹಿಸಿಕೊಳ್ಳಬೇಕಾಗುತ್ತದೆ. ಜತೆಗೆ ಈ ವರ್ಷ ಮಾರ್ಚ್ 6ರಿಂದ ಅಕ್ಟೋಬರ್ 16ರವರೆಗೂ ಜಗತ್ತಿನ ವಿವಿಧ ಭಾಗಗಳಲ್ಲಿ ನಡೆಯಲಿರುವ 19 ರೇಸ್‌ಗಳೂ ಒಂದಕ್ಕಿಂತ ಒಂದು ಭಿನ್ನ. ಆಸ್ಟ್ರೇಲಿಯಾದ ಆಲ್ಬರ್ಟ್ ಪಾರ್ಕ್‌ನಲ್ಲಿ ನಡೆದ ಮೊದಲ ರೇಸ್ 57 ಲ್ಯಾಪ್(ಸುತ್ತು)ಗಳಿಂದ ಕೂಡಿದ್ದರೆ, ಮೊನಾಕ್ಕೊ ಗ್ರ್ಯಾಂಡ್ ಪ್ರೀನಲ್ಲಿ (Grand prix)78 ಲ್ಯಾಪ್‌ಗಳಿವೆ. ಪ್ರತಿ ರೇಸ್‌ನ ನಂತರವೂ ಚಾಲಕನೊಬ್ಬನ ದೇಹದ ತೂಕ ಕನಿಷ್ಠ 4 ಕೆ.ಜಿ.

ಕಡಿಮೆಯಾಗುತ್ತದೆ! ಏಕೆಂದರೆ 300 ಕಿ.ಮೀ. ವೇಗದಲ್ಲಿ ಚಲಿಸುವಾಗ ವಾಹನ ಹೊರಸೂಸುವ ಅಸಾಧ್ಯ ಉಷ್ಣತೆಯನ್ನು ಸಹಿಸಿಕೊಳ್ಳಬೇಕಾಗುತ್ತದೆ. ಜತೆಗೆ ಫಾರ್ಮುಲಾ-1 ಕಾರಿನಲ್ಲಿರುವ ಚಾಲಕನ ಆಸನ ಎಷ್ಟು ಕಿರಿದಾಗಿರುತ್ತದೆಂದರೆ ಚಕ್ರವೊಂದನ್ನು ಬಿಚ್ಚದೆ ಕಾಕ್‌ಪಿಟ್‌ನೊಳಕ್ಕೆ ಇಳಿಯಲು ಮತ್ತು ಹೊರಬರಲು ಸಾಧ್ಯವಿಲ್ಲ.

ಓಟಕ್ಕೆ ಅಣಿಯಾಗಿ ಟ್ರ್ಯಾಕ್ ಮೇಲೆ ನಿಂತಿರುವ ಫಾರ್ಮುಲಾ-1 ಕಾರಿನ ಪ್ರಾರಂಭಿಕ ವೇಗ, ಸಾಮಾನ್ಯ ವಿಮಾನವೊಂದು ಆಗಸಕ್ಕೆ ಚಿಮ್ಮುವ ವೇಗಕ್ಕಿಂತ ಹೆಚ್ಚಾಗಿರುತ್ತದೆ. ಹೀಗೆ ಗಂಟೆಗೆ 160 ಕಿ.ಮೀ.ಗಿಂತ ವೇಗವಾಗಿ ಚಲಿಸುವಾಗ, 600 ಕೆ.ಜಿ.ಗೂ ಹೆಚ್ಚು ತೂಕದ ಫಾರ್ಮುಲಾ-1 ಕಾರು, ತನ್ನ ತೂಕಕ್ಕೆ ಸಮನಾದ ಒತ್ತಡವನ್ನು (ಡೌನ್‌ಫೋರ್ಸ್) ಭೂಮಿಯತ್ತ ಸೂಸುತ್ತದೆ. ಹಾಗಾಗಿ ಸುರಂಗವೊಂದರ ಮೇಲ್ಭಾಗದಲ್ಲಿ ತಲೆಕೆಳಗಾಗಿ ಚಲಿಸಿದರೂ ಫಾರ್ಮುಲಾ-1 ಕಾರು ಕೆಳಗುರುಳುವುದಿಲ್ಲ! ಇಲ್ಲಿ ಗಮನಿಸಬೇಕಾದ ಮತ್ತೊಂದು ಬಹುಮುಖ್ಯ ವಿಷಯವೆಂದರೆ, ಸಾಮಾನ್ಯ ರಸ್ತೆಯಲ್ಲಿ ಫಾರ್ಮುಲಾ-1 ಕಾರನ್ನು ಚಾಲನೆ ಮಾಡಿದರೆ ಅದರಿಂದ ಸೃಷ್ಟಿಯಾಗುವ ಡೌನ್‌ಫೋರ್ಸ್, ಒಳಚರಂಡಿಗಳ ಹೊದಿಕೆಯನ್ನೇ ಕಿತ್ತೊಗೆಯಬಲ್ಲದು. ಫಾರ್ಮುಲಾ-1 ಕಾರಿನ ಚಕ್ರಗಳು ಮಾಮೂಲಿ ಚಕ್ರಗಳಂತೆ ಗಾಳಿಯಿಂದ ತುಂಬಿರುವುದಿಲ್ಲ. ನಿಶ್ಚಿತ ಒತ್ತಡವನ್ನು ಒದಗಿಸುವ ನೈಟ್ರೋಜನ್‌ನಿಂದ ಕೂಡಿರುತ್ತವೆ. ರೇಸ್ ವೇಳೆಯಲ್ಲಿ ಚಕ್ರಗಳು ಕನಿಷ್ಠ ಅರ್ಧ ಕೆ.ಜಿ.ಯಷ್ಟು ಹಗುರವಾಗುತ್ತವೆ. ಪ್ರತಿ ಚಕ್ರಗಳ ಬಳಕೆಯ ಅವಧಿ ಕೇವಲ 100 ಕಿ.ಮೀ. ಹೀಗೆ ಅವಧಿ ಮೀರಿದ ಅಥವಾ ಗ್ರಿಪ್ ಕಳೆದುಕೊಂಡ ಟೈರ್‌ಗಳನ್ನು ರೇಸ್ ವೇಳೆಯಲ್ಲಿ ಬದಲಾಯಿಸಲು ಹಾಗೂ ಮರು ಇಂಧನ ತುಂಬಲು ಬೇಕಾಗುವ ಕಾಲಾವಧಿ 3 ಸೆಕೆಂಡ್ ಮಾತ್ರ! ಆದರೆ ಗಂಟೆಗೆ 300 ಕಿ.ಮೀ.ಗೂ ಹೆಚ್ಚು ವೇಗದಲ್ಲಿ ಚಲಿಸುವ ಈ ಕಾರನ್ನು ನಿಯಂತ್ರಿಸುವುದು ಸಾಮಾನ್ಯ ಮಾತಲ್ಲ. ಜಗತ್ತಿನ ಅತ್ಯಂತ ವೇಗದ ಚಾಲಕ ಆಯರ್ಟನ್ ಸೆನ್ನಾ ಮತ್ತು ರೋಲ್ಯಾಂಡ್ ರ್‍ಯಾಟ್ಜೆನ್‌ಬರ್ಗ್ ಅವರಂತಹ ಪ್ರತಿಭಾವಂತರೇ ಪ್ರಾಣ ಕಳೆದುಕೊಂಡಿದ್ದಾರೆ.

ಇಂತಹ ಫಾರ್ಮುಲಾ-1 ರೇಸ್‌ಗೆ ಗ್ರ್ಯಾಂಡ್ ಪ್ರೀ ಟ್ರ್ಯಾಕ್‌ಗಳೇ ಇಲ್ಲದ ಭಾರತದ ನಾಗರಿಕನೊಬ್ಬ ಅರ್ಹತೆ ಪಡೆಯುವುದೆಂದರೆ ಸಾಮಾನ್ಯ ಮಾತೇ?

ಕುಮಾರ್ ರಾಮ್‌ನಾರಾಯಣ್ ಕಾರ್ತಿಕೇಯನ್ ಜನಿಸಿದ್ದು 1977, ಜನವರಿ 14ರಂದು, ಚೆನ್ನೈನಲ್ಲಿ. ತಂದೆ ಜಿ.ಆರ್. ಕಾರ್ತಿಕೇ ಯನ್ ನ್ಯಾಷನಲ್ ರ್‍ಯಾಲಿ ಚಾಂಪಿಯನ್. ಸಹಜವಾಗಿಯೇ ಮಗನಿಗೂ ರೇಸ್‌ನತ್ತ ಸೆಳೆತ. ತಮ್ಮ ಕನಸನ್ನು ಸಾಕಾರಗೊಳಿಸಿಕೊಳ್ಳುವ ಸಲುವಾಗಿ ಫ್ರಾನ್ಸ್‌ನ Elf ವಿನ್ಫೀಲ್ಡ್ ರೇಸಿಂಗ್ ಸ್ಕೂಲ್‌ಗೆ ಪಯಣ ಬೆಳಸಬೇಕಾಗಿ ಬಂತು. ಏಕೆಂದರೆ ಭಾರತದಲ್ಲಿ ಫಾರ್ಮುಲಾ-1 ಬಿಡಿ, ಯಾವುದೇ ವಿಧದ ಫಾರ್ಮುಲಾ ಕಾರ್ ರೇಸ್‌ಗೆ ಬೇಕಾದ ಟ್ರ್ಯಾಕ್‌ಗಳಿಲ್ಲ. ಏಷ್ಯಾದಲ್ಲಿ ಗ್ರ್ಯಾಂಡ್ ಪ್ರೀ ಟ್ರ್ಯಾಕ್‌ಗಳಿರುವುದು ಜಪಾನ್, ಬಹರೇನ್, ಚೀನಾ ಮತ್ತು ಮಲೇಷಿಯಾದಲ್ಲಿ ಮಾತ್ರ. ಹಾಗಾಗಿ ಭಾರತೀಯನೊಬ್ಬ ಯುರೋಪ್‌ನಲ್ಲಿ

ನಡೆಯುವ ರೇಸ್‌ಗಳಲ್ಲಿ ಸ್ಪರ್ಧಿಸಿ, ಅಲ್ಲಿ ತೋರುವ ಸಾಧನೆ ಮೂಲಕ ಫಾರ್ಮುಲಾ-1ಗೆ ಕಾಲಿಡಬೇಕಾಗುತ್ತದೆ. ಒಮ್ಮೆ ಫಾರ್ಮುಲಾ-1 ರೇಸ್‌ಗೆ ಅರ್ಹತೆ ದೊರೆತರ, ನಿರೀಕ್ಷೆಗೆ ತಕ್ಕ ಸಾಧನೆ ತೋರಿದರೆ ಕೋಟಿಗಟ್ಟಲೆ ಹಣಬರಬಹುದು. ಆದರೆ ವಿಶ್ವದ 20 ಅತ್ಯುನ್ನತ ಡ್ರೈವರ್‌ಗಳಲ್ಲಿ ಒಬ್ಬನೆನಿಸಿಕೊಳ್ಳಲು ಅಮೋಘ ಪರಿಶ್ರಮ, ಪ್ರತಿಭೆ ಜತೆಗೆ ಸ್ವಂತ ಕಿಸೆಯಿಂದ ಕೋಟ್ಯಂತರ ರೂ. ಖರ್ಚು ಮಾಡಬೇಕಾಗುತ್ತದೆ! 1996ರಲ್ಲಿ ಫಾರ್ಮುಲಾ ಏಷ್ಯಾ ಚಾಂಪಿಯನ್ ಹಾಗೂ ಬ್ರಿಟನ್‌ನ ಫಾರ್ಮುಲಾ-3 ಚಾಂಪಿಯನ್ ಆಗಿ ಹೊರಹೊಮ್ಮಿದ ಕಾರ್ತಿಕೇಯನ್‌ಗೆ ಕಳೆದ ವರ್ಷವೇ ಫಾರ್ಮುಲಾ-1ನಲ್ಲಿ ಪಾಲ್ಗೊಳ್ಳುವ ಅವಕಾಶ ದೊರೆತಿತ್ತು. ಮಿನಾರ್ಡಿ ಟೀಮ್‌ನ ಫಾರ್ಮುಲಾ-1 ಕಾರನ್ನು ಟೆಸ್ಟ್ ಡ್ರೈವ್ ಕೂಡ ಮಾಡಿದ್ದರು. ಆದರೆ ಆ ತಂಡವನ್ನು ಸೇರಲು ಬೇಕಾದ ಭಾರೀ ಹಣವನ್ನು ಭರಿಸಲಾಗದೆ ಕೊನೇ ಕ್ಷಣದಲ್ಲಿ ಅವಕಾಶವನ್ನು ಕೈಚೆಲ್ಲಬೇಕಾಗಿ ಬಂತು. ಇಷ್ಟಾಗಿಯೂ ಕಾರ್ತಿಕೇಯನ್ ಭರವಸೆ ಕಳೆದುಕೊಳ್ಳಲಿಲ್ಲ. ಕೊನೆಗೂ ಟಾಟಾ ಕಂಪನಿ ಮತ್ತು ಭಾರತ್ ಪೆಟ್ರೋಲಿಯಂನ ಪ್ರಾಯೋಜಕತ್ವದ ಜತೆ ಒಂದಷ್ಟು ಸಾಲ ಮಾಡಿ ಜೋರ್ಡಾನ್ ತಂಡವನ್ನು ಸೇರಿಕೊಂಡಿದ್ದಾಯಿತು. ಇಷ್ಟಾಗಿಯೂ ಮಾರ್ಚ್ 6ರಂದು ಆಸ್ಟ್ರೇಲಿಯಾದ ಆಲ್ಬರ್ಟ್ ಪಾರ್ಕ್‌ನಲ್ಲಿ ನಡೆದ ಫಾರ್ಮುಲಾ-1 ರೇಸ್‌ಗೆ, ಕಾರ್ತಿಕೇ ಯನ್ ಹೊರಟು ನಿಂತಾಗ ಆತನ ಸಾಮರ್ಥ್ಯದ ಬಗ್ಗೆ ಅನುಮಾನ ಪಟ್ಟವರೇ ಹೆಚ್ಚು. ಏಷ್ಯಾದಿಂದ ಬಂದಿರುವ ಈತನಿಂದ ಏನೂ ಆಗದು ಎಂದು ವಿದೇಶಿ ಮಾಧ್ಯಮಗಳು ಷರಾ ಬರೆದಿದ್ದವು. ಆದರೂ ಫಾರ್ಮುಲಾ-1ನ 'ನಂಬರ್ ವನ್' ಮೈಕೆಲ್ ಶೂಮಾಕರ್ ಮತ್ತು ಹಲವಾರು ಅನುಭವಿ ಡ್ರೈವರ್‌ಗಳ ನಡುವೆಯೂ ಮೊದಲ ಯತ್ನದಲ್ಲೇ 15ನೇ ಸ್ಥಾನ ಪಡೆದಿರುವ ಕಾರ್ತಿಕೇಯನ್, ಎಲ್ಲರ ಅನುಮಾನಗಳನ್ನೂ ಸುಳ್ಳಾಗಿಸಿದ್ದಾರೆ. ಭಾರತದ ನೂತನ 'ಜಾಗತಿಕ' ಕ್ರೀಡಾ ತಾರೆಯಾಗಿ ಹೊರಹೊಮ್ಮಿದ್ದಾರೆ. ಏಕೆಂದರೆ ಕ್ರಿಕೆಟ್ ಆಡದ ರಾಷ್ಟ್ರಗಳಲ್ಲಿ ವಾಸಿಸುತ್ತಿರುವ ಅನಿವಾಸಿ ಭಾರತೀಯರಿಗೆ ತಮ್ಮ ಮೂಲದ ಬಗ್ಗೆ ಹೆಮ್ಮೆಪಡುವಂತೆ ಮಾಡುವ ಹೀರೋನ ಕೊರತೆ ಇತ್ತು. ವಿಶ್ವನಾಥನ್ ಆನಂದ್ ವಿಶ್ವಮಟ್ಟದಲ್ಲಿ ಹೆಸರು ಮಾಡಿದ್ದರೂ, ಚೆಸ್ ಜನ ಹುಚ್ಚೆದ್ದು ನೋಡುವಂತಹ ಕ್ರೀಡೆಯಲ್ಲ. ಅಂತಹ ಕೊರತೆಯನ್ನು ಫಾರ್ಮುಲಾ-1 ಡ್ರೈವರ್ ಕಾರ್ತಿಕೇಯನ್ ನೀಗಿಸಿದ್ದಾರೆ. ಜರ್ಮನಿ, ಇಟಲಿ, ಫ್ರಾನ್ಸ್ ಮುಂತಾದ ಐರೋಪ್ಯ ರಾಷ್ಟ್ರಗಳಲ್ಲಿ ನೆಲೆಸಿರುವ ಅನಿವಾಸಿ ಭಾರತೀಯರ ಆಶಾಕಿರಣವೆನಿಸಿದ್ದಾರೆ.

ಆದರೂ ನಮ್ಮ ರಾಷ್ಟ್ರಪತಿಗಳಾಗಲಿ, ಪ್ರಧಾನಿಯಾಗಲಿ ಅಥವಾ ಅಂಬೆಗಾಲಿಡುತ್ತಿರುವವರಿಗೆ ಲಕ್ಷ ಲಕ್ಷ ರೂ. ಚೆಕ್ ನೀಡಿ ಸನ್ಮಾನಿಸುವ ರಾಜ್ಯ ಸರಕಾರಗಳಾಗಲಿ ಕಾರ್ತಿಕೇಯನ್‌ಗೆ ಅಭಿನಂದನೆ ಸಲ್ಲಿಸುವಂತಹ ಕನಿಷ್ಠ ಸೌಜನ್ಯವನ್ನೂ ತೋರಿಲ್ಲ! ಏಕೆಂದರೆ, ನಮಗೆ ಬೆಳಗ್ಗೆಯಿಂದ ಸಂಜೆವರೆಗೂ ಟೀವಿ ಮುಂದೆ ಕುಳಿತು ಸೋಮಾರಿಗಳಾಗಿ ವೀಕ್ಷಿಸಬಹುದಾದ ಕ್ರಿಕೆಟ್ಟೇ ಸರ್ವಸ್ವ. ಕೋಕ್-ಪೆಪ್ಸಿ ಎನ್ನುತ್ತಾ ಢೋಂಗಿ ದೇಶಪ್ರೇಮ ಪ್ರದರ್ಶಿಸುವ ಸೋಗಲಾಡಿ ಕ್ರಿಕೆಟಿಗರೇ ಆರಾಧ್ಯ ದೈವಗಳು. ಅಂತಹವರಿಗೆ ಮಾತ್ರ ಕೋಟ್ಯಂತರ ರೂ. ತೆರಿಗೆ ವಿನಾಯಿತಿ ನೀಡುತ್ತೇವೆ. ಇನ್ನು ಕೆಲವರನ್ನು ಸಾಧಿಸಿ ತೋರಿಸುವುದಕ್ಕಿಂತ ಮೊದಲೇ ಸ್ಟೆಫಿಗ್ರಾಫ್ ಎಂಬಂತೆ ಚಿತ್ರಿಸುತ್ತೇವೆ. ಕೋಟಿ

ರೂ. ಜಾಹೀರಾತಿಗೆ ರೂಪದರ್ಶಿಯಾಗಿ ಮಾಡಿಕೊಳ್ಳುತ್ತೇವೆ.

ಆದರೆ ಜಗತ್ತಿನಾದ್ಯಂತ 550 ದಶಲಕ್ಷ ಮನೆಗಳಲ್ಲಿ ವೀಕ್ಷಿಸಲಾಗುವ ಫಾರ್ಮುಲಾ-1 ಡ್ರೈವರ್ ಕಾರ್ತಿಕೇಯನ್, ಕೇಸರಿ, ಬಿಳಿ ಮತ್ತು ಹಸಿರು ಬಣ್ಣಗಳಿಂದ ಕೂಡಿರುವ ಹೆಲ್ಮೆಟ್ ಧರಿಸುತ್ತಾರೆ. ಆ ಹೆಲ್ಮೆಟ್‌ನ ನೆತ್ತಿಯ ಮೇಲೆ ಅಶೋಕ ಚಕ್ರವಿದೆ. ಆತ ಧರಿಸುವ ಉಡುಪಿನ ಬೆಲ್ಟ್ ಮೇಲೂ ತ್ರಿವರ್ಣ ಧ್ವಜವಿದೆ. ಒಂದು ವೇಳೆ ಇತರ 19 ಫಾರ್ಮುಲಾ-1 ಡ್ರೈವರ್‌ಗಳಂತೆ ಕಾರ್ತಿಕೇಯನ್ ಕೂಡ, ರಾಷ್ಟ್ರ ಧ್ವಜ ಮತ್ತು ಚಿಹ್ನೆಗೆ ಬದಲು ಯಾವುದೋ ಕಂಪನಿಯ ಜಾಹೀರಾತು ಹಾಕಿಕೊಂಡಿದ್ದರೆ ಕೋಟ್ಯಂತರ ರೂ. ಕಿಸೆಗಿಳಿಸಿಕೊಳ್ಳಬಹುದಿತ್ತು! ಆದರೂ ಇನ್ನು ಮುಂದೆ ಉಡುಪಿನ ಮೇಲಾಗಲಿ, ಸ್ಪೋರ್ಟ್ಸ್ ಕಿಟ್ ಮೇಲಾಗಲಿ, ಹೆಲ್ಮೆಟ್ ಮೇಲಾಗಲಿ ತ್ರಿವರ್ಣ ಧ್ವಜವನ್ನು ಹಾಕಿಕೊಳ್ಳದಂತೆ ಕ್ರೀಡಾಪಟುಗಳಿಗೆ ಕೇಂದ್ರ ಸರಕಾರ ಸೂಚನೆ ನೀಡಿದೆ. ಒಬ್ಬ ಕ್ರೀಡಾಪಟು ಹೆಮ್ಮೆಯಿಂದ ತೋರಿಸುವ, ಭಾವುಕನಾಗಿ ಮುತ್ತಿಕ್ಕುವ ತ್ರಿವರ್ಣ ಧ್ವಜವನ್ನೇ ಕಿತ್ತುಕೊಂಡಿದೆ!

ಕಾರ್ತಿಕೇಯನ್ ಮತ್ತು ಅವರಂತಹ ಅಪ್ಪಟ ದೇಶಪ್ರೇಮಿ ಕ್ರೀಡಾ ಪಟುಗಳನ್ನು ಗೌರವಿಸುವ ಪರಿ ಇದೇನಾ?

ಕ್ರಿಕೆಟ್‌ನ ಭ್ರಮೆಯಲ್ಲಿರುವ ನಮಗೆ ಇತರ ಕ್ರೀಡೆಗಳಲ್ಲಿ ಅಮೋಘ ಸಾಧನೆ ಮಾಡಿದವರು ಕಣ್ಣಿಗೇ ಕಾಣುವುದಿಲ್ಲ.

ಜಗದೀಶ್ ಕಿಣಿ
ಮಂಗಳೂರು



# 17 | ಅತ್ತಿತ್ತ ನೋಡುವ ಅತ್ತು ಹೊರಳಾಡುವ ಆ ಕಂದಮ್ಮಗಳೆಲ್ಲಿ?

ಜೋ ಜೋ ಲಾಲಿ ನಾ ಹಾಡುವೆ
ಚಿನ್ನಾ ನಿನ್ನಾ ಮುದ್ದಾಡುವೆ
ಹೂವಂಥ ಕನಸು, ತಾ ಮೂಡಿ ಬರಲಿ
ನಗುವಾ, ಅಳುವಾ ಕಣ್ಣಲ್ಲಿ ಇಂದು!

ಜೋಗಳವೂ ಇದೆ, ತೊಟ್ಟಿಲೂ ಇದೆ, ತೂಗಿ, ತಟ್ಟಿ ಮಲಗಿಸುವ ಅಮ್ಮನೂ ಇದ್ದಾಳೆ. ಆದರೆ ಅತ್ತು ಕರೆವ ಕಂದಮ್ಮಗಳೇ ಇಲ್ಲ!

ಇದು ಕುಂಭಕೋಣಂ.

ಸರಸ್ವತಿ ನರ್ಸರಿ ಶಾಲೆಯ 90 ಕಂದಮ್ಮಗಳು ಜುಲೈ 16ರಂದು ನಮ್ಮ ಕಣ್ಣೆದುರಿಗೇ ಸುಡುವಾಗ್ನಿಗೆ ಆಹುತಿಯಾಗಿವೆ. 'ನಿನ್ನೆ ಮೊಮ್ಮಗ ಮಣ್ಣಾದ, ಇವತ್ತು ಮೊಮ್ಮಗಳೂ ಮಣ್ಣು ಸೇರಿದಳು' ಅಂತ ಅಜ್ಜಿಯೊಬ್ಬಳು ರೋದಿಸುತ್ತಿದ್ದಾಳೆ. ನಿನ್ನೆ ಬೆಳಗ್ಗೆ ಹೊಸ ಯೂನಿಫಾರ್ಮ್ ತೊಟ್ಟು ಶಾಲೆಗೆ ಹೊರಟುನಿಂತಾಗ ನನ್ನ ಮಗ ಮತ್ತು ಮಗಳು ಕಣ್ಣಿಗೆ ಹಬ್ಬವಾಗಿದ್ದರು. ಶಾಲೆಗೆ ಹೋಗುವ ಮುನ್ನ ಪಕ್ಕದ ಅಂಗಡಿಯಿಂದ ನನ್ನ ಮಗ ಟೀ ತಂದುಕೊಟ್ಟಿದ್ದ. ಆ ಲೋಟ ಇನ್ನೂ ಅಲ್ಲೇ ಇದೆ. ಆದರೆ ಹಿಂದಿರುಗಿಸಲು ಮಗನೇ ಇಲ್ಲ. ಹೆತ್ತವರನ್ನೇ ತಬ್ಬಲಿಗಳನ್ನಾಗಿಸಿದ್ದಾರೆ ಎಂದು ಅಪ್ಪ-ಅಮ್ಮ ಅಳುತ್ತಿದ್ದಾರೆ.

ಆದರೆ ಇದೆಲ್ಲಕ್ಕಿಂತ ಮುಖ್ಯವಾಗಿ ಶಿಕ್ಷಕರ ಮೇಲಿನ ನಂಬಿಕೆಗೇ ಹೊಡೆತ ಬಿದ್ದಿದೆ. ವಿಶ್ವಾಸದ ಬೆಸುಗೆ ಬಿರುಕು ಬಿಟ್ಟಿದೆ. 'ಶಾಲೆಗೆ ಬೆಂಕಿ ಬಿದ್ದಿದೆ ಎಂಬುದು ತಿಳಿದ ಕೂಡಲೇ ಓಡೋಡಿ ಬಂದೆ. ಮುಖ್ಯೋಪಾಧ್ಯಾಯಿನಿ ಹೊರಭಾಗದಲ್ಲೇ ನಿಂತಿದ್ದರು. ನನ್ನ ಮಕ್ಕಳ ಬಗ್ಗೆ ಕೇಳಲಿಲ್ಲ. ಎಲ್ಲಾ ಮಕ್ಕಳ ಬಗ್ಗೆ ವಿಚಾರಿಸಿದೆ. ಸುರಕ್ಷಿತವಾಗಿದ್ದಾರೆ ಎಂದು ಆಕೆ ಸುಳ್ಳು ಹೇಳಿದಳು. ಆ ಮುಖ್ಯೋಪಾಧ್ಯಾಯಿನಿ ಬಗ್ಗೆ ಬಹಳ ಗೌರವವಿತ್ತು. ಆದರೆ ಖಂಡಿತಾ ಅವಳು ಸುಖವಾಗಿರುವುದಿಲ್ಲ. ಎಲ್ಲ ಪಾಪವೂ ಆಕೆಗೇ ತಟ್ಟುತ್ತದೆ. ನನ್ನ ಮಕ್ಕಳನ್ನು ಮತ್ತೀಗೆ ನೋಡಲಿ' ಎಂದು ತಾಯಿಯೊಬ್ಬಳು ಶಪಿಸುತ್ತಿದ್ದಾಳೆ.

ಏಕೆ?

ಅಪ್ಪ-ಅಮ್ಮ ಹೇಳಿದ್ದೆಲ್ಲಾ ಸತ್ಯ ಎಂದು ಮಗು ನಂಬುತ್ತದೆ. ತಪ್ಪನ್ನೇ ಹೇಳಿಕೊಟ್ಟರೂ ಜನ್ಮ ನೀಡಿದ ಅಪ್ಪ-ಅಮ್ಮ ಹೇಳಿದ್ದೆಲ್ಲಾ ಸತ್ಯ ಎಂದು ನಂಬುವ 'Blind Faith' ಅದು! ಆದರೆ ಅಪ್ಪ-ಅಮ್ಮನನ್ನು ಬಿಟ್ಟು ಆ ಮಗು ನಂಬುವ ಮತ್ತೊಬ್ಬ ವ್ಯಕ್ತಿಯಿದ್ದರೆ ಅದು ಶಿಕ್ಷಕ ಮಾತ್ರ. ಮೇಷ್ಟ್ರ ಮೇಲೆ ಅಂತಹ ನಂಬಿಕೆ ಇರುತ್ತದೆ. ವಿಶ್ವಾಸವಿರುತ್ತದೆ. ಆದರೆ ಇಂತಹ ನಂಬಿಕೆಯೇ, ವಿಶ್ವಾಸವೇ 90 ಕಂದಮ್ಮಗಳನ್ನು ಬಲಿತೆಗೆದುಕೊಂಡಿದೆ. 'ಗಲಿಬಿಲಿಯಾಗಬೇಡಿ.... ಎಲ್ಲಿದ್ದೀರೋ

ಅಲ್ಲಿಯೇ ಕುಳಿತುಕೊಳ್ಳಿ' ಎಂಬ ಶಿಕ್ಷಕರ ಆಜ್ಞೆಯನ್ನು ಪಾಲಿಸಿದ ಕಂದಮ್ಮಗಳು ಕಮರಿ ಹೋಗಿವೆ. ಪಾಪ-ಪುಣ್ಯದ ಆಧಾರದ ಮೇಲೆ ಸ್ವರ್ಗ-ನರಕವನ್ನು ನಿರ್ಧರಿಸುವ ಈ ಜಗತ್ತಿನಲ್ಲಿ, ಆ ಹಸುಳೆಗಳು ಮಾಡಿದ ತಪ್ಪಾದರೂ ಏನು? ಮುಂಜಾಗ್ರತೆ ತೆಗೆದುಕೊಳ್ಳಬೇಕಿತ್ತು. ಹೀಗೆ-ಹಾಗೆ ಮಾಡಬೇಕಿತ್ತು ಎಂದು ವ್ಯಾಖ್ಯಾನ ಮಾಡುವುದು ಸುಲಭ. ಆದರೆ ಪ್ರಶ್ನೆಯಿಷ್ಟೇ.

ದುರ್ಘಟನೆ ನಡೆದ ದಿನ 18 ಜನ ಶಿಕ್ಷಕರಿದ್ದರು. ಮೂವರು ಕಚೇರಿ ಕೆಲಸಗಾರರಿದ್ದರು. ಆದರೆ ಒಬ್ಬರಿಗೂ ಸಣ್ಣಪುಟ್ಟ ಗಾಯಗಳಾಗಿಲ್ಲ! ಪೊಲೀಸರು ಮರಿಯಾ ಏಂಜಲೀನಾ ಎಂಬ ಶಿಕ್ಷಕಿಯನ್ನು ಬಂಧಿಸಿದ್ದರೆ, ಉಳಿದ 17 ಶಿಕ್ಷಕರು ತಲೆಮರೆಸಿಕೊಂಡಿದ್ದಾರೆ. ಹಾಗಾಗಿಯೇ ತಾಯಂದಿರು ಶಿಕ್ಷಕರನ್ನು ಶಪಿಸುತ್ತಿದ್ದಾರೆ. ತ್ಯಾಗ-ಬಲಿ ದಾನಗಳ ಬಗ್ಗೆ ಎಳೆಯ ಮಕ್ಕಳಿಗೆ ತಿಳಿಹೇಳುವ, ಮನದಲ್ಲಿ ದೇಶಪ್ರೇಮದ ಬೀಜ ಬಿತ್ತುವ ಶಿಕ್ಷಕರಲ್ಲಿ ಒಬ್ಬರಾದರೂ ಪ್ರಾಣದ ಹಂಗು ತೊರೆದು ಆ ಹಸುಳೆಗಳನ್ನು ರಕ್ಷಿಸಲು ಪ್ರಯತ್ನಿಸಬಹುದಿತ್ತಲ್ಲಾ? ಎಂಬ ಪ್ರಶ್ನೆ ಕಾಡುತ್ತಿದೆ. ಜತೆಗೆ ಎಲ್ಲೋ ಒಂದು ಮೂಲೆಯಲ್ಲಿ ನಿಂತು ನೋಡಿದಾಗ, ಶಿಕ್ಷಣದ ವಾಣಿಜ್ಯೀಕರಣದಿಂದಾಗಿ, ಕಾನ್ವೆಂಟ್‌ಗಳ ಹಾವಳಿಯಿಂದಾಗಿ ಶಿಕ್ಷಣ ದಂಧೆಯಾಗುತ್ತಿದೆಯೆನೋ, ಗುರು-ಶಿಷ್ಯರ ನಡುವಿನ ಬಾಂಧವ್ಯದ ಬೆಸುಗೆ ಸಡಿಲಗೊಳ್ಳುತ್ತಿದೆಯೇನೋ ಎಂದೆನಿಸುತ್ತದೆ. ಗುರುವಿನ ಪೂಜ್ಯ ಸ್ಥಾನಕ್ಕೆ ಕುತ್ತು, ಚ್ಯುತಿ ಬರುತ್ತಿದೆಯೇನೋ ಎಂಬ ಭಯ ಕಾಡುತ್ತಿದೆ. ಬೆನ್ನು ತುಂಬಾ ಪುಸ್ತಕ ಹೊರಿಸುವುದು, ರಾತ್ರಿಯಿಡೀ ಹೋಮ್‌ವರ್ಕ್ ಮಾಡಿಸುವುದು, ಕ್ಲಾಸ್ ರೂಮಿನಲ್ಲಿ ಮಾತನಾಡಿದರೆ ದಂಡ ಹಾಕುವುದರಿಂದಲೇ ಮಕ್ಕಳು ಉದ್ಧಾರವಾಗುತ್ತಾರೆ ಎಂಬ ಖಾಸಗಿ ಶಾಲೆಗಳ ಮತ್ತು ಕಾನ್ವೆಂಟ್‌ಗಳ ವಿಚಿತ್ರ ಮನಃಸ್ಥಿತಿ ವಿದ್ಯಾರ್ಥಿಗಳನ್ನು ದಾರಿ ತಪ್ಪಿಸುತ್ತಿದೆಯೇನೋ ಎಂಬ ಆತಂಕ ಕಾಡುತ್ತಿದೆ. ಅದಕ್ಕೆ ಕಾರಣವೂ ಇದೆ.

ಶಿಕ್ಷಕರ ಬಗ್ಗೆ ಮಕ್ಕಳಲ್ಲಿ ಸಾಮಾನ್ಯವಾಗಿ ಭಯಭಕ್ತಿ ಇರುತ್ತದೆ. ಆದರೆ ಕಾನ್ವೆಂಟ್‌ಗಳಲ್ಲಿ, ಖಾಸಗಿ ಶಾಲೆಗಳಲ್ಲಿ ಭಯವಿದೆ. ಭಕ್ತಿಯಿಲ್ಲ! ಏಕೆಂದರೆ ಶಿಕ್ಷಕರ ವೈಯಕ್ತಿಕ ತೆವಲುಗಳನ್ನು ಮಕ್ಕಳು ಸಹಿಸಿಕೊಳ್ಳಬೇಕಾಗುತ್ತದೆ. ಕೆಲವು ಕಾನ್ವೆಂಟ್‌ಗಳಲ್ಲಂತೂ ಈ ಹಾವಳಿ ಅತಿರೇಕಕ್ಕೇರಿದೆ. ಕೈಗೆ ಬಳೆ ತೊಡುವಂತಿಲ್ಲ, ಕುಂಕುಮ ಇಡುವಂತಿಲ್ಲ, ಹೂವು ಮುಡಿಯುವಂತಿಲ್ಲ. ನಮ್ಮ ಹಬ್ಬ ಹರಿದಿನಗಳ ಸಂದರ್ಭದಲ್ಲೇ Class test ನಿಗದಿ ಮಾಡುವುದು. ಈ ರೀತಿ ಕ್ರೈಸ್ತ ಧರ್ಮವನ್ನು ಹೇರಲು ಯತ್ನಿಸುತ್ತಿರುವ ಶಿಕ್ಷಕರಿಂದಾಗಿ ಗುರುವಿನ ಬಗ್ಗೆ ಇದ್ದ ಗೌರವಕ್ಕೆ ಚ್ಯುತಿ ಬರುತ್ತಿದೆ. ಮತಾಂತರಕ್ಕೆ ಶಾಲೆಗಳನ್ನು ದಾಳಗಳನ್ನಾಗಿ ಬಳಸಿಕೊಳ್ಳುತ್ತಿರುವ ಕಾನ್ವೆಂಟ್‌ಗಳಿಂದಾಗಿ ಗುರು ತನ್ನ ಗೌರವವನ್ನೇ ಕಳೆದುಕೊಳ್ಳುತ್ತಿದ್ದಾನೆ. ಇಂತಹ ದುರುದ್ದೇಶಪೂರಿತ ಬೆಳವಣಿಗೆಗಳು ಎಳೆಯ ಮನಸ್ಸುಗಳನ್ನು ಕಲುಷಿತಗೊಳಿಸುತ್ತಿವೆ. ಇನ್ನು, Discipline ಹೆಸರಿನಲ್ಲಿ ನಡೆಯುತ್ತಿರುವ ಅತಿರೇಕಗಳು ಮಕ್ಕಳಲ್ಲಿ ಭಯದ ವಾತಾವರಣ ಸೃಷ್ಟಿಸುತ್ತಿವೆಯೇ ಹೊರತು, ನಿಜವಾದ ಶಿಸ್ತನ್ನಲ್ಲ. ಮಕ್ಕಳು ಒತ್ತಾಯ ಪೂರ್ವಕವಾಗಿ ಶಿಕ್ಷಕರ ಬಗ್ಗೆ ಗೌರವವನ್ನು ಬೆಳೆಸಿಕೊಳ್ಳುತ್ತಿವೆ. ಆದರೆ ಗ್ರಾಮೀಣ ಶಾಲೆಗಳಲ್ಲಿ ಸಹಜವಾಗಿ ಮೂಡುವ ಗೌರವ, ಭಕ್ತಿ ಅಲ್ಲಿಲ್ಲ.

ಮಕ್ಕಳನ್ನು ಹೆದರಿಸುವುದು, ಬೆದರಿಸುವುದು, ಬೆತ್ತದಿಂದ ಕಣ್ಣಿಗೆ ತಿವಿಯುವುದು. ಕೊಠಡಿಯೊಳಗೆ ಮಕ್ಕಳು ತೂಕಡಿಸುತ್ತಿದ್ದರೂ ಪರಿವೇ ಇಲ್ಲದೆ ಬೀಗ ಹಾಕಿ ಅವಸರದಲ್ಲಿ ಮನೆಗೆ ಓಡುವುದು, ಕನ್ನಡ ಮಾತನಾಡಿದರೆ ದಂಡ ಹಾಕುವುದು, ಪೋಷಕರು ದೂರು ಹೇಳಿದರೆ 'ನಿಮ್ಮ ಮಗು ಬರದಿದ್ದರೆ ನಮ್ಮ ಶಾಲೆಯೇನು ಮುಚ್ಚಿ ಹೋಗುವುದಿಲ್ಲ. ಟಿ.ಸಿ. ತೆಗೆದುಕೊಂಡು ಹೋಗಿ' ಎಂಬ ದರ್ಪದ ಮಾತುಗಳು, ಪರೀಕ್ಷೆಯಲ್ಲಿ ಫೇಲು ಮಾಡುತ್ತೇವೆ ಎಂದು ಧಮಕಿ ಹಾಕುವುದು.... ಇಂತಹ ಬೆಳವಣಿಗೆಗಳು ಸಾಮಾನ್ಯ ಜನರಲ್ಲಿ ಯಾವ ಭಾವನೆ ಮೂಡಿಸುತ್ತವೆ? ಇಲ್ಲಿ ನಮ್ಮ ಸ್ವಯಂಕೃತಾಪರಾಧವೂ ಇದೆ. ಸೈಂಟ್ ಕ್ಸೇವಿಯರ್, ಜೋಸೆಫ್, ಥಾಮಸ್, ಸ್ಟೀಫನ್ಸ್ ಎಂಬ ಹೆಸರನ್ನು ಕೇಳಿದರೆ ನಮ್ಮ ಕಿವಿ ನಿಮಿರೇಳುತ್ತದೆ. ಹೆಸರಿನ ಮೇಲೆ ಯೋಗ್ಯತೆ ಅಳೆದು ನಮ್ಮ ಮಕ್ಕಳನ್ನು ಕಾನ್ವೆಂಟ್‌ಗಳಿಗೆ ಸೇರಿಸುತ್ತೇವೆ. ಆದರೆ ಈ ಕಾನ್ವೆಂಟ್ ಕಲ್ಪನೆ ನಮ್ಮಲ್ಲಿ ಬಂದ ನಂತರ, ಶಿಕ್ಷಣ ಅನ್ನೋದು ಸೇವೆಯಾಗಿ ಉಳಿದಿಲ್ಲ. ವೃತ್ತಿಯಾಗಿದೆ, ಉದ್ಯಮವಾಗಿದೆ. ಶಾಲೆಗಳ ಹೆಸರುಗಳು ಅಂತಸ್ತಿನ ಸಂಕೇತಗಳಾಗಿ ಮಾರ್ಪಟ್ಟಿವೆ.

ಸಾವಿರಾರು ರೂ. ಡೊನೇಶನ್ ಕೊಟ್ಟು ನಿಮ್ಮ ಮಕ್ಕಳನ್ನು ಕಾನ್ವೆಂಟ್‌ಗಳಿಗೆ, ಖಾಸಗಿ ಶಾಲೆಗಳಿಗೆ ಸೇರಿಸಬಹುದು. ಆಗಲೂ ನಿಮ್ಮ ಮಕ್ಕಳ ಪರ್ಸೆಂಟೇಜ್ ನೋಡಿಯೇ ಸೀಟು ಕೊಡುತ್ತಾರೆ. ಅಂದರೆ ಪ್ರತಿಭಾವಂತರಿಗೆ ಮಾತ್ರ ಅಲ್ಲಿ ಪ್ರಾಶಸ್ತ್ಯ ಆದರೆ ಒಂದು ಮಾತು ನೆನಪಿರಲಿ. ಕಾನ್ವೆಂಟ್‌ಗಳಲ್ಲಿ ಓದಿದವರು ಮಿಸ್ ಇಂಡಿಯಾ ಆಗಬಹುದು, ಮಿಸ್ ಯೂನಿವರ್ಸ್ ಕೂಡ ಆಗಬಹುದು, ಫ್ಯಾಶನ್ ಡಿಸೈನರ್(ಟೈಲರ್)ಗಳಾಗಬಹುದು. ಆದರೆ ವಿಶ್ವೇಶ್ವರಯ್ಯನವರಂತಹ ವಿಜ್ಞಾನಿಗಳನ್ನು, ಪ್ರತಿಭಾವಂತರನ್ನು, ಅಪ್ಪಟ ದೇಶಪ್ರೇಮಿಗಳನ್ನು, ಐಎಎಸ್ ಅಧಿಕಾರಿಗಳನ್ನು ಸೃಷ್ಟಿಸುತ್ತಿರುವುದು ಕ್ರೈಸ್ತ ಕಾನ್ವೆಂಟ್‌ಗಳಲ್ಲ. ನಾವೆಲ್ಲ 'ದನಗಳ ದೊಡ್ಡಿ' ಎಂದು ದೂರುವ ಸರಕಾರಿ ಶಾಲೆಗಳು, ಜೆ.ಎಸ್.ಎಸ್.ನಂತಹ ನಮ್ಮ ಮಠ ಮಂದಿರಗಳು! ಜಗದ್ವಿಖ್ಯಾತಿ ಪಡೆದಿರುವ ಐಐಟಿ, ಐಐಎಂಗಳೂ ಸರಕಾರಿ ಶಿಕ್ಷಣ ಸಂಸ್ಥೆಗಳೇ.

ಸರಕಾರಿ ಶಾಲೆಗಳೆಂದರೆ ನೀವು ಮೂಗು ಮುರಿಯಬಹುದು. ಆದರೆ ಗುರು-ಶಿಷ್ಯಂದಿರ ನಡುವೆ ಇರಬೇಕಾದ ನಿಜವಾದ ಬಾಂಧವ್ಯ, ಭಯಭಕ್ತಿ ಇರುವುದು ಸರಕಾರಿ, ಅದರಲ್ಲೂ ಗ್ರಾಮೀಣ ಶಾಲೆಗಳಲ್ಲಿ ಮಾತ್ರ. ಜತೆಗೆ ಸರಕಾರಿ ಶಾಲೆಗಳಿಗೆ ನೀವು ಡೋನೇಷನ್ ಕೊಡಬೇಕಿಲ್ಲ, ದುಬಾರಿ ಶುಲ್ಕ ನೀಡಬೇಕಿಲ್ಲ, ಪರ್ಸೆಂಟೇಜ್ ಕೇಳುವುದಿಲ್ಲ, ಶಿಕ್ಷಕರ ಎದುರು ಕೈಕಟ್ಟಿ ನಿಲ್ಲಬೇಕಿಲ್ಲ, ಮಗು ಹೊಟ್ಟೆಯೊಳಗೆ ಇರುವಾಗಲೇ ಶಾಲೆಯಲ್ಲಿ ಸೀಟು ಕಾದಿರಿಸಬೇಕಿಲ್ಲ, ಇನ್‌ಫ್ಲುಯೆನ್ಸ್ ಮಾಡಿಸಬೇಕಿಲ್ಲ. ನಿಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಿದರಷ್ಟೇ ಸಾಕು. ಜತೆಗೆ ಕಡಿಮೆ ಕಾಸಿಗೆ ದುಡಿಯುವ ಸರಕಾರಿ ಶಿಕ್ಷಕನ ಬಗ್ಗೆ ನಾಲ್ಕು ಒಳ್ಳೆಯ ಮಾತನಾಡಿ ಹುರಿದುಂಬಿಸಿದರಷ್ಟೇ ಸಾಕು. ನಿಮ್ಮ ಮಕ್ಕಳನ್ನು ಈ ದೇಶದ ಜವಾಬ್ದಾರಿಯುತ ನಾಗರಿಕರನ್ನಾಗಿ ರೂಪಿಸುತ್ತಾರೆ.

ಜತೆಗೆ ಗುರುಗಳೂ ಕೂಡ ತಮ್ಮ ಸ್ಥಾನಕ್ಕೆ ಚ್ಯುತಿ ಬರದಂತೆ ನಡೆದುಕೊಳ್ಳಬೇಕು.

ನೂರಾರು ಮಕ್ಕಳಿಗೊಬ್ಬನೇ ಶಿಕ್ಷಕನಿರುವ ಹತ್ತಾರು ಶಾಲೆಗಳು ನಮ್ಮಲ್ಲಿವೆ. ಶಿಕ್ಷಕ ಇಂದಿಗೂ ಬಿಡಿಗಾಸಿಗೆ ದುಡಿಯುತ್ತಿದ್ದಾನೆ. ಬಡಶಿಕ್ಷಕನೆನಿಸಿಕೊಂಡು ಬದುಕು ಸವೆಸಬೇಕಾದ ಸ್ಥಿತಿ ಇದೆ. ಆದರೂ ಬೇರೆಯವರೆಲ್ಲರಿಗಿಂತ ಶಿಕ್ಷಕ ಅದೃಷ್ಟಶಾಲಿ. ವಿದ್ಯಾದಾನ ಮಾಡುವ ಅಪೂರ್ವ ಅವಕಾಶ ಆತನಿಗಿದೆ. ಹಾಗಾಗಿಯೇ ನಾವೆಷ್ಟೇ ದೊಡ್ಡ ಹುದ್ದೆಗೇರಿದರೂ 'ಅ.ಆ.ಇ.ಈ' ಕಲಿಸಿದ ಶಿಕ್ಷಕರನ್ನು ನೆನಪಿಸಿಕೊಳ್ಳುತ್ತೇವೆ, ಪೂಜ್ಯ ಭಾವನೆ ಇಟ್ಟುಕೊಂಡಿರುತ್ತೇವೆ, ಅಪ್ಪ-ಅಮ್ಮನನ್ನು ಗೌರವಿಸದಿದ್ದರೂ ಅಕ್ಷರ ಕಲಿಸಿದ ಮೇಸ್ಟ್ರ ಕಾಲಿಗೆ ಬೀಳುತ್ತೇವೆ. ಆ ನಂಬಿಕೆ, ವಿಶ್ವಾಸ ಮತ್ತು ಗೌರವಕ್ಕೆ ಯಾವತ್ತೂ ಧಕ್ಕೆ ಬರಬಾರದು. ಆದರೆ ಎಳೆಯ ಮಕ್ಕಳನ್ನು ಕೈ ಹಿಡಿದು ಮುನ್ನಡೆಸಬೇಕಾದ, ದಾರಿ ತೋರಬೇಕಾದ ಗುರುಗಳೇ ಕುಂಭಕೋಣಂನ ಶಿಕ್ಷಕರಂತೆ ಪಲಾಯನ ಮಾಡಿದರೆ, ಆ ಗುರುವಿನ ಸ್ಥಾನಕ್ಕೆ ಖಂಡಿತ ಚ್ಯುತಿ ಬರುತ್ತದೆ. ಈ ಹಿನ್ನೆಲೆಯಲ್ಲಿ, ಶಿಕ್ಷಕರು ತಮ್ಮ ಸ್ಥಾನದ ಮಹತ್ವವನ್ನು ಅರಿಯಬೇಕು. ಆಗ ಮಾತ್ರ ದೇಶದ ಅತ್ಯುನ್ನತ ಹುದ್ದೆಗೇರಿದರೂ ಅದಕ್ಕೆ ಕಾರಣರಾದ ಶಿಕ್ಷಕರನ್ನು ನೆನೆಯುವ ಅಬ್ದುಲ್ ಕಲಾಂ ಅವರಂತೆ, ಮುಂದಿನ ಪೀಳಿಗೆಯ ಶಿಷ್ಯಂದಿರೂ ತಮ್ಮ ಗುರುಗಳನ್ನು ನೆನಪಿಸಿಕೊಳ್ಳುತ್ತಾರೆ, ಹೃದಯದಲ್ಲಿಟ್ಟು ಆರಾಧಿಸುತ್ತಾರೆ!

ನಿಮ್ಮ ಲೇಖನಗಳು ಅರ್ಥಪೂರ್ಣವಾಗಿರುತ್ತವೆ.

ಮಂಜುಳಾ,
ಶೀಘ್ರ ಲಿಪಿಗಾರ್ತಿ, ವಾರ್ತಾ ಇಲಾಖೆ
ಬೆಂಗಳೂರು.

ಅಂದು ಬ್ರಿಟಿಷರಿಗೆ ಮತ್ತೊಬ್ಬ 'ಮೀರ್ ಜಾಫರ್' ಬೇಕಾಗಿದ್ದ.....

ಏಕೆಂದರೆ 1942, ಜುಲೈ 14ರಂದು ನಿರ್ಣಯವೊಂದನ್ನು ಅಂಗೀಕರಿಸಿದ ಭಾರತ ರಾಷ್ಟ್ರೀಯ ಕಾಂಗ್ರೆಸ್ 'ಪೂರ್ಣ ಸ್ವರಾಜ್ಯ' ನೀಡಬೇಕೆಂದು ಒತ್ತಾಯಿಸಿತ್ತು. ಒಂದು ವೇಳೆ ಬೇಡಿಕೆಯನ್ನು ತಿರಸ್ಕರಿಸಿದರೆ ದೇಶಾದ್ಯಂತ ಬ್ರಿಟಿಷ್ ಆಡಳಿತದ ವಿರುದ್ಧ ಸಾಮೂಹಿಕ ಅಸಹಕಾರ ಚಳವಳಿಯನ್ನು ಆರಂಭಿಸುವುದಾಗಿ ಎಚ್ಚರಿಕೆಯನ್ನೂ ನೀಡಲಾಗಿತ್ತು. ಇತ್ತ 1939ರಿಂದಲೂ ಜರ್ಮನಿಯ ದಾಳಿಯನ್ನು ಹಿಮ್ಮೆಟ್ಟಿಸಲು ಹೆಣಗುತ್ತಿದ್ದ ಬ್ರಿಟನ್‌ಗೆ, ಭಾರತ ಕೈತಪ್ಪಿ ಹೋಗಬಹುದೆಂಬ ಭಯ ಕಾಡತೊಡಗಿತು.

ಆಗ ಬ್ರಿಟಿಷರಿಗೆ ಕಂಡಿದ್ದು ಕಮ್ಯುನಿಸ್ಟರು!

1934ರಲ್ಲಿಯೇ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ (ಸಿಪಿಐ) ಮೇಲೆ ನಿಷೇಧ ಹೇರಲಾಗಿತ್ತು. ಆದರೆ 1942, ಜುಲೈ 23ರಂದು ನಡೆದ ನಾಟಕೀಯ ಬೆಳವಣಿಗೆಯೊಂದರಲ್ಲಿ ಬ್ರಿಟಿಷರು ಸಿಪಿಐ ಮೇಲೆ ಹೇರಲಾಗಿದ್ದ ನಿಷೇಧವನ್ನು ತೆಗೆದು ಹಾಕಿದರು!! ಅದೂ ಬ್ರಿಟಿಷ್ ಆಡಳಿತದ ವಿರೋಧಿಯಾಗಿದ್ದ, ಸೋವಿಯತ್ ಒಕ್ಕೂಟದ ಬಾಲಬಡುಕನಂತಿದ್ದ ಸಿಪಿಐ ಮೇಲಿನ ನಿಷೇಧವನ್ನು ತೆಗೆದುಹಾಕುವುದೆಂದರೆ ಸಾಮಾನ್ಯ ಮಾತೇ?

ಕಾರಣವೇನು?

1939, ಆಗಸ್ಟ್ 23ರಂದು ಜರ್ಮನಿಯ ಸರ್ವಾಧಿಕಾರಿ ಹಿಟ್ಲರ್ ಮತ್ತು ಸೋವಿಯತ್ ನಾಯಕ ಸ್ಟಾಲಿನ್ ನಡುವೆ ಒಪ್ಪಂದವೊಂದು ಏರ್ಪಟ್ಟಿತ್ತು. ಅದೇ ಮೊಲೊಟೋವ್-ರಿಬ್ಬನ್‌ಟ್ರಾಪ್ ಟ್ರೀಟಿ. ಪರಸ್ಪರರ ಮೇಲೆ ದಾಳಿ ಮಾಡಬಾರದೆಂಬ ಈ ಒಪ್ಪಂದಕ್ಕೆ ಅನುಗುಣವಾಗಿ, ಸೋವಿಯತ್ ರಷ್ಯಾ ಎರಡನೇ ಮಹಾಯುದ್ಧದಲ್ಲಿ ಜರ್ಮನಿಯ ತಟಸ್ಥ ಸಹಯೋಗಿಯಾಗಿತ್ತು. ಆದರೆ 1941, ಜೂನ್ 21ರಂದು ರಷ್ಯಾ ಮರ್ಮಾಘಾತಕ್ಕೊಳಗಾಯಿತು! ಒಪ್ಪಂದವನ್ನು ಮುರಿದ ಹಿಟ್ಲರ್, ರಷ್ಯಾ ಮೇಲೆ ಆಕ್ರಮಣ ಮಾಡಿದ. ಅನಿರೀಕ್ಷಿತ ದಾಳಿಯಿಂದ ದಿಕ್ಕೆಟ್ಟ ರಷ್ಯಾ, ಅಮೆರಿಕ-ಬ್ರಿಟನ್-ಫ್ರಾನ್ಸ್ ನೇತೃತ್ವದ ಮಿತ್ರಕೂಟವನ್ನು ಸೇರಿಕೊಂಡಿತು. ಅದುವರೆಗೂ ಯುದ್ಧ ವಿರೋಧಿಗಳಾಗಿದ್ದ, ಬ್ರಿಟಿಷ್ ಸಾಮ್ರಾಜ್ಯದ ಕಟ್ಟಾ ವೈರಿಗಳಾಗಿದ್ದ ಮತ್ತು ಕಾಂಗ್ರೆಸ್ಸಿಗರನ್ನು ಬ್ರಿಟಿಷರ ಏಜೆಂಟರೆಂದು ಅಣಕಿಸುತ್ತಿದ್ದ ಭಾರತೀಯ ಕಮ್ಯುನಿಸ್ಟರು ರಾತ್ರೋರಾತ್ರಿ ಪಕ್ಷಾಂತರಗೊಂಡು ಬ್ರಿಟಿಷರ ಬೆಂಬಲಿಗರಾದರು! ಗಾಂಧೀಜಿ ಪ್ರಾರಂಭ ಮಾಡಲಿದ್ದ ಕ್ವಿಟ್ ಇಂಡಿಯಾ ಚಳವಳಿಯ ವಿರೋಧಿಗಳಾದರು. ಇಂತಹ ನಿಷ್ಠೆಯನ್ನು ಮೆಚ್ಚಿದ ಬ್ರಿಟಿಷ್ ಆಡಳಿತ, ಸಿಪಿಐ ಮೇಲಿನ ನಿಷೇಧವನ್ನು ತೆಗೆದು ಹಾಕಿತು! ಅಂದು ಪ್ರಾರಂಭವಾಯಿತು ಗೊಡ್ಡು ಸಿದ್ಧಾಂತಕ್ಕೆ ಕಟ್ಟುಬಿದ್ದಿದ್ದ ಕಮ್ಯುನಿಸ್ಟರ ದೇಶದ್ರೋಹ. ಎಲ್ಲರಿಗೂ 'ತಾಯಿ ಭಾರತಿ'ಯಾಗಿದ್ದ

ಈ ನೆಲ, ಕಮ್ಯುನಿಸ್ಟರಿಗೆ 'ಪಿತೃಭೂಮಿ'ಯಾಗಿ ಕಂಡುಬಂತು. ಅಷ್ಟರಮಟ್ಟಿಗಿತ್ತು ಕಮ್ಯುನಿಸ್ಟರ ರಷ್ಯಾ ನಿಷ್ಠೆ!

ಎಲ್ಲ ಅನುಮಾನಗಳಿಗೂ ಪುಷ್ಟಿ ನೀಡುವಂತೆ, 1942ರ ಜುಲೈನಲ್ಲಿ, ಕಮ್ಯುನಿಸ್ಟರ ಮುಖವಾಣಿ "People's war" ನಲ್ಲಿ ಪ್ರಕಟವಾದ ವ್ಯಂಗ್ಯಚಿತ್ರದಲ್ಲಿ ಸುಭಾಷ್‌ಚಂದ್ರ ಬೋಸ್ ಅವರನ್ನು 'ಜಪಾನಿನ ಸೇನಾ ನಾಯಕ ತೋಜೊನನ್ನು ಹೊರುತ್ತಿರುವ ಕತ್ತೆಯಂತೆ' ಚಿತ್ರಿಸಿ ದರು! ಈ ನಡುವೆ ಪೂರ್ಣ ಸ್ವರಾಜ್ಯ ಬೇಡಿಕೆಯನ್ನು ತಿರಸ್ಕರಿಸಿದ ಬ್ರಿಟಿಷರ ವಿರುದ್ಧ ಗಾಂಧೀಜಿ, 1942 ಆಗಸ್ಟ್ 8ರಂದು 'ಭಾರತ ಬಿಟ್ಟು ತೊಲಗಿ' ಅಂದರೆ, ಕ್ವಿಟ್ ಇಂಡಿಯಾ ಚಳವಳಿಗೆ ಕರೆ ನೀಡಿ ದರು. ಗಾಂಧಿ, ಜಯಪ್ರಕಾಶ್ ನಾರಾಯಣ್, ನೆಹರೂ ಸೇರಿದಂತೆ ಸುಮಾರು 90 ಸಾವಿರ ಸ್ವಾತಂತ್ರ್ಯ ಹೋರಾಟಗಾರರನ್ನು ಬ್ರಿಟಿಷರು ಬಂಧಿಸಿದರು. ಆಶ್ಚರ್ಯವೆಂದರೆ, ಕ್ವಿಟ್ ಇಂಡಿಯಾ ಚಳವಳಿಯನ್ನು 'ಬೋಗಸ್' ಎಂದು ಕರೆದ ಭಾರತೀಯ ಕಮ್ಯುನಿಸ್ಟರು ಕಾನ್ಪುರ, ಬಾಂಬೆ, ಲಾಹೋರ್, ಜೆಮ್‌ಷೆಡ್‌ಪುರ್, ಮದ್ರಾಸ್ ಮತ್ತು ಕೋಲ್ಕತಾಗಳಲ್ಲಿ ಸ್ವಾತಂತ್ರ್ಯ ಹೋರಾಟಗಾರರ ಪ್ರತಿಭಟನೆಯನ್ನು ತಡೆಯುವಂತಹ ಹೀನ ಕೃತ್ಯಕ್ಕೆ ಕೈಹಾಕಿದರು.

ಸಾಲದೆಂಬಂತೆ ಕ್ವಿಟ್ ಇಂಡಿಯಾ ಚಳವಳಿಯನ್ನು ವಿರೋಧಿಸುತ್ತಿದ್ದ ಪ್ರತ್ಯೇಕ ರಾಷ್ಟ್ರದ ಪ್ರತಿಪಾದಕ ಮೊಹಮದ್ ಅಲಿ ಜಿನ್ನಾನ ಜತೆ ಸೇರಿ ದೇಶ ವಿಭಜನೆ ಕಾರ್ಯಕ್ಕೆ ಪ್ರೋತ್ಸಾಹ ನೀಡಿದರು. ದ್ವಿರಾಷ್ಟ್ರ ಸಿದ್ಧಾಂತವನ್ನು ಸಮರ್ಥಿಸಿಕೊಳ್ಳಲು ಬೇಕಾದ ಬೌದ್ಧಿಕ ಸರಕನ್ನೂ ಒದಗಿಸಿದರು. ಈ ರೀತಿ ಬೌದ್ಧಿಕ ಗುಲಾಮಗಿರಿ ಮಾಡಿದ್ದಲ್ಲದೆ, ಸೋವಿಯತ್ ರಷ್ಯಾದಂತೆ ಭಾರತ ಕೂಡ 'ಹಲವು ರಾಷ್ಟ್ರಗಳಿಂದ ಕೂಡಿರುವ ಒಂದು ಒಕ್ಕೂಟ' ಎಂಬ ಹೊಸ ಸಿದ್ಧಾಂತ ಮಂಡಿಸಲಾರಂಭಿಸಿದರು. ಆದರೆ ಅಣಕವೆಂದರೆ 1947, ಆಗಸ್ಟ್ 14ರಂದು ಸ್ವಾತಂತ್ರ್ಯ ದೊರೆತ ಕೂಡಲೇ ಜಿನ್ನಾ ಮಾಡಿದ ಮೊದಲ ಕೆಲಸವೇನು ಗೊತ್ತೆ? ಅಮೆರಿಕದಲ್ಲಿ ಜೋಸೆಫ್ ಮ್ಯಾಕಾರ್ಥಿ ಮಾಡಿದಂತೆ, ಪಾಕಿಸ್ತಾನದಿಂದ ಕಮ್ಯುನಿಸ್ಟರನ್ನು ಹೊರಗಟ್ಟಿದರು. ಆದರೂ ಬುದ್ಧಿ ಕಲಿಯದ ಕಮ್ಯುನಿಸ್ಟರು, ಕ್ರಾಂತಿಕಾರಿಗಳು ರಕ್ತ ಚೆಲ್ಲಿ ಗಳಿಸಿದ್ದ ಸ್ವಾತಂತ್ರ್ಯವನ್ನು 'ಯೇ ಆಝಾದಿ ಝೂಟಾ ಹೈ.... ಲಾಖೋ ಲೋಗ್ ಭೂಖೆ ಹೈ' ಎಂದು ಹೀಗಳೆದರು!

ಆದರೆ ಕಮ್ಯುನಿಸ್ಟರ ದೇಶದ್ರೋಹ ಅಷ್ಟಕ್ಕೇ ನಿಲ್ಲಲಿಲ್ಲ!

1962ರಲ್ಲಿ ಚೀನಾ ಭಾರತದ ಮೇಲೆ ಆಕ್ರಮಣ ಮಾಡಿದಾಗ ಮತ್ತೆ ಬೆನ್ನಿಗೆ ಚೂರಿಹಾಕಿದರು. ತಿನ್ನುತ್ತಿದ್ದ ಅನ್ನವನ್ನು ಮರೆತು ಚೀನಾವನ್ನು ಬೆಂಬಲಿಸಿದರು. ಅವರಲ್ಲಿ ಮಣಿಶಂಕರ್ ಅಯ್ಯರ್ ಕೂಡ ಒಬ್ಬರು! ಕೇಂಬ್ರಿಡ್ಜ್‌ನಲ್ಲಿ ವ್ಯಾಸಂಗ ಮಾಡುತ್ತಿದ್ದ ಅಯ್ಯರ್, ಆಗ ಕಮ್ಯುನಿಸ್ಟ್ ಸಂಘಟನೆಯೊಂದರ ಕಾರ್ಯದರ್ಶಿಯಾಗಿದ್ದರು. ಕಮ್ಯುನಿಸ್ಟ್ ಸಿದ್ಧಾಂತದ ಮೇಲೆ ಅವರಿಗೆ ಎಂತಹ ಒಲವಿತ್ತೆಂದರೆ, ಭಾರತದ ಮೇಲೆ ಆಕ್ರಮಣ ಮಾಡಿದ ಚೀನಾದ ಪರ ದೇಣಿಗೆ

ಎತ್ತಲಾರಂಭಿಸಿದರು. ಈ ಎಲ್ಲ ಸಂಗತಿಗಳಿಗೂ ಆಧಾರವಿದೆ.

ಆದರೆ ಈ ದೇಶದ ದೌರ್ಭಾಗ್ಯವೆಂದರೆ ನೆಹರೂ ಮತ್ತು ಇಂದಿರಾ ಗಾಂಧಿಯವರ ಅಧಿಕಾರಾವಧಿಯಲ್ಲಿ ನ್ಯಾಷನಲ್ ಬುಕ್ ಟ್ರಸ್ಟ್, ಎನ್‌ಸಿಇಆರ್‌ಟಿ ಮತ್ತು ವಿವಿಧ ವಿಶ್ವವಿದ್ಯಾಲಯಗಳನ್ನು ಆಕ್ರಮಿಸಿದ ಕಮ್ಯುನಿಸ್ಟರು ಶಿಕ್ಷಣದ ಮೇಲೆ ಅತ್ಯಾಚಾರವೆಸಗತೊಡಗಿದರು. 1191ರಲ್ಲಿ ನಡೆದ ಮೊದಲ ತರೈನ್ ಯುದ್ಧದಲ್ಲಿ ಸೋತು ತೀವ್ರವಾಗಿ ಗಾಯಗೊಂಡಿದ್ದ ಮೊಹಮದ್ ಘೋರಿಗೆ, ಪೃಥ್ವಿರಾಜ್ ಚವ್ಹಾಣ್ ಪ್ರಾಣಭಿಕ್ಷೆ ನೀಡಿದ. ಆದರೆ ಆತನ ಕ್ಷಮಾಗುಣ ಕಮ್ಯುನಿಸ್ಟ್ ಇತಿಹಾಸಕಾರರಿಗೆ ಎಂದೂ ಕಾಣಲಿಲ್ಲ. ಆದರೆ 1192ರಲ್ಲಿ ನಡೆದ ಎರಡನೇ ತರೈನ್ ಯುದ್ಧದಲ್ಲಿ ಸೋತು ಖಡ್ಗಕ್ಕೆ ತಲೆಕೊಟ್ಟ ಪೃಥ್ವಿರಾಜನನ್ನು ಹೇಡಿ ಎಂದು, ಘೋರಿಯನ್ನು ಪರಾಕ್ರಮಿಯೆಂದು ಚಿತ್ರಿಸಿದರು. ಭಾರತ 7ನೇ ಶತಮಾನದಿಂದ 17ನೇ ಶತಮಾನದವರೆಗೂ ಒಂದು ಸಾವಿರ ವರ್ಷಗಳ ಕಾಲ ಇಸ್ಲಾಮಿಕ್ ದಾಳಿಕೋರರ ಸತತ ಆಕ್ರಮಣವನ್ನು ಮೆಟ್ಟಿ ನಿಂತಿತು. ಘಸ್ನಿ 17 ಬಾರಿ ಆಕ್ರಮಣ ಮಾಡಿದ. ಆದರೂ ಹಿಂದೂ ಧರ್ಮವನ್ನು ನಿರ್ನಾಮ ಮಾಡಲು ಯಾರಿಂದಲೂ ಸಾಧ್ಯವಾಗಲಿಲ್ಲ. ಅಂತಹ ನಮ್ಮ ತಾಕತ್ತನ್ನು, ಎದೆಗಾರಿಕೆಯನ್ನು ಬಿಟ್ಟು ಮುಸ್ಲಿಂ ದಾಳಿಕೋರರ ದೌರ್ಜನ್ಯವನ್ನು, ನಮ್ಮ ಹೆಣ್ಣುಮಕ್ಕಳ ಮೇಲೆ ಮಾಡಿದ ಮಾನಭಂಗವನ್ನು ಕಮ್ಯುನಿಸ್ಟರು 'ಪೌರುಷ'ವೆಂದು ಚಿತ್ರಿಸಿದರು! ಇಂತಹ ಕೊಳಕು ಇತಿಹಾಸವನ್ನು ನಮ್ಮ ಮಕ್ಕಳು ಇಂದಿಗೂ ಓದುತ್ತಿದ್ದಾರೆ. ರೋಮಿಲಾ ಥಾಪರ್, ಪ್ರೊ. ಜೆ.ಎಸ್. ಗ್ರೆವಾಲ್ ಮತ್ತು ಪ್ರೊ. ಸತೀಶ್‌ಚಂದ್ರ ಅವರಂತಹ ಮಾರ್ಕ್ಸ್‌ವಾದಿ ಇತಿಹಾಸಕಾರರಿಂದ ಅತ್ಯಾಚಾರಕ್ಕೊಳಗಾಗಿರುವ ಪಠ್ಯಪುಸ್ತಕಗಳನ್ನು ಬಿಜೆಪಿ ಸರಕಾರ ಸರಿಪಡಿಸಲು ಯತ್ನಿಸಿದರೆ ಅದು ಕೇಸರೀಕರಣವೆಂದು ಬೊಬ್ಬೆಹಾಕಿದರು. ಅಲ್ಲ, ಔರಂಗಜೇಬನನ್ನು ಧರ್ಮಸಹಿಷ್ಣು ಅಂತಾ ಚಿತ್ರಿಸುವ ಕಮ್ಯುನಿಸ್ಟರಿಗೆ ನಾಚಿಕೆಯಾಗುವುದಿಲ್ಲವೆ? ಇಂತಹವರಿಗೆ ಈಗ ಅರ್ಜುನ್ ಸಿಂಗ್ ಎಂಬ ದಂಡನಾಯಕ ಸಿಕ್ಕಿದ್ದಾರೆ. ಹಾಗಾಗಿಯೇ, ಕೇವಲ 500 ವರ್ಷಗಳ ಹಿಂದೆ ನಿರ್ಜನ ಪ್ರದೇಶವಾಗಿದ್ದ ಅಮೆರಿಕ ತನ್ನ ಇತಿಹಾಸದ ಬಗ್ಗೆ ಹೆಮ್ಮೆಯಿಂದ ಹೇಳಿಕೊಂ ಡರೆ, ನಾಗರಿಕತೆಗೆ ಜನ್ಮವಿತ್ತ ಭರತಭೂಮಿಯಲ್ಲಿ ಹುಟ್ಟಿದರೂ ನಾವು 'ಷಂಡ' ಇತಿಹಾಸವನ್ನು ಓದಬೇಕಾಗಿದೆ.

ಹೀಗೆ ಸ್ವಾತಂತ್ರ್ಯ ಹೋರಾಟ, ಇತಿಹಾಸಗಳಲ್ಲೆಲ್ಲ ಖಳನಾಯಕರಾಗಿರುವ ಕಮ್ಯುನಿಸ್ಟರು ಈಗ ದೇಶದ ಅರ್ಥವ್ಯವಸ್ಥೆಯ ಮೇಲೂ ಅತ್ಯಾಚಾರವೆಸಗಲು ಮುಂದಾಗಿದ್ದಾರೆ! ಮಾಂಟೇಕ್ ಸಿಂಗ್ ಅಹ್ಲುವಾಲಿಯಾ ಉಪಾಧ್ಯಕ್ಷರಾಗಿರುವ ಯೋಜನಾ ಆಯೋಗಕ್ಕೆ ಭಾರತ ಪರ ವಿದೇಶಿ ಪರಿಣತರನ್ನು ಸೇರಿಸಿಕೊಳ್ಳಲಾಗಿದೆ. ಆದರೆ ಅವರನ್ನು ಹೊರಹಾಕಬೇಕೆಂದು ಎಡಪಕ್ಷಗಳು ಪಟ್ಟುಹಿಡಿದಿವೆ. ವಿತ್ತಸಚಿವ ಪಿ. ಚಿದಂಬರಂ ಅವರನ್ನು ಭೇಟಿಯಾಗಿರುವ ಮಾರ್ಕ್ಸ್‌ವಾದಿಗಳಾದ ಸೀತಾರಾಂ ಯೆಚೂರಿ ಮತ್ತು ಪ್ರಕಾಶ್ ಕಾರಟ್, ಒಂದು ವೇಳೆ ವಿದೇಶಿ ಪರಿಣತರನ್ನು ಹೊರಹಾಕದಿದ್ದರೆ ಆಯೋಗದಲ್ಲಿರುವ ಐವರು ಕಮ್ಯುನಿಸ್ಟ್ ಚಿಂತಕರು ಹೊರನಡೆಯಲಿದ್ದಾರೆಂದು ಬೆದರಿಕೆ ಹಾಕಿದ್ದಾರೆ. ಎಡಪಕ್ಷಗಳ ಬೆಂಬಲದ

ಅನಿವಾರ್ಯತೆಯಲ್ಲಿರುವ ಕೇಂದ್ರ ಸರಕಾರ ಒತ್ತಡಕ್ಕೆ ಸಿಲುಕಿದೆ. ಆದರೆ ಲೋಕಸಭೆಯಲ್ಲಿ ಕೇವಲ 61 ಸಂಸದರನ್ನು ಹೊಂದಿರುವ ಕಮ್ಯುನಿಸ್ಟರು ದೇಶದ ಅರ್ಥ ವ್ಯವಸ್ಥೆಯನ್ನೇ ತಮ್ಮ ನಿಯಂತ್ರಣಕ್ಕೆ ತೆಗೆದುಕೊಳ್ಳಲು ಯತ್ನಿಸುತ್ತಿರುವುದು ಎಷ್ಟರಮಟ್ಟಿಗೆ ಸರಿ? ಅದೂ ಬರೀ 10 ಸಂಸದರನ್ನು ಹೊಂದಿರುವ ಸಿಪಿಐನ ನಾಯಕ ಎ.ಬಿ. ಬರ್ಧನ್ ಯಾವ ಆಧಾರದ ಮೇಲೆ ಬ್ಲಾಕ್‌ಮೇಲ್ ಮಾಡುತ್ತಿದ್ದಾರೆ? ಮೇ.13 ರಂದು ಅಟಲ್ ಸರಕಾರ ಅಧಿಕಾರ ಕಳೆದುಕೊಂಡಾಗ ಬಾಂಬೆ ಷೇರು ಮಾರುಕಟ್ಟೆ ಸೂಚ್ಯಂಕ 565 ಪಾಯಿಂಟ್ ಕುಸಿದಿತ್ತು. ಅನಗತ್ಯವಾಗಿ ತಾಳ್ಮೆ ಕಳೆದುಕೊಂಡ ಬರ್ಧನ್, 'Go to hell' ಎಂದು ಷೇರು ಮಾರುಕಟ್ಟೆಗಳ ವಿರುದ್ಧ ಹರಿಹಾಯ್ದಿದ್ದರು! ಷೇರು ಮಾರುಕಟ್ಟೆಯ ಮಹತ್ವವನ್ನೇ ಅರಿಯದ ಇಂತಹ ತಿಳಿಗೇಡಿಗಳಿಂದ ಮುಂದೆ ಉಂಟಾಗಬಹುದಾದ ಅಪಾಯವನ್ನು ಊಹಿಸಿ. ಆಗ ಗಂಭೀರತೆಯ ಅರಿವಾಗುತ್ತದೆ. ಕಮ್ಯುನಿಸ್ಟರನ್ನು ಮಟ್ಟಹಾಕದಿದ್ದರೆ ಜ್ಯೋತಿ ಬಸು ಪಶ್ಚಿಮ ಬಂಗಾಳವನ್ನು ಅವಸಾನದ ಅಂಚಿಗೆ ಕೊಂಡೊಯ್ದಂತೆ ಮಾರ್ಕ್ಸ್‌ವಾದಿಗಳು ಇಡೀ ದೇಶವನ್ನೇ ಅಡವಿಡುತ್ತಾರೆ. ಆ ಬಗ್ಗೆ ಖಂಡಿತಾ ಸಂಶಯ ಬೇಡ. ಏಕೆಂದರೆ ಈ ದೇಶದ ಸಂಸ್ಕೃತಿಯನ್ನು, ಕಲೆಯನ್ನು, ಮೌಲ್ಯಗಳನ್ನು ಟೀಕಿಸುವಂತಹ ತುಚ್ಚೀಕರಣವನ್ನು ಬಿಟ್ಟರೆ ಅಸಲಿ ಸಿದ್ಧಾಂತವೇ ಭಾರತೀಯ ಕಮ್ಯುನಿಸ್ಟರಿಗಿಲ್ಲ. ಜತೆಗೆ ತಮ್ಮನ್ನು ಆದರ್ಶವಾದಿಗಳು, ಬುದ್ಧಿಜೀವಿಗಳು, ಸಿದ್ಧಾಂತವಾದಿಗಳು, ಮೌಲ್ಯವಂತರು ಎಂದು ಹೇಳಿಕೊಳ್ಳುತ್ತಾ ಬಂದಿರುವ ಕಮ್ಯುನಿಸ್ಟರು ಕಾಂಗ್ರೆಸ್ಸನ್ನು ದೂಷಣೆ ಮಾಡುತ್ತಲೇ, ಪಶ್ಚಿಮ ಬಂಗಾಳದಲ್ಲಿ ಕಾಂಗ್ರೆಸ್ ಜತೆ ಕಚ್ಚಾಡುತ್ತಲೇ ಇದ್ದು ಅಧಿಕಾರದ ಅಡುಗೆ ಸಿದ್ಧವಾದಾಗ ಒಟ್ಟಿಗೆ ಊಟಕ್ಕೆ ಕುಳಿತುಕೊಳ್ಳುವಷ್ಟು ಆದರ್ಶವಾದಿಗಳು!

ನಿಜ ಹೇಳಿ, ಸ್ವಾತಂತ್ರ್ಯ ಚಳವಳಿಯಲ್ಲೇ ಭಾಗವಹಿಸದ, ಬ್ರಿಟಿಷರ ಜತೆ ಕೈಜೋಡಿಸಿದ ಕಮ್ಯುನಿಸ್ಟರಿಗೆ ಈ ದೇಶದ ಭವಿಷ್ಯವನ್ನು ನಿರ್ಧರಿಸುವ ಹಕ್ಕಿದೆಯೇ? ಯೋಜನಾ ಆಯೋಗದಲ್ಲಿ 'ಇಂತಹವರು ಇರಬೇಕು ಅಥವಾ ಬೇಡ' ಎಂದು ನಿರ್ದೇಶಿಸುವ ಅಧಿಕಾರ ವನ್ನು ಕಮ್ಯುನಿಸ್ಟರಿಗೆ ಕೊಟ್ಟವರಾರು? ದೇಶ ರಕ್ಷಣೆಗೆಂದು ಅಟಲ್ ಅಣುಪರೀಕ್ಷೆ ಮಾಡಿದಾಗ, ಅದನ್ನೇ ಟೀಕಿಸಿದ್ದ ಕಮ್ಯುನಿಸ್ಟರ ಮೇಲೆ ಹೇಗೆತಾನೇ ವಿಶ್ವಾಸವಿಡಲು ಸಾಧ್ಯ? ಸಿಕ್ಕಿಂ ವಿಷಯದಲ್ಲಿ ತಗಾದೆ ತೆಗೆಯುತ್ತಿರುವ ಚೀನಾ ಮತ್ತೊಮ್ಮೆ ಆಕ್ರಮಣ ಮಾಡಿದರೆ ಕಮ್ಯುನಿಸ್ಟರು ಚೀನಾವನ್ನು ಬೆಂಬಲಿಸುವುದಿಲ್ಲ ಎಂದು ಹೇಗೆ ನಂಬುತ್ತೀರಿ? ನಕ್ಸಲಿಸಂ, ಮಾವೋಯಿಸಂ, ಮಿಲಿಟೆಂಟ್ ಟ್ರೇಡ್ ಯೂನಿಯನಿಸಂ ಮೂಲಕ ದೇಶ ಮತ್ತು ಸಮಾಜವನ್ನು ಒಡೆಯುವ ಕಾರ್ಯದಲ್ಲಿ ತೊಡಗಿರುವ ಕಮ್ಯುನಿಸ್ಟರ ಧೂರ್ತತನ ಇನ್ನೂ ಅರ್ಥವಾಗಿಲ್ಲವೇ? ದೇಶ ಕಟ್ಟಿದ ಸಾವರ್ಕರ್ ಅವರನ್ನು ದೇಶದ್ರೋಹಿ ಎಂದು, ಸುಭಾಷ್‌ಚಂದ್ರ ಬೋಸ್ ಅವರನ್ನು ತೋಜೋನನ್ನು ಹೊರುತ್ತಿರುವ ಕತ್ತೆಯೆಂದು ಕರೆದ ಕಮ್ಯುನಿಸ್ಟರು ಮತ್ತು ಅವರ ಜತೆ ಒಂದೇ ಹಾಸಿಗೆಯಲ್ಲಿ ಮಲಗಿರುವ ಕಾಂಗ್ರೆಸ್ಸಿಗರ ಕೈಗೆ ಅರ್ಥವ್ಯವಸ್ಥೆಯ ಕೀಲಿಯನ್ನು ಕೊಡುವ ಮುನ್ನ ಯೋಚಿಸಿ.

"A nation can survive
its fools and even the
ambitious. But it cannot
survive treason from
within"

Marcus Tullius Cicero

# 19 ಎಲ್ಲ ಸಂಬಂಧಕ್ಕೂ ಕೊನೆಯಿದೆ ಆ ಕೊನೆಗೂ ಒಂದು ಮಿತಿಯಿದೆ

***"Don't hold something in your arms that you could never hold in your heart . . ."***



ಒಂಬತ್ತು ವರ್ಷಗಳ ಹಿಂದೆ ಮನ್ಸೂರ್ ಅಲಿ ಖಾನ್ ಪಟೌಡಿ ಮತ್ತು ಶರ್ಮಿಳಾ ಟಾಗೂರ್ ಮಗನೆಂಬುದನ್ನು ಬಿಟ್ಟರೆ ಬೇರಾವ ಯೋಗ್ಯತೆ, ಅರ್ಹತೆಗಳೂ ಸೈಫ್ ಅಲಿ ಖಾನ್‌ಗಿರಲಿಲ್ಲ. ಇತ್ತ ಧರ್ಮೇಂದ್ರ, ಜಿತೇಂದ್ರ, ವಿನೋದ್ ಖನ್ನಾ, ಮಿಥುನ್ ಚಕ್ರವರ್ತಿ, ರಿಶಿ ಕಪೂರ್, ಜಾಕಿ ಶ್ರಾಫ್, ಸನ್ನಿ ಡಿಯೋಲ್, ಸಂಜಯ್ ದತ್ ಅವರಂತಹ ಖ್ಯಾತ ತಾರೆಗಳ ಜತೆ 28 ಚಿತ್ರಗಳಲ್ಲಿ ನಟಿಸಿದ್ದ ಅಮೃತಾ ಸಿಂಗ್, 'ನಂಬರ್ ವನ್' ಸ್ಥಾನಕ್ಕೆ ಲಗ್ಗೆಯಿಟ್ಟಿದ್ದಳು. ಆದರೂ ಖ್ಯಾತಿ, ಯಶಸ್ಸು ಎಲ್ಲವನ್ನೂ ಮರೆತ ಅಮೃತಾ, ಸೈಫ್‌ನನ್ನು ಪ್ರೀತಿಸಿ, ವಿವಾಹವಾಗಿ ಬಾಲಿವುಡ್‌ನಿಂದಲೇ ದೂರವಾದಳು.

ಭವ್ಯ ಭವಿಷ್ಯದ ಎಲ್ಲ ಕುರುಹುಗಳೂ ಕಾಣಿಸುತ್ತಿದ್ದ ಕಾಲದಲ್ಲಿ ಸಾಧಾರಣ ಗೃಹಿಣಿಯಾಗಿ ಗಂಡನ ಸಾನ್ನಿಧ್ಯದಲ್ಲೇ ಸುಖ ಕಾಣಲು ಪ್ರಯತ್ನಿಸಿದಳು. ಜತೆಗೆ ಬಾಲಿವುಡ್‌ನಲ್ಲಿ ದಿಕ್ಕುದೆಸೆಯಿಲ್ಲ ದವರಂತಿದ್ದ ಸೈಫ್‌ಗೆ ಆತ್ಮಸ್ಥೈರ್ಯ ತುಂಬಿ, ಹುರಿದುಂಬಿಸುವ ಕಾರ್ಯವನ್ನೂ ಮಾಡಿದಳು.

ಕೊನೆಗೂ ಸೈಫ್, 2004ರಲ್ಲಿ ಏಕೈಕ ಹಿಟ್ ಚಿತ್ರ ನೀಡಿದ. ಆದರೆ 'ಹಮ್ ತುಮ್' ಚಿತ್ರದ ಯಶಸ್ಸು ಆತನ ತಲೆಗೇರಲು ಹೆಚ್ಚು ಕಾಲ ಬೇಕಾಗಲಿಲ್ಲ. 9 ವರ್ಷ ತನ್ನ ಉಸಿರಾಗಿದ್ದ ಅಮೃತಾಳ ತ್ಯಾಗಕ್ಕೆ, ಅನನ್ಯ ಪ್ರೀತಿಗೆ 10 ಕೋಟಿ ಬೆಲೆ ಕಟ್ಟಿ, ಡೈವೋರ್ಸ್ ನೀಡಿದ್ದಾನೆ. ರೋಸಾ ಎಂಬ ನೃತ್ಯಗಾರ್ತಿಯ ಮೈಮಾಟಕ್ಕೆ ಮನಸೋತು ನಡೆದು ಬಂದ ಹಾದಿಯನ್ನೇ ಮರೆತಿದ್ದಾನೆ.....

ಮೊನ್ನೆ ನವೆಂಬರ್ 29ರಂದು, ಗೋವಾದಲ್ಲಿ ಪ್ರಾರಂಭವಾದ 35ನೇ ಅಂತಾರಾಷ್ಟ್ರೀಯ ಚಲನಚಿತ್ರೋತ್ಸವಕ್ಕೆ ಕಿರಣ್ ರಾವ್ ಎಂಬ ಹೊಸ ಗರ್ಲ್‌ಫ್ರೆಂಡ್ ಜತೆ ಆಗಮಿಸಿದ ಅಮೀರ್ ಖಾನ್ ಕಥೆ ಕೂಡ ಇಂಥದ್ದೇ. ಪಕ್ಕದ ಮನೆಯಲ್ಲೇ ಇದ್ದ ರೀನಾ ದತ್ತಳನ್ನು ಕಂಡಾಗ, ಆಕೆಯ ರೂಪಕ್ಕೆ ಮನಸೋತಾಗ, ಪ್ರತಿಭೆಗೆ ಮಾರುಹೋದಾಗ ಅಪ್ಪ ತಹೀರ್ ಹೆಸರೇ ಅಮೀರ್ ಖಾನ್‌ನ ಅತಿದೊಡ್ಡ ಅರ್ಹತೆ ಯಾಗಿತ್ತು. ಆದರೂ ರೀನಾ ಪ್ರೀತಿಗೆ ಇದಾವುದೂ ಅಡ್ಡ ಬರಲಿಲ್ಲ. 1986ರಲ್ಲಿ ಇಬ್ಬರೂ ಗೌಪ್ಯವಾಗಿ ವಿವಾಹವಾದರು. ನಂತರ 1988ರಲ್ಲಿ 'ಕಯಾಮತ್ ಸೆ ಕಯಾಮತ್' ಚಿತ್ರ ಭರ್ಜರಿ ಹಿಟ್ ಆಗುವುದರೊಂದಿಗೆ ಅಮೀರ್ ಮನೆಮಾತಾದ. ಜುನೈದ್ ಮತ್ತು ಐರಾ ಕೂಡ ಜನಿಸಿದರು. ಎಲ್ಲವೂ ಸರಿಯಾಗೇ ಇತ್ತು.

ಈ ಮಧ್ಯೆ 2001ರಲ್ಲಿ 'ಲಗಾನ್' ಚಿತ್ರ ಬಿಡುಗಡೆಯಾಯಿತು. ಅದರೊಂದಿಗೆ ಅಗ್ಗದ ಪ್ರಚಾರ, ಅಂತಾರಾಷ್ಟ್ರೀಯ ಖ್ಯಾತಿ ಅರಸಿಕೊಂಡು ಬಂತು. ಅಮೀರ್‌ಖಾನ್ ತನ್ನ ಮಾನಸಿಕ ಸ್ಥಿಮಿತವನ್ನೇ ಕಳೆದುಕೊಂಡ. 'ಆತ್ಮಸ್ತುತಿ' ಅಂಟಿಕೊಂಡಿತ್ತು. ಯಶಸ್ಸು ನೆತ್ತಿಗೇರಿತು. 16 ವರ್ಷ ಜತೆಗಿದ್ದ, ಒಟ್ಟಿಗೆ ಸಂಸಾರ ಮಾಡಿದ್ದ, ತಾನೇ ಇಷ್ಟಪಟ್ಟು ಕೈಹಿಡಿದಿದ್ದ ರೀನಾಳಿಗೆ ಡೈವೋರ್ಸ್ ನೀಡಿ, 'ಇಸ್ಲಾಂಗೆ ಮತಾಂತರ ಗೊಳ್ಳದಿದ್ದುದೇ ವಿಚ್ಛೇದನಕ್ಕೆ ಕಾರಣ' ಎಂದು

ಸಬೂಬು ನೀಡಿದ. ಈಗ ಕಿರಣ್ ರಾವ್ ಎಂಬ ನೂತನ ನಲ್ಲೆ ಜತೆ ಒಂದೇ ಸೂರಿನಡಿ ವಾಸಿಸುತ್ತಿದ್ದಾನೆ.

ಇನ್ನು ನಮ್ಮ ಕಮಲ ಹಾಸನ್!

ಆತನ ಕೈ ಹಿಡಿಯುವಾಗ ಗಂಡನ ಹೆಸರು ಹೇಳಿಕೊಂಡು ಗುರುತಿಸಿಕೊಳ್ಳ ಬೇಕಾದ ದೈನೇಸಿತನ ಖಂಡಿತಾ ವಾಣಿ ಗಣಪತಿಯವರಿಗಿರಲಿಲ್ಲ. ಅದಾಗಲೇ ಖ್ಯಾತ ನೃತ್ಯಗಾರ್ತಿ ಎಂಬ ಹೆಸರು ಮಾಡಿದ್ದರು. ಆದರೂ ನಟಿ ಸಾರಿಕಾ ಜತೆ ಅನೈತಿಕ ಸಂಬಂಧ ಬೆಳೆಸಿದ ಕಮಲ್ ವಿವಾಹಕ್ಕೂ ಮೊದಲೇ ಮಕ್ಕಳನ್ನೂ ಮಾಡಿದ. ಇಷ್ಟಾದರೂ ವಾಣಿ ಗಣಪತಿ ತಾಳ್ಮೆ ಕಳೆದುಕೊಳ್ಳಲಿಲ್ಲ. ಗೌರವಯುತವಾಗಿಯೇ ನಡೆದುಕೊಂಡರು. ಕೊನೆಗೂ ಡೈವೋರ್ಸ್ ನೀಡಿ, ಸಾರಿಕಾ ಅವರನ್ನು ವಿವಾಹವಾದ ಕಮಲ್ ಮತ್ತೂ ತನ್ನ ಚಾಳಿ ಬಿಡಲಿಲ್ಲ. ಸಿಮ್ರಾನ್ ಹಿಂದೆ ಬಿದ್ದು ಸಾರಿಕಾಗೂ ಡೈವೋರ್ಸ್ ನೀಡಿದ್ದಾಯಿತು. ಈಗಂತೂ ನಮ್ಮ ಪ್ರಭಾಕರ್ ಅವರಂತೆ ತೆರೆ ಮೇಲೆ ಚಪಲ ತೀರಿಸಿಕೊಳ್ಳುತ್ತಿದ್ದಾರೆ. ಇತ್ತ ಮತ್ತೊಬ್ಬ ನಟ ಸಂಜಯ್ ದತ್ ಪಾಕಿಸ್ತಾನದ 'ಬೆಲ್ಲಿ ಡಾನ್ಸರ್' ನಾದಿಯಾ ಖಾನ್ ಜತೆ ಸುತ್ತುತ್ತಾ ಪತ್ನಿ ರಿಯಾ ಪಿಳ್ಳೈಯನ್ನೇ ಮರೆತಿದ್ದಾನೆ.

ಆದರೂ ಅಮೀರ್ ಖಾನ್ ಘನತೆಗಾಗಲಿ, ಸೈಫ್ ಅಲಿ ಖಾನ್ ಯೋಗ್ಯತೆಗಾಗಲಿ, ಕಮಲ ಹಾಸನ್ ವ್ಯಕ್ತಿತ್ವಕ್ಕಾಗಲಿ, ಸಂಜಯ್ ದತ್ ಖ್ಯಾತಿಗಾಗಲಿ ಕಿಂಚಿತ್ತೂ ಧಕ್ಕೆ ಬಂದಿಲ್ಲ! ಅವರ ಮೇಲಿನ ಗೌರವವೂ ಕಡಿಮೆಯಾಗಿಲ್ಲ. ಪ್ರಚಾರಕ್ಕೂ ಕೊರತೆಯಾಗಿಲ್ಲ, ಅಭಿಮಾನಿಗಳ ಸಂಖ್ಯೆಯೂ ಕುಸಿದಿಲ್ಲ. ಇನ್ನು, ಹೆಂಗಸರನ್ನಾದರೆ ಜಾರಿಣಿ, ವೇಶ್ಯೆ, ಸೂಳೆ ಎಂದು ಬ್ರಾಂಡ್ ಮಾಡುವ, ಹಣೆಪಟ್ಟಿಕಟ್ಟುವ ಸಮಾಜವೂ ತಲೆಕೆಡಿಸಿಕೊಳ್ಳುತ್ತಿಲ್ಲ. ನಿಷ್ಠೆ, ಬದ್ಧತೆಗಳು ಹೆಣ್ಣಿಗೆ ಮಾತ್ರ ಸಂಬಂಧಪಟ್ಟ ವಿಚಾರಗಳು ಎಂಬಂತೆ ಸುಮ್ಮನಿದೆ. ಹಾಗಾಗಿಯೇ ಅಮೀರ್, ಸೈಫ್, ಸಂಜಯ್ ತಾವೇನೋ ಘನ ಕಾರ್ಯ ಮಾಡಿದಂತೆ ತಲೆಯೆತ್ತಿ, ಎದೆ ಸೆಟೆಸಿ ತಿರುಗುತ್ತಿದ್ದಾರೆ. ಎಷ್ಟೇ ಆಗಲಿ, 'ಗಂಡುಸೂಳೆ' ಎಂಬ ಶಬ್ದ ನಮ್ಮ ಅರ್ಥಕೋಶದಲ್ಲೇ ಇಲ್ಲ.

ಹಾಗಂತ ನಾವೇನೂ ಕಮ್ಮಿಯಲ್ಲ!

ನಮ್ಮೊಳಗೂ ಅಮೀರ್ ಖಾನ್, ಸೈಫ್ ಅಲಿ ಖಾನ್, ಸಂಜಯ್ ದತ್, ಕಮಲ ಹಾಸನ್ ಇದ್ದಾರೆ. ಆದರೆ ಅವಕಾಶ ಸಿಕ್ಕಾಗ ಮಾತ್ರ ಕಾಣಸಿಕೊಳ್ಳುತ್ತಾರೆ. ಇಲ್ಲದಿದ್ದರೆ ಸಾಚಾಗಳು, ಶುದ್ಧಹಸ್ತರು, ನಿಷ್ಠರು ಅಂತಾ ಪೋಸು ಕೊಡುತ್ತಿರುತ್ತೇವೆ ಅಷ್ಟೇ. ಸಾಮಾನ್ಯವಾಗಿ ಗಂಡಸರ ಮನಃಸ್ಥಿತಿಯೇ ಅಂಥದ್ದು. ತನಗಿಂತಲೂ ಹೆಂಡತಿ ಆಕರ್ಷಕವಾಗಿರುವವರೆಗೂ, ಸುಂದರಿಯಾಗಿರುವವರೆಗೂ, ವಿದ್ಯಾವಂತೆಯಾಗಿರುವವರೆಗೂ,

ಹೆಚ್ಚಿಗೆ ಸಂಬಳ ತರುತ್ತಿರುವವರೆಗೂ ತಾನು 'ಫ್ಯಾಮಿಲಿ ಮ್ಯಾನ್' ಎಂಬಂತೆ ಪೋಸು ಕೊಡುತ್ತಾರೆ. ಆದರೆ ತನ್ನ ಕೈ ಸ್ವಲ್ಪ ಮೇಲಾದರೆ, ಯಶಸ್ಸು ಬಂತೆಂದರೆ, ಕೈಯಲ್ಲಿ ಕಾಸು ಓಡಾಡಲು ಆರಂಭಿಸಿದರೆ ನಿಜ ಬಣ್ಣ ಬಯಲಾಗುತ್ತದೆ. ಹಮ್ಮು-ಬಿಮ್ಮುಗಳು, ದರ್ಪದ ಮಾತುಗಳು, ಯಜಮಾನಿಕೆ ನೀತಿಗಳು ತಲೆಯೆತ್ತುತ್ತವೆ. ದುಡ್ಡಿದ್ದರೆ ಎಲ್ಲವೂ ಸಿಗುತ್ತದೆ. ಹೆಂಡತಿಗಿಂತ ಸುಂದರಿಯಾದ ಹುಡುಗಿ ಕೂಡ ಸಿಗುತ್ತಾಳೆ ಎಂಬ ಸೊಕ್ಕೂ ಕೂಡ ಕಾಣಿಸಿಕೊಳ್ಳುತ್ತದೆ. ಅವಕಾಶ ಸಿಕ್ಕರೆ, ಮನೆ ಯಲ್ಲಿ ತನ್ನನ್ನೇ ಸರ್ವಸ್ವ ಎಂದು ತಿಳಿದುಕೊಂಡಿರುವ, ನಂಬಿರುವ ಹೆಂಡತಿ ಇರುವುದನ್ನು ಮರೆತು 'ಮಲಗು'ತ್ತಾರೆ. ಆದರೆ ತಮ್ಮ ಪತ್ನಿ ಬೇರೆಯವರ ಜತೆ ಸ್ವಲ್ಪ ವಿಶ್ವಾಸದಿಂದ ಮಾತನಾಡಿದರೆ ಸಾಕು, ಚಾರಿತ್ರ್ಯದ ಬಗ್ಗೆ ಸಂಶಯಪಡಲು ಮಾತ್ರ ಹಿಂದುಮುಂದು ನೋಡುವುದಿಲ್ಲ. ವಿವೇಚನೆ ಮಾಡದೆ ಪ್ರಾಣಗಳಂತೆ ವರ್ತಿಸಲೂ ಹಿಂಜರಿಯುವುದಿಲ್ಲ.

ಹೀಗೇಕೆ?

ಇಂತಹ ಧೋರಣೆಯನ್ನ, ಬದ್ಧತೆ ಮತ್ತು ನಿಷ್ಠೆಗಳು ಹೆಣ್ಣಿಗೆ ಮಾತ್ರ ಸೇರಿದ ವಿಷಯಗಳು ಎಂಬ ಮನಃಸ್ಥಿತಿಯನ್ನ ನಾವು ಬಿಡುವುದು ಯಾವಾಗ? ಸಂಬಂಧ ಅನ್ನೋದು ಸೆಕ್ಸ್ ಅನ್ನೋದನ್ನು ಮೀರಿ ಪರಸ್ಪರರ ಮೇಲಿನ ಗೌರವ, ಅಭಿಮಾನ ಮತ್ತು ಪ್ರೀತಿಯ ಮೇಲೆ ನೆಲೆಗೊಂಡಾಗ ಮಾತ್ರ, ಆ ಸಂಬಂಧ ಗಟ್ಟಿಯಾಗಿ ಉಳಿಯಲು ಸಾಧ್ಯ ಎಂಬುದನ್ನು ನಾವು ಅರಿತುಕೊಳ್ಳುವುದೆಂದು? ನೀವೇನೆ ಹೇಳಿ, ಅಮೆರಿಕ, ಬ್ರಿಟನ್ ಮುಂತಾದ ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ 'ಮುಕ್ತ ಸೆಕ್ಸ್' ಇರಬಹುದು. ಆದರೆ ಯಾವತ್ತೂ ಹೆಣ್ಣಿನ ಘನತೆಗೆ ನಮ್ಮಷ್ಟು ಚ್ಯುತಿ ಬಂದಿಲ್ಲ. 16 ವರ್ಷಗಳ ಹಿಂದೆ ಜಾರ್ಜ್ ಬುಷ್ ಕುಡಿಯುತ್ತಿದ್ದರೆಂಬ ವಿಷಯ 2004ರ ಚುನಾವಣೆಯಲ್ಲಿ ದೊಡ್ಡ ವಿವಾದ ಸೃಷ್ಟಿಸುತ್ತದೆ. ಸೆಕ್ಸ್ ವಿಷಯದಲ್ಲಿ ಅತ್ಯಂತ ಮುಕ್ತ ಮನಃಸ್ಥಿತಿ ಹೊಂದಿರುವ ಸಮಾಜ ಅಮೆರಿಕದ್ದಾಗಿದ್ದರೂ, ಮೋನಿಕಾ ಲೆವಿನ್‌ಸ್ಕಿ ಜತೆಗಿನ ಅನೈತಿಕ ಸಂಬಂಧದ ಸಲುವಾಗಿ ಕ್ಲಿಂಟನ್ ವಿರುದ್ಧ ಮಹಾಭಿಯೋಗ ತಂದು ಅಧಿಕಾರದಿಂದ ಕೆಳಗಿಳಿಸಲು ಹಿಂಜರಿಯುವುದಿಲ್ಲ. ಜತೆಗೆ ನಮ್ಮಂತೆ ನಿಷ್ಠೆ, ಬದ್ಧತೆಯೇ ಇಲ್ಲದ ಅಮೀರ್ ಖಾನ್, ಸೈಫ್ ಅಲಿ ಖಾನ್, ಸಂಜಯ್ ದತ್‌ನನ್ನು 'ಆದರ್ಶ' ವ್ಯಕ್ತಿಗಳೆಂದು ಆರಾಧಿಸುವುದಿಲ್ಲ. ಅಂತಹ ಸಂವೇದನಾ ಶೀಲತೆ ನಮ್ಮಲ್ಲಿ ಬರುವುದು ಯಾವಾಗ?

ಕುಟುಂಬದಂತಹ ಮಾದರಿ ಪದ್ಧತಿ, ಅಕ್ಕ-ಅಣ್ಣ-ತಮ್ಮ ಎಂಬ ಬೆಸುಗೆ, ನೆಂಟರಿಷ್ಟರೆಂಬ ಸಂಬಂಧಗಳು ಇರುವುದು ಭಾರತದಲ್ಲಿ ಮಾತ್ರ ಎಂದು ನಾವು ಬಡಾಯಿ ಕೊಚ್ಚಿಕೊಳ್ಳುತ್ತೇವೆ. ಆದರೂ ಎಂಎ, ಎಂಎಸ್ಸಿ, ಎಂಕಾಂ, ಎಂಜಿನಿಯರಿಂಗ್, ಮೆಡಿಕಲ್ ಓದಿದ್ದರೂ ಮದುವೆಯಾದ ನಂತರ ಗಂಡ ಹೇಳಿದಂತೆ ಕೇಳಿಕೊಂಡು, ಸಾಮಾನ್ಯ ಗೃಹಿಣಿಯಾಗಿ ಪಾತ್ರೆ ಉಜ್ಜಿಕೊಂಡು, ಬಟ್ಟೆ ತೊಳೆದುಕೊಂಡು, ಗಂಡನಿಗೆ ಇಷ್ಟವಿಲ್ಲ ಎಂಬ ಕಾರಣಕ್ಕೆ ಉದ್ಯೋಗಕ್ಕೆ ಸೇರಬೇಕು,

ತಾನೂ ದುಡಿಯಬೇಕು ಅನ್ನೋ ಮಹತ್ವಾಕಾಂಕ್ಷೆಯನ್ನೇ ಕತ್ತು ಹಿಸುಕಿ ಸಾಯಿಸಿ, ಸಂಸಾರದಲ್ಲೇ ಸರ್ವಸ್ವವೆಂದು ಕಾಣುವ ಹೆಣ್ಣನ್ನು ನಾವು ಗೌರವದಿಂದ ಕಾಣುವುದೇ ಇಲ್ಲ. ಹೆಂಡತಿ ಅನ್ನೋಳು ಇರುವುದೇ ತನ್ನೆಲ್ಲ 'ಅಗತ್ಯ'ಗಳನ್ನು ಪೂರೈಸುವುದಕ್ಕೆ, 'ಆಸೆ' ಈಡೇರಿಸುವುದಕ್ಕೆ ಎಂಬಂತೆ ದರ್ಪದಿಂದ ನಡೆದುಕೊಳ್ಳುತ್ತೇವೆ. ಆಕೆಗೆ ಹಿಡಿ ಪ್ರೀತಿ ನೀಡುವ ಪ್ರಾಥಮಿಕ ಕರ್ತವ್ಯವನ್ನೂ ನಿರ್ವಹಿಸುವುದಿಲ್ಲ.

ನಮಗೋ, ಮಜಾ ಮಾಡಲು ಬಾರ್‌ಗಳಿವೆ, Short break ಬೇಕೆಂದರೆ ಸಿಗರೇಟು ಸೇದಬಹುದು, ಬೋರಾದರೆ ಬೈಕು, ಕಾರು ಏರಿ ಸ್ನೇಹಿತರನ್ನು ಹುಡುಕಿಕೊಂಡು ಹೋಗಬಹುದು. ಆದರೆ ಹೆಣ್ಣಾದವಳ ಗತಿಯೇನು? ಮದುವೆಗಿಂತ ಮೊದಲು ಅಪ್ಪ-ಅಮ್ಮನ ಹದ್ದುಬಸ್ತು, ಅಣ್ಣ-ತಮ್ಮಂದಿರ ಬೇಲಿ, ಮದುವೆಯ ನಂತರ ಗಂಡನ ಅನುಮತಿಯಿಲ್ಲದೆ ಹೊಸ್ತಿಲಿನಿಂದ ಕಾಲು ತೆಗೆಯುವಂತಿಲ್ಲ. ಮನೆಯಲ್ಲಿರುವ ಟೀವಿ ಎಂಬ ಮೂರ್ಖರ ಪೆಟ್ಟಿಗೆಯೇ ಗತಿ. ಹಿಡಿ ಪ್ರೀತಿಗಾಗಿ ಗಂಡ ಬರುವವರೆಗೂ ಕಾಯಬೇಕು. ಒಂದು ವೇಳೆ ಕುಡಿದು ಬಂದರೆ ಮಾನಸಿಕ ಹಿಂಸೆ ಅನುಭವಿಸಬೇಕು. ದೂರ ಮಲಗುವ ಅವಕಾಶವಿಲ್ಲ. ಚಾರಿತ್ರ್ಯದ ಬಗ್ಗೆಯೇ ಚುಚ್ಚುಮಾತು ಕೇಳಬೇಕಾಗುತ್ತದೆ. ಒಂದು ವೇಳೆ ಸ್ವಲ್ಪ ಧೈರ್ಯಮಾಡಿ ಗಂಡನಂತೆ ತಾನೂ ಒಂದು ಪೆಗ್ ಏರಿಸಿದರೆ ಎಲ್ಲರ ಕಣ್ಣು ಆಕೆಯ ಮೇಲೇ ಇರುತ್ತದೆ. ಜತೆಗೊಂದು ಹಣೆಪಟ್ಟಿಯೂ ಸಿದ್ಧವಾಗಿರುತ್ತದೆ. ಹೀಗೆ ಹೆಣ್ಣಾದವಳು ಎಲ್ಲಿಯವರೆಗೂ ತನ್ನ ಗಂಡನ ಎಲ್ಲ ಅತಿರೇಕಗಳನ್ನು, ದೌರ್ಜನ್ಯಗಳನ್ನು ಸಹಿಸಿಕೊಂಡಿರುತ್ತಾಳೋ ಅಲ್ಲಿಯವರೆಗೂ ಎಲ್ಲವೂ ಸರಿಯಾಗೇ ಇರುತ್ತದೆ. ಪ್ರಶ್ನಿಸಿದ ಕ್ಷಣದಿಂದಲೇ ವಿವಾದ ಆರಂಭವಾಗುತ್ತದೆ.

ಇದನ್ನೆಲ್ಲಾ ಯೋಚಿಸಿದಾಗ ಶಾರುಖ್ ಖಾನ್, ಸಚಿನ್ ತೆಂಡೂಲ್ಕರ್ ನಿಜಕ್ಕೂ ಗ್ರೇಟ್ ಎನಿಸುತ್ತಾರೆ. ಏಕೆಂದರೆ ಸರ್ಕಸ್ ಧಾರಾವಾಹಿಯಲ್ಲಿ ನಟಿಸುತ್ತಿರುವಾಗ ನೆಲೆ ಕಂಡುಕೊಳ್ಳಲು ಹೆಣಗುತ್ತಿದ್ದ ಶಾರುಖ್ ಖಾನ್, ಬಾಲಿವುಡ್‌ನ ಮಹಾನ್ ತಾರೆಯಾಗಿ ಹೊರಹೊಮ್ಮಿದ ನಂತರವೂ ಮೊದಲಿನ ಶಾರುಖ್ ಆಗಿಯೇ ಉಳಿದಿದ್ದಾನೆ. ಬಯಸಿದಾಕೆಯನ್ನು ತನ್ನವಳನ್ನಾಗಿಸಿಕೊಳ್ಳುವ ಸಾಮರ್ಥ್ಯವಿದ್ದರೂ ಇಷ್ಟಪಟ್ಟು ಕೈಹಿಡಿದ ಗೌರಿಗೆ ನಿಷ್ಠನಾಗಿಯೇ ಉಳಿದಿದ್ದಾನೆ. ಅವಕಾಶವಿದೆ ಎಂಬ ಕಾರಣಕ್ಕೆ ಪರಸ್ತ್ರೀ ಜತೆ ಸಂಗ ಬೆಳೆಸುವ ಮಟ್ಟಕ್ಕಿಳಿದಿಲ್ಲ. ಸಚಿನ್ ಕೂಡ ತನಗಿಂತ ಐದು ವರ್ಷ ದೊಡ್ಡವಳಾದ ಅಂಜಲಿ ಮೆಹ್ತಾ ಜತೆ ಮರ್ಯಾದೆಯಿಂದ ಸಂಸಾರ ನಡೆಸುತ್ತಿದ್ದಾನೆ. ಆರಾಧ್ಯದೈವ ಎನಿಸಿದ್ದರೂ ನಡೆದು ಬಂದ ಹಾದಿ ಮರೆತಿಲ್ಲ.

ಆದ್ದರಿಂದಲೇ, ಪ್ರತಿ ಗಂಡಸಿಗೂ ಶಾರುಖ್, ಸಚಿನ್ ಅವರಂತಹವರು ಮಾದರಿ ವ್ಯಕ್ತಿಗಳಾಗುವವರೆಗೂ, ನಮ್ಮ ಮನಃಸ್ಥಿತಿ, ಧೋರಣೆ ಬದಲಾಗುವವರೆಗೂ ಹೆಣ್ಣಿನ ಬವಣೆ

ತಪ್ಪುವುದಿಲ್ಲ, ಸಂಬಂಧಗಳು ಬಲಿಯಾಗುವುದು ನಿಲ್ಲುವುದಿಲ್ಲ.

ಖಂಡಿತಾ "Every relationship comes with an expiry date". ಆದರೆ ಸಂಬಂಧಗಳು ಕಣ್ಣೆದುರಿಗೇ ಕಡಿದು ಹೋಗದಿರಲಿ.





# 20 | ಜಾನ್ ದಯಾಳ್ ಸೆಡ್ರಿಕ್ ಪ್ರಕಾಶ್ ಎಲ್ಲಿದ್ದೀರಿ?

ಜಬುವಾ ಮಧ್ಯಪ್ರದೇಶದಲ್ಲಿದೆ. ಅಲ್ಲೊಂದು ಕ್ರೈಸ್ತ ಕಾನ್ವೆಂಟ್ ಇದೆ. ಆದರ ಆವರಣ ದಲ್ಲೇ ಚರ್ಚ್ ಕೂಡ ಇದೆ. ಹೊತ್ತು ಹಣ್ಣು ಮಾರುವವನ ಮಗಳು ಸುಜಾತಾ. ಅಂದು ಸುಜಾತಾ ಹಣ್ಣು ಮಾರಲು ಬಂದಿದ್ದಳು. ಸನ್ಯಾಸಿನಿಯೊಬ್ಬರಿಂದ ಬಾ ಎಂಬ ಕರೆ. ಆದರೆ ಹಣ್ಣು ಮಾರಲು ಹೋದ ಸುಜಾತಾ ಕಾನ್ವೆಂಟ್‌ನಿಂದ ಹೊರಬಂದದ್ದು ಹೆಣವಾಗಿ!

2004, ಜನವರಿ 11ರಂದು ಒಂಬತ್ತು ವರ್ಷದ ಹಸುಳೆ ಸುಜಾತಾಳ ಮೇಲೆ ಅತ್ಯಾಚಾರವೆಸಗಿ ಕೊಲೆ ಮಾಡಲಾಗಿದೆ! ಆದರೆ ಕೇವಲ ನಾಲ್ಕು ವರ್ಷಗಳ ಹಿಂದೆ ಇದೇ ಜಬುವಾದಲ್ಲಿ ಮೂವರು ಕ್ರೈಸ್ತ ಸನ್ಯಾಸಿನಿಯರ ಮೇಲೆ ಅತ್ಯಾಚಾರ ನಡೆದಾಗ ಬೊಬ್ಬೆ ಹಾಕಿದ್ದ ಬುದ್ಧಿಜೀವಿಗಳು, ಇಂಗ್ಲಿಷ್ ಪತ್ರಿಕೆಗಳು ಮತ್ತು ಅಮೆರಿಕದ ಸೆಂಟರ್ ಫಾರ್ ರಿಲೀಜಿಯಸ್ ಫ್ರೀಡಂ ಈಗ ತುಟಿ ಬಿಚ್ಚುತ್ತಿಲ್ಲವೇಕೆ? ತಮಿಳುನಾಡು ಸರಕಾರ ಮತಾಂತರ ನಿಷೇಧ ಕಾಯಿದೆ ಜಾರಿಗೆ ತಂದಾಗ, ಧಾರ್ಮಿಕ ಸ್ವಾತಂತ್ರ್ಯದ ಮಾತನಾಡಿದ್ದ ಪೋಪ್ ಜಾನ್‌ಪಾಲ್‌ಗೆ ಸ್ವಧರ್ಮೀಯರು ಮಾಡಿರುವ ಹೀನ ಕೃತ್ಯ ಕಾಣುತ್ತಿಲ್ಲವೇ?

ಸುಜಾತಾಳ ಮೇಲೆ ಅತ್ಯಾಚಾರ ನಡೆದಿದ್ದರೂ, ಕೊಲೆಯಾಗಿದ್ದರೂ ಇದುವರೆಗೂ ಯಾರೂ ತನಿಖೆಗೆ ಆಗ್ರಹಿಸಿಲ್ಲ, ಪೋಪ್ ಜಾನ್‌ಪಾಲ್ ಪ್ರಶ್ನಿಸಿಲ್ಲ, ಬುದ್ಧಿಜೀವಿಗಳು ಖಂಡಿಸಿಲ್ಲ. ಆದರೆ ಇಂಗ್ಲಿಷ್ ಪತ್ರಿಕೆಗಳು ಸುಜಾತಾ ಕೊಲೆಯ ನಂತರ ಜನವರಿ 16ರಂದು ಭುಗಿಲೆದ್ದ ಹಿಂಸಾಚಾರವನ್ನು ವೈಭವೀಕರಿಸುತ್ತಿವೆ. ಕೆಲವರಿಗೆ 'ಹಿಂದೂ ಮೂಲಭೂತವಾದಿ'ಗಳೆಂಬ ಹಣೆಪಟ್ಟಿ ಕಟ್ಟುತ್ತಿವೆ. ಆದರೆ ಸುಜಾತಾಳ ಜೀವಕ್ಕೆ, ಮಾನಕ್ಕೆ ಬೆಲೆಯಿಲ್ಲವೇ? ಆಕೆ ಹಿಂದೂವೆಂಬ ಕಾರಣಕ್ಕೆ ಎಲ್ಲರೂ ಮೌನ ತಳೆದಿದ್ದಾರೆಯೇ?

ಕ್ರೈಸ್ತ ಧರ್ಮದ ಕಟ್ಟಾ ಪ್ರತಿಪಾದಕರು, ಸಮರ್ಥಕರೂ ಆದ ಜಾನ್ ದಯಾಳ್, ಸಜನ್ ಜಾರ್ಜ್, ಸೆಡ್ರಿಕ್ ಪ್ರಕಾಶ್, ವಾಲ್ಸನ್ ಥಂಪೂ, ವಿಶಾಲ್ ಮಂಗಳ್‌ವಾಡಿ ಎಲ್ಲಿದ್ದಾರೆ? ವಿಷಯ ಗೊತ್ತಾಗಿಲ್ಲವೆ? ಸುಜಾತಾಳ ಆರ್ತನಾದ ಕೇಳಿಸಿಲ್ಲವೆ? ಚರ್ಚ್ ಆವರಣದಲ್ಲೇ ಅತ್ಯಾಚಾರವಾಗಿದ್ದರೂ, ಕೊಲೆಯಾಗಿದ್ದರೂ ಇವರೇಕೆ ಬಾಯ್ಬಿಡುತ್ತಿಲ್ಲ? ಅತ್ಯಾಚಾರ ಮಾಡಿದ ವರು ಮಿಷನರಿಗಳು ಎಂಬ ಕಾರಣವೇ?

ಗ್ರಹಾಂ ಸ್ಟೇನ್ಸ್ ಮತ್ತು ಆತನ ಪುತ್ರರಾದ ಫಿಲಿಪ್ ಹಾಗೂ ತಿಮೋತಿ ಹತ್ಯೆಯ ಬಗ್ಗೆ ಇಂದಿಗೂ ಮಾಧ್ಯಮಗಳಲ್ಲಿ ಉಲ್ಲೇಖವಾಗುತ್ತದೆ. ವಿಚಾರ ಸಂಕಿರಣಗಳಲ್ಲಿ ಚರ್ಚೆಯಾಗುತ್ತದೆ. ಅಂದರೆ ಬಿಳಿ ಚರ್ಮಕ್ಕೆ ಬೆಲೆ ಹೆಚ್ಚೇ? ಅಥವಾ ಅಲ್ಪಸಂಖ್ಯಾತರ ಜೀವಕ್ಕೆ ಮಾತ್ರ ಬೆಲೆಯಿದೆಯೇ? ಸೆಪ್ಟೆಂಬರ್ 11ರ ದಾಳಿಯ ನಂತರ ಅಮೆರಿದಲ್ಲಿ ನಡೆದ ಜನಾಂಗೀಯ ಹಿಂಸಾಚಾರದಲ್ಲಿ ಒಂದು ಡಜನ್‌ಗೂ ಅಧಿಕ ಸಿಖ್ಖರನ್ನು ಹತ್ಯೆಗೈಯ್ಯಲಾಗಿದೆ. ಮಿಸಿಸಿಪ್ಪಿಯಲ್ಲಿ ಕೊಲೆಯಾದ ಚರಣ್‌ಜಿತ್ ಸಿಂಗ್ ಎಸ್. ಔಜ್ಲಾ ಹೆಸರು ಯಾರಿಗೂ ಗೊತ್ತಿಲ್ಲ. ಆದರೆ ಸ್ಟೇನ್ಸ್ ಎಂಬ ಮಿಷನರಿಯ ಹೆಸರು

ಹೇಳಿದರೆ ಎಲ್ಲರ ಕಿವಿ ನೆಟ್ಟಗಾಗುತ್ತವೆ. ಕ್ರೈಸ್ತ ಮಿಷನರಿಗಳ ಮೇಲೆ ನಡೆಯುವ ದಾಳಿಗಳ ಬಗ್ಗೆ ಎಲ್ಲರೂ ಹರಿಹಾಯುತ್ತಾರೆ. ಗುಜರಾತ್ ಹಿಂಸಾಚಾರದ ಬಗ್ಗೆ ಗದ್ಗದಿತರಾಗಿ ಮಾತನಾಡುತ್ತಾರೆ. ಆದರೆ ಕ್ರೈಸ್ತ ಮಿಷನರಿಗಳ ಉಪಟಳ ಮತ್ತು ಬಲಾತ್ಕಾರದಿಂದಾಗಿ ಮಿಜೋರಾಮ್‌ನಿಂದ ಹೊರಹಾಕಲ್ಪಟ್ಟ 45 ಸಾವಿರ ಹಿಂದೂ ಬುಡಕಟ್ಟು ಜನಾಂಗದವರ ಬಗ್ಗೆ ಯಾರೂ ಮಾತನಾಡುವುದಿಲ್ಲ. ಇಂದಿಗೂ ಅವರು ತ್ರಿಪುರಾ ಮತ್ತು ಮಣಿಪುರದಲ್ಲಿರುವ ನಿರಾಶ್ರಿತರ ಶಿಬಿರಗಳಲ್ಲಿ ಕಾಲತಳ್ಳುತ್ತಿದ್ದಾರೆ. ಅವರಲ್ಲೂ ನೋವುಗಳಿವೆ, ಅವರ ಮೇಲೂ ಅತ್ಯಾಚಾರ, ಹಿಂಸೆ, ದೌರ್ಜನ್ಯ ನಡೆದಿದೆ. ಆದರೆ ನಮ್ಮ ಮಾಧ್ಯಮಗಳಿಗೆ ಇದಾವುದೂ ಸುದ್ದಿಯಲ್ಲ, ಗಂಭೀರ ಘಟನೆ ಎನಿಸುವುದಿಲ್ಲ. ಏಕೆಂದರೆ ಹಿಂದೂಗಳ ಜೀವಕ್ಕೆ ಬೆಲೆಯಿಲ್ಲ. ಜತೆಗೆ ರಾಜಕೀಯ ಪಕ್ಷಗಳಂತೆ ನಮ್ಮ ಮಾಧ್ಯಮಗಳೂ ಅನುಕೂಲಸಿಂಧು 'ಜಾತ್ಯತೀತ' ನಿಲುವು ತಳೆದಿವೆ.

ಕ್ಲಿಂಟನ್ ಭಾರತಕ್ಕೆ ಭೇಟಿ ನೀಡಿದಾಗ ಛತ್ತಿಸಿಂಗ್‌ಪುರದಲ್ಲಿ ಭಯೋತ್ಪಾದಕರು 55 ಸಿಖ್ಖರನ್ನು ಬರ್ಬರವಾಗಿ ಕೊಲೆಗೈದಿದ್ದರು. ಆದರೆ ಆ ಘಟನೆ ಯಾರಿಗೂ ನೆನಪಿಲ್ಲ. ಏಕೆಂದರೆ ಮಾಧ್ಯಮಗಳು ನೆನಪು ಮಾಡಿಕೊಡುತ್ತಿಲ್ಲ. 1999, ಫೆಬ್ರುವರಿ 14ರಂದು ಜಮ್ಮು-ಕಾಶ್ಮೀರದ ಉಧಮ್‌ಪುರ್ ಜಿಲ್ಲೆಯಲ್ಲಿ ಅಶೋಕ್ ಸಿಂಗ್, ಮಾಯಾದೇವಿ, ಮೊಹಿಂದರ್ ಸಿಂಗ್ ಮತ್ತು ಇಂದರ್‌ಸಿಂಗ್ ಎಂಬ ಹಸುಳೆಗಳನ್ನು ಭಯೋತ್ಪಾದಕರು ಬಲಿತೆಗೆದುಕೊಂಡಿದ್ದರು. ಆದರೆ ನಮಗೆ ನೆನಪಾಗುವುದು ಗ್ರಹಾಂ ಸ್ಟೇನ್ಸ್ ಮಕ್ಕಳಾದ ಫಿಲಿಪ್ ಮತ್ತು ತಿಮೋತಿ ಮಾತ್ರ!

1999, ಫೆಬ್ರುವರಿ 19ರಂದು ಕಾಶ್ಮೀರದಲ್ಲಿ 20 ಹಿಂದೂಗಳನ್ನು ಬರ್ಬರವಾಗಿ ಕೊಲ್ಲಲಾಯಿತು. ಆದರೆ ಜಾತ್ಯತೀತವಾದಿಗಳಾದ ಶಬನಾ ಆಜ್ಮಿ, ತೀಸ್ತಾ ಸೆತ್‌ಲ್ವಾಡ್ ಅಥವಾ ಅಸ್ಗರ್ ಅಲಿ ಎಂಜನಿಯರ್ ದಿಗ್ಭ್ರಮೆ ವ್ಯಕ್ತಪಡಿಸಲಿಲ್ಲ! ಏಕೆ? ಕೊಲೆಯಾಗಿದ್ದು ಹಿಂದೂಗಳು ಎಂಬ ಕಾರಣವೇ? 1999ರ ಜನವರಿಯಲ್ಲಿ ಕ್ರೈಸ್ತ ಯುವತಿ ಮತ್ತು ಆಕೆಯ ಸಹೋದರನನ್ನು ಅರಣ್ಯವೊಂದರಲ್ಲಿ ಹತ್ಯೆಗೈಯ್ಯಲಾಯಿತು. ಇದು ಕ್ರೈಸ್ತರ ಮೇಲೆ ದುರುಳ ಹಿಂದೂಗಳು ನಡೆಸಿದ ದೌರ್ಜನ್ಯ ಎಂದೇ ಕೂಗಾಡಿದರು. ಆದರೆ ಆ ಮಕ್ಕಳ ಚಿಕ್ಕಪ್ಪನೇ ಕೊಲೆಗಡುಕ ಎಂಬ ಸತ್ಯ ವಾರ ಕಳೆಯುವಷ್ಟರಲ್ಲಿ ಬಹಿರಂಗವಾಯಿತು. 1999ರ ಅಕ್ಟೋಬರ್‌ನಲ್ಲಿ ಮಧ್ಯಪ್ರದೇಶದ ಜಬುವಾದಲ್ಲಿ ಮೂವರು ಕ್ರೈಸ್ತ ಸನ್ಯಾಸಿನಿಯರ ಮೇಲೆ ಅತ್ಯಾಚಾರವೆಸಗಿದಾಗಲೂ ಹಿಂದೂ ಮೂಲಭೂತವಾದಿಗಳ ಮೇಲೆ ಗೂಬೆ ಕೂರಿಸುವ ಪ್ರಯತ್ನ ನಡೆಯಿತು. ಆದರೆ ಅತ್ಯಾಚಾರವೆಸಗಿದ ಬ್ಹಿಲಾ ಬುಡಕಟ್ಟು ಜನಾಂಗದವರು ಮತಾಂತರಗೊಂಡ ಕ್ರೈಸ್ತರೇ ಆಗಿದ್ದರು!

ಮಿಷನರಿಗಳ ಕಾಮತೃಷೆಗೆ ಸ್ವಧರ್ಮೀಯರೂ ಬಲಿಯಾಗಿದ್ದಾರೆ!

ಕೊಟ್ಟಾಯಂ ಜಿಲ್ಲೆ ಕೇರಳದಲ್ಲಿದೆ. ಕೂಲಿಕಾರ ಎಂ. ಥಾಮಸ್ ಅವರ ಮಗಳು ಸಿಸ್ಟರ್

ಅಭಯ. ಆಕೆಗೆ 21 ವರ್ಷ. ಕೊಟ್ಟಾಯಂನಲ್ಲೇ ಇರುವ ಬಿಸಿಎಂ ಕಾಲೇಜಿನಲ್ಲಿ ದ್ವಿತೀಯ ಪಿಯುಸಿ ವ್ಯಾಸಂಗ ಮಾಡುತ್ತಿದ್ದಳು. ಅಲ್ಲೊಂದು ಸೈಂಟ್ ಪಿಯೂಸ್ ಎಂಬ ಕಾನ್ವೆಂಟ್ ಇದೆ. ಮಹಿಳೆಯರಿಗೆ ಬೋರ್ಡಿಂಗ್ ಹಾಗೂ ಲಾಡ್ಜಿಂಗ್ ವ್ಯವಸ್ಥೆಯೂ ಅಲ್ಲಿದೆ. ಸಿಸ್ಟರ್ ಅಭಯ ಕೂಡ ಅಲ್ಲೇ ತಂಗಿದ್ದರು. ಅಂದು 1992 ಮಾರ್ಚ್ 27ರ ರಾತ್ರಿ. ಸಿಸ್ಟರ್ ಅಭಯ ಏಕಾಏಕಿ ಕಣ್ಮರೆಯಾದರು. ಮರುದಿನ ಬೆಳಗ್ಗೆ ಕಾನ್ವೆಂಟ್‌ನ ಬಾವಿಯಲ್ಲಿ ಹೆಣ ಸಿಕ್ಕಿತು. ಆಕೆಯ ಕೊಲೆಯಾಗಿತ್ತು. ಅದಕ್ಕಿಂತ ಮೊದಲು ಅತ್ಯಾಚಾರವೆಸಗಲಾಗಿತ್ತು. ಆದರೆ ಬಾವಿಯ ಸುತ್ತ ನೆರೆದ ಸನ್ಯಾಸಿನಿಯರು ಹೊಸ ಕಥೆ ಕಟ್ಟಿದರು. ಮಾನಸಿಕ ಅಸ್ವಸ್ಥತೆಯಿಂದಾಗಿ ಅಭಯ ಆತ್ಮಹತ್ಯೆ ಮಾಡಿಕೊಂಡಿದ್ದಾರೆಂದು ವ್ಯಾಖ್ಯಾನ ಮಾಡಿದರು.

ಇತ್ತ ಕಿತ್ತು ತಿನ್ನುತ್ತಿದ್ದ ಬಡತನದಿಂದಾಗಿ ಸಿಸ್ಟರ್ ಅಭಯ ಅಪ್ಪ ಥಾಮಸ್‌ಗೆ ಅಸಹಾಯಕತೆ ಯಿಂದ ಕೈಚೆಲ್ಲದೆ ಬೇರೆ ಮಾರ್ಗವೇ ಇರಲಿಲ್ಲ. ಆದರೆ ಅದು ಆತ್ಮಹತ್ಯೆಯಲ್ಲ, ಕೊಲೆ ಎಂದು ಬಲವಾಗಿ ನಂಬಿದ ಜನರೆಲ್ಲ ಒಟ್ಟುಗೂಡಿ 1992, ಮಾರ್ಚ್ 31ರಂದು 'ಕ್ರಿಯಾ ಸಮಿತಿ' ಯೊಂದನ್ನು ಕಟ್ಟಿಕೊಂಡರು. ರಾಜ್ಯದ ಮುಖ್ಯಮಂತ್ರಿ, ಪ್ರಧಾನಿ, ರಾಷ್ಟ್ರಪತಿ, ಹೈಕೋರ್ಟ್‌ನ ಮುಖ್ಯ ನ್ಯಾಯಾಧೀಶ ಮತ್ತು ಪೊಲೀಸ್ ಮಹಾ ನಿರ್ದೇಶಕರಿಗೆ ಮೊರೆಯಿಡುವ ಮೂಲಕ ಕೂಡಲೇ ತನಿಖೆ ನಡೆಸಿ, ಅಪರಾಧಿಗಳನ್ನು ಶಿಕ್ಷಿಸಬೇಕೆಂದು ಒತ್ತಾಯಿಸಿದರು. ಆದರೆ ತನಿಖೆ ನಡೆಸಿದ ಸ್ಥಳೀಯ ಪೊಲೀಸರು 'ಕಾರಣ' ತಿಳಿಯದೆ ಕೈಚೆಲ್ಲಿದರು. ಅನಂತರ ತನಿಖೆ ಕೈಗೆತ್ತಿಕೊಂಡ ಕೇರಳ ರಾಜ್ಯ ಅಪರಾಧ ದಳ ತನ್ನ ವರದಿಯಲ್ಲಿ ಅಭಯ 'ಆತ್ಮಹತ್ಯೆ' ಮಾಡಿಕೊಂಡಿದ್ದಾರೆ ಎಂದಿತು!

ಆದರೆ ಕ್ರಿಯಾ ಸಮಿತಿ ಸತ್ಯವನ್ನು ಬಯಲುಗೊಳಿಸುವ ತನ್ನ ಪಟ್ಟನ್ನು ಬಿಡಲಿಲ್ಲ. ಕೇರಳ ಹೈಕೋರ್ಟ್ ಮೊರೆಹೋಯಿತು. ಹೈಕೋರ್ಟ್ ಆದೇಶದ ಮೇರೆಗೆ 1993, ಮಾರ್ಚ್ 29ರಂದು ಸಿಬಿಐ ತನಿಖೆ ಆರಂಭಿಸಿತು. ಸಿಬಿಐನ ಮಹಾ ಅಧೀಕ್ಷಕ ವರ್ಗಿಸ್ ಪಿ. ಥಾಮಸ್ ತನಿಖೆಯ ಮುಂದಾಳತ್ವ ವಹಿಸಿದರು. ಆದರೆ ತನಿಖೆ ಮುಗಿಯುವ ಮೊದಲೇ 1993, ಡಿಸೆಂಬರ್ 30ರಂದು ತಮ್ಮ ಹುದ್ದೆಗೆ ರಾಜೀನಾಮೆ ನೀಡಿದರು! ತಮ್ಮ ಸಾಧನೆಗಾಗಿ ರಾಷ್ಟ್ರಪತಿ ಪದಕ ಪಡೆದಿದ್ದ ಪ್ರಾಮಾಣಿಕ ಅಧಿಕಾರಿ ವರ್ಗಿಸ್ ಪಿ. ಥಾಮಸ್ ರಾಜೀನಾಮೆ ನೀಡಿದ್ದೇಕೆ? ಅಭಯ ಆತ್ಮಹತ್ಯೆ ಮಾಡಿಕೊಂಡಿದ್ದಾರೆಂದು ವರದಿ ನೀಡುವಂತೆ ಸಿಬಿಐನ ಕೊಚ್ಚಿ ವಿಭಾಗದ ಮುಖ್ಯಸ್ಥರಾಗಿದ್ದ ವಿ. ತ್ಯಾಗರಾಜನ್ ಸೂಚನೆ ನೀಡಿದ್ದರು. ಥಾಮಸ್ ಬೇಸತ್ತು ರಾಜೀನಾಮೆ ನೀಡುವ ಮೊದಲು ಅಭಯ ಅವರ ಕೊಲೆ ನಡೆದಿದೆ ಎಂದು ಸಿಬಿಐ ಡೈರಿಯಲ್ಲಿ ದಾಖಲಿಸಿದರು. ಇದಾದ ನಂತರ ಕೋರ್ಟ್ ಆದೇಶದ ಮೇರೆಗೆ ತ್ಯಾಗರಾಜನ್ ಅವರನ್ನು ಚೆನ್ನೈ ವಿಭಾಗಕ್ಕೆ ವರ್ಗಾವಣೆ ಮಾಡಲಾಯಿತು. ಇತ್ತ ಅಭಯ ಕೊಲೆ ಬಗ್ಗೆ ಐದು ಬಾರಿ ಸಿಬಿಐ ತನಿಖೆಯಾಯಿತು. ಪ್ರತಿ ತನಿಖೆಯಲ್ಲೂ ಕೊಲೆ ಎಂಬ ನಿರ್ಧಾರಕ್ಕೆ ಬರಲಾಯಿತು. ಈ ಎಲ್ಲ ಘಟನೆ ನಡೆದು 12 ವರ್ಷಗಳಾಗಿದ್ದರೂ ಯಾರನ್ನೂ ಬಂಧಿಸಿಲ್ಲ, ಶಿಕ್ಷಿಸಿಲ್ಲ.

ತಮ್ಮ ಬಣ್ಣ ಬಯಲಾಗದಂತೆ ತಡೆಯಲು ವ್ಯವಸ್ಥೆಯ ಮೇಲೆ ಸವಾರಿ ಮಾಡುವ, ಅತ್ಯುನ್ನತ ಅಧಿಕಾರಿಗಳನ್ನೇ ಬುಟ್ಟಿಗೆ ಹಾಕಿಕೊಳ್ಳುವ ಚರ್ಚ್ ಮತ್ತು ಮಿಷನರಿಗಳ ಪ್ರಭಾವ ಎಷ್ಟಿರಬಹುದು ನೀವೇ ಊಹಿಸಿ? ಇಂತಹ ತಾಕತ್ತಿನಿಂದಾಗಿಯೇ ಮಿಷನರಿಗಳು ಇಡೀ ಮಿಜೋರಾಮ್ ರಾಜ್ಯವನ್ನು ಕ್ರೈಸ್ತಮಯವಾಗಿಸಿದ್ದಾರೆ. ನಾಗಾಲ್ಯಾಂಡ್, ಅರುಣಾಚಲ, ಮೇಘಾಲಯಗಳಲ್ಲಿ ಕ್ರೈಸ್ತರು ಬಹುಸಂಖ್ಯಾತರಾಗಿದ್ದಾರೆ. ಜಾರ್ಖಂಡ್ ಮತ್ತು ಛತ್ತೀಸ್‌ಗಢಗಳೂ ಮಿಜೋರಾಮ್ ಹಾದಿ ಹಿಡಿದಿವೆ!

ಇನ್ನು, ದಾರಾಗೆ ಗಲ್ಲಾದಾಗ ಎಲ್ಲರೂ ಖುಷಿಪಟ್ಟರು, ನ್ಯಾಯಾಂಗದ ಬೆನ್ನುತಟ್ಟಿದರು. ದಾರಾಗೇನೋ ಗಲ್ಲಾಯಿತು, ಆದರೆ ಸುಜಾತಾ ಕೊಲೆಗಾರರಿಗೆ?

ಇತ್ತೀಚೆಗೆ 'ಬೆತ್ತಲೆ ಜಗತ್ತು' ಅಂಕಣದಲ್ಲಿ ಪ್ರಕಟವಾಗುವ ಪ್ರತಾಪ್ ಸಿಂಹರ ಲೇಖನಗಳು ಒಂದು ನಿರ್ದಿಷ್ಟ ಧರ್ಮದ ವಿರುದ್ಧವಾಗುತ್ತಿವೆ. ಅವರ ಮೊದಲಿನ ಲೇಖನಗಳು ನ್ಯಾಯದಿಂದ ಕೂಡಿರುತ್ತಿದ್ದವು. ಅವರ ಭಾವಚಿತ್ರ ಬದಲಾದಂತೆ ಲೇಖನಗಳೂ ಬದಲಾಗಿವೆ. ಇದರಿಂದ ಮನಸ್ಸಿಗೆ ಬಹಳ ನೋವಾಗುತ್ತಿದೆ. ನನ್ನ ಈ ಮನವಿಯನ್ನು ಪುರಸ್ಕರಿಸಿ ಯಾವುದೇ ಪಕ್ಷಪಾತ ಮಾಡದೆ, ವಿಚಾರಯುತ ಲೇಖನಗಳನ್ನು ಪ್ರಕಟಿಸಿ.

ಎಫ್.ಎಂ. ಹವಾಲ್ದಾರ್
ಬೆಳಗಾವಿ



The Times of India
April 20, 1998

[illegible]

# 21 ಕಂಬನಿಯ ನಾಲ್ಕು ಹನಿ ಉದುರಲಿ ಕೊನೆಪಕ್ಷ ನಾಚಿಕೆಯಾದರೂ ಆಗಲಿ!

ಅಂದು ದುಃಖ ಉಮ್ಮಳಿಸಿ ಬಂದಿತ್ತು!

ಜಮ್ಮು ಬಳಿ ನಿರಾಶ್ರಿತರ ಶಿಬಿರವೊಂದಿದೆ. ಸುಮಾರು 3 ಲಕ್ಷ ಕಾಶ್ಮೀರಿ ಪಂಡಿತರು ಸ್ವಂತ ನೆಲದಲ್ಲೇ ಪರಕೀಯರಾಗಿ ಬದುಕು ಸವೆಸುತ್ತಿದ್ದಾರೆ. ಕಳೆದ ತಿಂಗಳು ಭಾರತ ಪ್ರವಾಸ ಕೈಗೊಂಡಿದ್ದ 16 ಜನ ಪಾಕಿಸ್ತಾನಿ ಪತ್ರಕರ್ತರು ಅಂದು ಆಗಮಿಸಿದ್ದರು. ಪಂಡಿತರಿಗೆ ದುಃಖವನ್ನು ತಡೆದುಕೊಳ್ಳಲಾಗಲಿಲ್ಲ. ತಮ್ಮ ಅತಂತ್ರ ಸ್ಥಿತಿಗೆ ಕಾರಣವಾಗಿರುವ ಶತ್ರುರಾಷ್ಟ್ರದ ಪತ್ರಕರ್ತರು ಎಂಬುದನ್ನೇ ಮರೆತ ಅವರು, 'ಭಯೋತ್ಪಾದನೆಯನ್ನು ನಿಲ್ಲಿಸುವಂತೆ ದಯವಿಟ್ಟು ನಿಮ್ಮ ದೇಶಕ್ಕೆ ತಿಳಿಹೇಳಿ. ಕಾಶ್ಮೀರಕ್ಕೆ ಮರಳಲು ಅವಕಾಶ ಮಾಡಿಕೊಡಿ' ಎಂದು ಅಂಗಲಾಚಿದರು, ದಯಾ ಭಿಕ್ಷೆ ಕೇಳಿದರು, ಗೋಗರೆದರು.

ಹಾಗಂತ 104 ಕೋಟಿ ಭಾರತೀಯರಾದ ನಾವೂ ಕಣ್ಣೀರು ಸುರಿಸಬೇಕಾದ ಅಗತ್ಯವಿಲ್ಲ. ಆದರೆ ನಾಚಿಕೆಯಿಂದ, ಅವಮಾನದಿಂದ ತಲೆತಗ್ಗಿಸಲೇಬೇಕು! ಮನೆ-ಮಠ ಕಳೆದುಕೊಂಡು ನಿರಾಶ್ರಿತರಾಗಿರುವ ಹಿಂದೂಗಳು ಶತ್ರುರಾಷ್ಟ್ರದ ಮುಂದೆ ಕೈಚಾಚುವಂತಹ ಪರಿಸ್ಥಿತಿಯನ್ನು ತಂದಿಟ್ಟವರಾರು? ಜಗತ್ತಿನಲ್ಲಿಯೇ ಮೂರನೇ ಅತಿ ದೊಡ್ಡ ಸೇನೆಯನ್ನು ಹೊಂದಿದ್ದರೂ ಷಂಡತನ ತೋರುತ್ತಿರುವವರಾರು? ಒಟ್ಟು 7 ಲಕ್ಷ ಜನ ಹಿಂದೂಗಳು ಕಳೆದ 14 ವರ್ಷಗಳಿಂದ ನಿರಾಶ್ರಿತರ ಶಿಬಿರಗಳಲ್ಲಿ ನರಕಯಾತನೆ ಅನುಭವಿಸುತ್ತಿದ್ದರೂ ಕಣ್ಣು-ಕಿವಿ ಮುಚ್ಚಿಕೊಂಡಿರುವವರಾರು? ಈ ದೇಶದ ಜನರ ಮಾನ-ಪ್ರಾಣ ರಕ್ಷಣೆ ಮಾಡಬೇಕಾದವರಾರು?

ನಾವೇ ಅಲ್ಲವೇ?

ಪ್ಯಾಲೆಸ್ತೀನಿಯರ ಹಕ್ಕುಗಳ ಬಗ್ಗೆ ಮಾತನಾಡುವ ನಾವು, ತಾಲಿಬಾನ್ ನಡೆಸುತ್ತಿದ್ದ ದೌರ್ಜನ್ಯದ ಬಗ್ಗೆ ಕೂಗಾಡುವ ನಾವು, ನಮ್ಮ ನೆಲದಲ್ಲೇ ನಿರಾಶ್ರಿತರಾಗಿರುವ ಪಂಡಿತರ ಬಗ್ಗೆ ಎಂದಿಗೂ ಚಿಂತಿಸುವುದಿಲ್ಲ. ಹಾಗಾಗಿಯೇ ನಿರಾಶ್ರಿತರ ನೋವು, ಹತಾಶೆ, ಅತಂತ್ರ ಬದುಕು ನಮಗೆ ಅರ್ಥವಾಗುವುದೇ ಇಲ್ಲ.

ಪ್ರೊ. ಕನ್ಹಯ್ಯ ಲಾಲ್ ಗಂಜೂ
ಶ್ರೀಮತಿ ಪ್ರಾಣಾ ಗಂಜೂ
ಪ್ರಿನ್ಸಿ
ಅನಿಲ್ ಭಾನ್
ಅಶ್ವನಿ ಕುಮಾರ್ ಗರ್ಯಾಲಿ......!

ಇವರೆಲ್ಲ ಯಾರು? ಖಂಡಿತಾ ನಿಮ್ಮಿಂದ ಉತ್ತರ ಬಯಸುತ್ತಿಲ್ಲ. ಏಕೆಂದರೆ ಇವರಾರೂ ರಾಜಕಾರಣಿಗಳಲ್ಲ, 'ಥೈ ತಕ' ಕುಣಿಯುವ ನಟ-ನಟಿಯರೂ ಅಲ್ಲ, ಟೀವಿ ಕ್ಯಾಮರಾಗಳ ಮುಂದೆ ಕುಳಿತು ಬೋಧನೆ ನೀಡುವ ಪತ್ರಕರ್ತರೂ ಅಲ್ಲ, ಕ್ರೀಡಾ ತಾರೆಗಳಂತೂ ಖಂಡಿತಾ

ಅಲ್ಲ. ಎಷ್ಟೇ ಆಗಲಿ, ನಮಗೆ ಗೊತ್ತಿರೋದು ಲೇಖನಿಯನ್ನು ತುಕ್ಕು ಹಿಡಿಯಲು ಬಿಟ್ಟು ಮೈಕು ಕೈಗೆತ್ತಿಕೊಂಡಿರುವ ಅನಂತಮೂರ್ತಿ, ಗಿರೀಶ್ ಕಾರ್ನಾಡ್. ಯೂನಿವರ್ಸಿಟಿ ಛೇಂಬರ್‌ಗಳಲ್ಲಿ ತೂಕಡಿಸಿ, ವಿದ್ಯಾರ್ಥಿಗಳಿಗೆ ಉಪದ್ರವ ಕೊಟ್ಟು ಮಾಸಾಂತ್ಯಕ್ಕೆ ಪಗಾರ ಎಣಿಸುವ ಕಮ್ಯುನಿಸ್ಟ್ ಪ್ರೊಫೆಸರ್‌ಗಳು. ಸ್ವಯಂ ಸೇನಾ ಸಂಘಟನೆ(ಎನ್‌ಜಿಒ) ಎಂಬ ಹೆಸರಿನಲ್ಲಿ 'ವೈಟ್ ಕಾಲರ್' ದಂಧೆ ನಡೆಸುತ್ತಿರುವ, ದೇಶದ ಮಾನ ಹರಾಜು ಹಾಕಿ ಡಾಲರ್‌ನಲ್ಲಿ ಹಣಗಳಿಸುತ್ತಿರುವ ತೀಸ್ತಾ ಸೆತಲ್ವಾಡ್‌ಗಳು, ಸೆಲೆಬ್ರಿಟಿಗಳು, ಸೋಷಿಯಲೈಟುಗಳು ಮತ್ತು ಇತಿಹಾಸದ 'ದುರ್ಗಂಧ' ಮಾತ್ರ ಗೊತ್ತಿರುವ ರೋಮಿಲ್ಲಾ ಥಾಪರ್, ಪ್ರೊ. ಗ್ರೆವಾಲ್‌ಗಳು ಮಾತ್ರ.

ವಸ್ತುಃಸ್ಥಿತಿ ಹೀಗಿರುವಾಗ ನಿಮ್ಮಿಂದ ಉತ್ತರ ಬಯಸುವುದಾದರೂ ಹೇಗೆ? ಹಾಗಾಗಿಯೇ ಗಂಜೂ, ಪ್ರಾಣಾ ಗಂಜೂ, ಪ್ರಿನ್ಸಿ, ಅನಿಲ್ ಭಾನ್, ಗರ್ಯಾಲಿ ಇವರೆಲ್ಲ ಕೊಲೆಯಾಗಿ ಎಂದೋ ಇತಿಹಾಸದ ಕಸದ ತೊಟ್ಟಿ ಸೇರಿದ್ದಾರೆ! ನಮ್ಮಣ್ಣಗಲಿ ಎಷ್ಟೋ ತಿಂಗಳುಗಳೇ ಕಳೆದಿವೆ. ಆದರೆ ತಮ್ಮ ಹೆಂಡತಿ-ಮಕ್ಕಳು, ಅಪ್ಪ-ಅಮ್ಮಂದಿರ ಎದೆಯಾಳದಲ್ಲಿ ಇಂದಿಗೂ ಜೀವಂತವಾಗಿದ್ದಾರೆ. ದೇಹ ಮಣ್ಣು ಸೇರಿರಬಹುದು. ಆದರೆ ಪ್ರೀತಿಯಿಂದ ಮೈದಡವಿದ ಮಧುರ ನೆನಪುಗಳನ್ನು, ಅಕ್ಕರೆಯ ಸಿಹಿ ಮಾತುಗಳನ್ನು, ಮೌಲ್ಯ, ಬದ್ಧತೆಗಳನ್ನು ಇಲ್ಲೇ ಬಿಟ್ಟು ಹೋಗಿದ್ದಾರೆ.

ಇವರೆಲ್ಲ ಕಾಶ್ಮೀರಿ ಹಿಂದೂಗಳು!

ಆದರೆ ತಾವೇ ವಿದ್ಯೆ ಕಲಿಸಿದ ಮಕ್ಕಳು ಮುಂದೊಂದು ದಿನ ತಮ್ಮನ್ನೇ ಕೊಲ್ಲಲು ಬರುತ್ತಾರೆಂದು ಖಂಡಿತಾ ಇವರಾರೂ ಭಾವಿಸಿರಲಿಲ್ಲ. ತಮ್ಮ ನೆರೆಯವರೇ ಎ.ಕೆ-47 ರೈಫಲ್ ಹಿಡಿದು ಮನೆಯ ಬಾಗಿಲು ತಟ್ಟುತ್ತಾರೆ, ಅಮಾನುಷವಾಗಿ ಕೊಲ್ಲುತ್ತಾರೆ ಎಂದೆಣಿಸಿರಲಿಲ್ಲ. ತಾವೇ ಚಿಕಿತ್ಸೆ ನೀಡಿದ ರೋಗಿಗಳು ಗುಣಮುಖವಾದ ನಂತರ ತಮ್ಮನ್ನೇ ಕೊಲ್ಲುತ್ತಾರೆ ಎಂದು ದುಃಸ್ವಪ್ನದಲ್ಲೂ ಯೋಚಿಸಿರಲಿಲ್ಲ. ಮೈದಾನದಲ್ಲಿ ಆಟವಾಡುವಾಗ ಜತೆಯಲ್ಲೇ ಇದ್ದವರ ಕ್ರೂರ ಮುಖವನ್ನು ಖಂಡಿತಾ ಕಂಡಿರಲಿಲ್ಲ. ಇದು ಕೇವಲ ಗಂಜೂ, ಗರ್ಯಾಲಿಗಳೆಂಬ ಐವರ ಕಥೆಯಲ್ಲ. ಹಿಂದೂಗಳೆಂಬ ಏಕೈಕ ಕಾರಣಕ್ಕೆ ಕೊಲೆಯಾದ, ಕಾಶ್ಮೀರಿ ಕಣಿವೆಯಿಂದ ಹೊರದಬ್ಬಲ್ಪಟ್ಟ, ಸ್ವಂತ ನೆಲದಲ್ಲೇ ಪರಕೀಯರಾದ ಲಕ್ಷಾಂತರ ಜೀವಗಳು ಒಂದೊಂದು ಕಥೆ ಹೇಳುತ್ತವೆ. ಆದರೆ ಕೇಳುವವರಾರು? ಕಾಶ್ಮೀರದಲ್ಲಿ ಹಿಂದೂಗಳ ಮೇಲೆ ನಡೆಯುತ್ತಿರುವ ದೌರ್ಜನ್ಯದ ವಿರುದ್ಧ ಧ್ವನಿಯೆತ್ತುವವರಾರು?

ಅದಿರಲಿ, ಪಂಡಿತರಂತಹ ಶಾಂತಿಪ್ರಿಯ ಹಿಂದೂಗಳು ಮಾಡಿದ ತಪ್ಪಾದರೂ ಏನು? ಕಾಶ್ಮೀರಿ ಕಣಿವೆಯಲ್ಲಿ ಹಿಂದೂಗಳಾಗಿ ಹುಟ್ಟಿದ್ದೇ ಮಹಾಪರಾಧವೇ? ತ್ರಿವರ್ಣ ಧ್ವಜವನ್ನು ಗೌರವಿಸಿದ್ದೇ ದೊಡ್ಡ ತಪ್ಪೇ? ಪ್ಯಾಲೆಸ್ತೀನ್ ಮತ್ತು ಕೊಸೊವೋದ ಮುಸ್ಲಿಮರ ಬಗ್ಗೆ, ಈಸ್ಟ್ ಟಿಮೋರ್‌ನ ಕ್ರಿಶ್ಚಿಯನ್ನರ ಬಗ್ಗೆ, ಉತ್ತರ ಐರ್ಲೆಂಡ್‌ನ ಕ್ಯಾಥೋಲಿಕ್ಕರ ಬಗ್ಗೆ, ಸ್ಪೇನ್‌ನ

ಬಾಸ್ಕ್ ಪ್ರತ್ಯೇಕತಾವಾದಿಗಳ ಬಗ್ಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಧ್ವನಿಯೆತ್ತಲಾಗುತ್ತಿದೆ, ಹಕ್ಕು ಪ್ರತಿಪಾದನೆಯಾಗುತ್ತಿದೆ. ಆದರೆ 7 ಲಕ್ಷ ಪಂಡಿತರು ನಿತ್ಯವೂ ನರಕಯಾತನೆ ಅನುಭವಿಸುತ್ತಿದ್ದರೂ ಯಾರೂ ಲೆಕ್ಕಿಸುವುದಿಲ್ಲ. ಒಂದು ಹನಿ ಕಣ್ಣೀರನ್ನೂ ಸುರಿಸುವುದಿಲ್ಲ. ಅಮ್ನೆಸ್ಟಿ ಇಂಟರ್‌ನ್ಯಾಷನಲ್‌ಗೆ ಕಿವಿ ಕೇಳಿಸುವುದೇ ಇಲ್ಲ. ನಮ್ಮ ರಾಷ್ಟ್ರೀಯ ಮಾನವ ಹಕ್ಕು ಆಯೋಗವಂತೂ ತನ್ನ ಜವಾಬ್ದಾರಿಯನ್ನೇ ಮರೆತು 'ರಾಷ್ಟ್ರೀಯ ಅಲ್ಪಸಂಖ್ಯಾತ ಆಯೋಗ' ದಂತೆ ವರ್ತಿಸುತ್ತಿದೆ.

ಕಥೆ ಇಲ್ಲಿಗೇ ಮುಗಿಯುವುದಿಲ್ಲ.

ತಾಜ್‌ಮಹಲ್‌ಗೆ ಧಕ್ಕೆಯಾಗುತ್ತಿದೆ ಎಂದು ದಿಲ್ಲಿ ಸುತ್ತಮುತ್ತಲಿನ 17 ಸಾವಿರ ಕಾರ್ಖಾನೆಗಳಿಗೆ ಸುಪ್ರೀಂ ಕೋರ್ಟ್ ಬೀಗ ಹಾಕಿಸುತ್ತದೆ. ರಾಜಧಾನಿ ದಿಲ್ಲಿಯಲ್ಲಿರುವ ಎಲ್ಲ ಬಸ್‌ಗಳೂ ಸಿಎನ್‌ಜಿ(ಒತ್ತಡೀಕೃತ ನೈಸರ್ಗಿಕ ಅನಿಲ)ಯನ್ನೇ ಬಳಸಬೇಕೆಂದು ಗಡುವು ನೀಡುತ್ತದೆ. ಹಾಕಿ ತಂಡದ ಆಯ್ಕೆ ಪ್ರಕ್ರಿಯೆಯಲ್ಲಿ ಹಸ್ತಕ್ಷೇಪ ಮಾಡುತ್ತದೆ, ಬಿಸಿಸಿಐನ ಚುನಾವಣಾ ಫಲಿತಾಂಶಕ್ಕೆ ತಡೆಯೊಡ್ಡುತ್ತದೆ. ಆದರೆ 7 ಲಕ್ಷ ಭಾರತೀಯ ನಾಗರಿಕರ ಸಂವಿಧಾನಬದ್ಧ ಮೂಲಭೂತ ಹಕ್ಕು ಉಲ್ಲಂಘನೆಯಾಗುತ್ತಿದ್ದರೂ ಯಾವ ಕೋರ್ಟೂ ಚಕಾರವೆತ್ತುವುದಿಲ್ಲ. ಒಂದು ವೇಳೆ ಅನ್ಯಾಯವನ್ನು ತಡೆಯುವ ಕಾಳಜಿ ನಮ್ಮ ಸುಪ್ರೀಂ ಕೋರ್ಟ್‌ಗೆ ನಿಜವಾಗಿಯೂ ಇದ್ದರೆ 'ಸ್ವಯಂ ಪ್ರೇರಿತ'(Suo moto) ನಿರ್ಧಾರದ ಮೂಲಕ ಕಾಶ್ಮೀರದಲ್ಲಿನ ಪರಿಸ್ಥಿತಿಯ ಅಂದಾಜು ನಡೆಸಬಹುದಲ್ಲವೇ? ಆದರೆ ಇಂತಹ ಘೋರ ಅನ್ಯಾಯ ಕಣ್ಣೆದುರಿಗೇ ನಡೆಯುತ್ತಿದ್ದರೂ ಸುಮ್ಮನಿರುವ ಸುಪ್ರೀಂ ಕೋರ್ಟ್, 14 ಜನರು ಹತರಾದ ಬೆಸ್ಟ್ ಬೇಕರಿ ಹಗರಣದ ವಿಚಾರಣೆಯನ್ನು ಮಹಾರಾಷ್ಟ್ರಕ್ಕೆ ವರ್ಗಾಯಿಸಲು ಮಾತ್ರ ಹಿಂದೂ-ಮುಂದು ನೋಡುವುದಿಲ್ಲ. ತೀಸ್ತಾ ಸೆತಲ್ವಾಡ್ ಮಾತುಗಳನ್ನು ಕಣ್ಣರಳಿಸಿ, ಕಿವಿ ತೆರೆದುಕೊಂಡು ಆಲಿಸುತ್ತದೆ. ಹಾಗಾದರೆ ಅಲ್ಪಸಂಖ್ಯಾತರ ಹಕ್ಕುಗಳ ರಕ್ಷಣೆ ಮಾತ್ರ ನ್ಯಾಯಾಲಯದ ಜವಾಬ್ದಾರಿಯೇ? ಹಿಂದೂಗಳ ನೋವಿಗೆ ಸ್ಪಂದಿಸುವಂತಹ ಸಂವೇದನಾಶೀಲತೆ ನಮ್ಮ ನ್ಯಾಯಾಲಯಗಳಿಗಿಲ್ಲವೇ?

ಇತ್ತ ನರೇಂದ್ರ ಮೋದಿಯವರನ್ನು ಕೊಲ್ಲಲು ಹೊರಟಿದ್ದ ಇಶ್ರತ್‌ಳನ್ನು ಗುಜರಾತ್ ಪೊಲೀಸರು ಕೊಂದಾಗ, ವಿಷಯದ ಸತ್ಯಾಸತ್ಯತೆಯನ್ನು ಪರಾಮರ್ಶಿಸದೇ 'ಅದೊಂದು ನಕಲಿ ಎನ್‌ಕೌಂಟರ್' ಎಂದು ಬೊಬ್ಬೆ ಹಾಕಿ, ಕೋರ್ಟು-ಕಟಕಟೆ ಮಾತನಾಡಿದ್ದ ಮಾನವ ಹಕ್ಕು ಆಯೋಗ ಮತ್ತು ಎನ್‌ಜಿಒಗಳಿಗೆ ಖಂಡಿತಾ ಪಂಡಿತರ ವೇದನೆ ಅರ್ಥವಾಗುವುದಿಲ್ಲ. ಶಬಾನಾ ಅಜ್ಮಿ, ಜಾವೆದ್ ಅಖ್ತರ್, ಮೇಧಾ ಪಾಟ್ಕರ್ ಮತ್ತು ಅರುಂಧತಿ ರಾಯ್‌ಗೆ ಪಂಡಿತರ ಆರ್ತನಾದ ಖಂಡಿತಾ ಕೇಳಿಸುವುದಿಲ್ಲ. ಆದರೆ ಅಲ್ಪಸಂಖ್ಯಾತರ ಹಕ್ಕುಗಳಿಗೆ ಚ್ಯುತಿ ಬಂದಿದೆಯೆಂದು ಬೀದಿ ನಾಟಕ, ಪೇಟಿಂಗ್ ಮತ್ತು ಸಾಕ್ಷ್ಯಚಿತ್ರಗಳ ಮೂಲಕ ಕರುಣಾಜನಕ ಕಥೆ ಹೇಳಿ ಜನರ ಕಣ್ಣಲ್ಲಿ ನೀರೂರಿಸಲು ಮಾತ್ರ ಸದಾ ಮುಂದಿರುತ್ತಾರೆ. ಗುಜರಾತ್ ಹಿಂಸಾಚಾರದ ಬಗ್ಗೆ ಸಾಕ್ಷ್ಯಚಿತ್ರ ತಯಾರಿಸಿ ಮಹಾನ್ ಮಾನವತಾವಾದಿಯೆಂಬಂತೆ ತನ್ನನ್ನು ಬಿಂಬಿಸಿಕೊಳ್ಳುವ ರಾಕೇಶ್

ಶರ್ಮಾ ಅವರಿಗೆ, 14 ವರ್ಷಗಳಿಂದಲೂ ಕಾಶ್ಮೀರಿ ಪಂಡಿತರ ಮೇಲಾಗುತ್ತಿರುವ ದೌರ್ಜನ್ಯದ ಬಗ್ಗೆ ಸಾಕ್ಷ್ಯಚಿತ್ರ ರೂಪಿಸಲು ಸಮಯವೇ ಇಲ್ಲ. ಏಕೆಂದರೆ ಪುಕ್ಕಟೆ ಪ್ರಚಾರವಾಗಲಿ, ಬಿಟ್ಟಿ ಕಾಸಾಗಲಿ ಸಿಗುವುದಿಲ್ಲ.

ನಮ್ಮನ್ನಾಳುವವರೇನು ಸಾಚಾಗಳಲ್ಲ. ಪಂಡಿತರು ಹಿಂಸೆ ತಾಳಲಾರದೆ ಕಣಿವೆಯನ್ನು ತೊರೆದು ವಲಸೆ ಹೊರಡಲಾರಂಭಿಸಿದ್ದು 1990ರ ದಶಕದಲ್ಲಿ. ಅಲ್ಲಿಂದ ಇದುವರೆಗೂ ವಿ.ಪಿ. ಸಿಂಗ್ ಅವರಿಂದ ಪ್ರಾರಂಭವಾಗಿ ಮನಮೋಹನ್ ಸಿಂಗ್‌ವರೆಗೂ ಸುಮಾರು 6 ಜನ ಪ್ರಧಾನಿಗಳನ್ನು ನಾವು ಕಂಡಿದ್ದೇವೆ. ಕಾಂಗ್ರೆಸ್, ದಳಗಳಲ್ಲದೆ ಸಾಂಸ್ಕೃತಿಕ ರಾಷ್ಟ್ರೀಯವಾದವೇ ತನ್ನ ಉಸಿರು ಎನ್ನುವ ಹಿಂದುತ್ವವಾದಿ ಬಿಜೆಪಿಯೂ ಅಧಿಕಾರದ ಚುಕ್ಕಾಣಿ ಹಿಡಿದಿದೆ. ಆದರೆ ಯಾರೂ ಕಾಶ್ಮೀರಿ ಹಿಂದೂಗಳ ಮಾನ-ಪ್ರಾಣ ರಕ್ಷಣೆ ಬಗ್ಗೆ ಕಿಂಚಿತ್ತೂ ಕಾಳಜಿ ತೋರಿಲ್ಲ. ಇನ್ನು ನಮ್ಮ ಟೀವಿ ಮಾಧ್ಯಮಗಳು ಕ್ಯಾಮರಾಗಳ ಮುಂದೆ ಜಹೀರಾ ಶೇಕ್ ಬಗ್ಗೆ ತಾಸುಗಟ್ಟಲೆ ಚರ್ಚೆ ನಡೆಸುತ್ತವೆ. ಪತ್ರಿಕೆಗಳು ಉದ್ದುದ್ದ ಅಂಕಣ ಬರೆಯುತ್ತವೆ, ಸಂಪಾದಕೀಯ ಬರೆದು ಕಣ್ಣೀರು ಸುರಿಸುತ್ತವೆ. ಆದರೆ ಈ ಮಾಧ್ಯಮಗಳಿಗೆ ಕಾಶ್ಮೀರ ಕಣಿವೆಯ ಗಲ್ಲಿ ಗಲ್ಲಿಗಳಲ್ಲಿ, ಪ್ರತಿ ಹಿಂದೂ ಕುಟುಂಬಗಳಲ್ಲೂ ಜಹೀರಾ ಶೇಕ್, ಮೊಹಮದ್ ಅನ್ಸಾರಿಗಳಿರುವುದು, ದೌರ್ಜನ್ಯಕ್ಕೊಳಗಾಗಿರುವುದು ಕಾಣುವುದೇ ಇಲ್ಲ. ನಮ್ಮ ಇತಿಹಾಸಕಾರರು, ಎನ್‌ಡಿಟೀವಿಯಂತಹ ಚಾನೆಲ್‌ಗಳು, ತೆಹೆಲ್ಕಾದಂತಹ ಮ್ಯಾಗಝಿನ್‌ಗಳು ಮತ್ತು ಕೆಲ ಇಂಗ್ಲಿಷ್ ಪತ್ರಿಕೆಗಳಿಗಂತೂ ಗುಜರಾತ್ ಗಲಭೆಯಲ್ಲಿ 700 ಜನ ಸತ್ತಿದ್ದು ಜಿನೋಸೈಡ್ ಅಥವಾ ಸಮೂಹ ಹತ್ಯೆಯಾಗಿ ಕಾಣುತ್ತದೆ. ತೈಮೂರ್, ಔರಂಗಜೇಬ್ ಮತ್ತು ಬಹುಮನಿ ಸುಲ್ತಾನರು ಲಕ್ಷಾಂತರ ಹಿಂದೂಗಳನ್ನು ಕೊಲೆಗೈದಿದ್ದರೂ ಜಿನೋಸೈಡ್ ಎನಿಸುವುದಿಲ್ಲ. 7 ಲಕ್ಷ ಪಂಡಿತರನ್ನು ಕಣಿವೆಯಿಂದ ಹೊರದಬ್ಬಿದರೂ 'ಜನಾಂಗೀಯ ನಿರ್ಮೂಲನೆ' ಎನಿಸುವುದಿಲ್ಲ. ಎಷ್ಟೇ ಆಗಲಿ, ಅನ್ಯಾಯಕ್ಕೊಳಗಾದವರು ಹಿಂದೂಗಳು!

ರಾಬರ್ಟ್ ಕ್ಲೈವ್ ಬಂಗಾಳದಲ್ಲಿ ಸಿರಾಜುದ್ದೀನ್‌ನನ್ನು ಹುಟ್ಟಡಗಿಸಲು ಯತ್ನಿಸುತ್ತಿರುವಾಗ ಅವಧ್‌ನ ರಾಜ 'ಶಾ ಶುಜ' ತನಗೇನೂ ನಷ್ಟವಿಲ್ಲ ಎಂದು ನಿಶ್ಚಿಂತೆಯಿಂದಿದ್ದ. ನೆಕ್ಸ್ಟ್ ಟಾರ್ಗೆಟ್ ತಾನೇ ಎಂಬ ಕನಿಷ್ಠ ಜ್ಞಾನವೂ ಅವನಿಗಿರಲಿಲ್ಲ. ಅದೇ ರೀತಿ, ನೀವೂ ಕೂಡ ಕಾಶ್ಮೀರದಲ್ಲಿನ ಹಿಂದೂಗಳ ಹತ್ಯೆಯಾದರೆ ನಮಗೇನಂತೆ ಎಂದು ನಿರುಮ್ಮಳವಾಗಿದ್ದರೆ ಮುಂದೊಂದು ದಿನ ಬಂದೂಕುಧಾರಿ ಭಯೋತ್ಪಾದಕ ನಿಮ್ಮ ಮನೆ ಬಾಗಿಲನ್ನೂ ತಟ್ಟುತ್ತಾನೆ, ಹೆಂಡತಿಯ ಸೀರೆಯನ್ನೂ ಎಳೆಯುತ್ತಾನೆ.

Shame on us!

ಇತ್ತೀಚಿನ ದಿನಗಳಲ್ಲಿ 'ವಿಜಯ ಕರ್ನಾಟಕ' ಪತ್ರಿಕೆಯಲ್ಲಿ ಬರುತ್ತಿರುವ ಲೇಖನಗಳಲ್ಲಿ ಎದ್ದು ತೋರುವ ಅಂಶವೆಂದರೆ, ತಿಳಿಗೇಡಿ ರಾಜಕೀಯ ಭ್ರಷ್ಟರು, ಅಯೋಗ್ಯ ಸ್ವಾರ್ಥ ಮತಾಂಧರು ಒಂದೆಡೆ ಸೇರಿದರೆ ಏನಾಗಬೇಕೋ ಅದೇ ಆಗುತ್ತಿದೆ. ಪ್ರತಾಪ್ ಸಿಂಹ ಅವರ ಲೇಖನಗಳನ್ನು ಓದಿದರೆ ಸಾಕು ಇದೆಲ್ಲ ಅರ್ಥವಾಗುತ್ತದೆ.

ಸುದಾಮ
ಬೆಂಗಳೂರು



# 22 | ಭಿಕ್ಷುಕರ ನಾಡು ನಮ್ಮದಲ್ಲ ಕೈಚಾಚುವ ಪಾಡೂ ನಮಗಿಲ್ಲ!

1993, ಸೆಪ್ಟೆಂಬರ್ 30ರಂದು ಬೆಳಗಿನ ಜಾವ 3 ಗಂಟೆ 55 ನಿಮಿಷಕ್ಕೆ ಮಹಾರಾಷ್ಟ್ರದ ಲಾತೂರ್ ಮತ್ತು ಉಸ್ಮಾನಾಬಾದ್ ಜಿಲ್ಲೆಯಲ್ಲಿ ಭೀಕರ ಭೂಕಂಪ ಸಂಭವಿಸಿದಾಗ, 19 ಸಾವಿರ ಜನರು ಪ್ರಾಣ ಕಳೆದುಕೊಂಡಾಗ, 30 ಸಾವಿರ ಮನೆಗಳು ಹಾನಿಗೊಳಗಾದಾಗ....

1999, ಅಕ್ಟೋಬರ್ 29ರಂದು ಒರಿಸ್ಸಾಕ್ಕೆ ಮಾರಕ ಚಂಡಮಾರುತ ಬಂದಪ್ಪಳಿಸಿದಾಗ, 12 ಸಾವಿರ ಜನರು ಮೃತರಾದಾಗ, 7.74 ಲಕ್ಷ ಮನೆಗಳು ನಾಶಗೊಂಡಾಗ, ಸುಮಾರು 2.5 ಶತಕೋಟಿ ಡಾಲರ್ ಮೊತ್ತದ ಹಾನಿಯುಂಟಾದಾಗ....

2001, ಜನವರಿ 26ರಂದು ಗುಜರಾತ್‌ನ ಭುಜ್ ಮತ್ತು ಕಛ್ ಜಿಲ್ಲೆಯಲ್ಲಿ ಭಾರಿ ಭೂಕಂಪ ಸಂಭವಿಸಿದಾಗ, 40 ಸಾವಿರಕ್ಕೂ ಅಧಿಕ ಜನರು ಪ್ರಾಣಕಳೆದುಕೊಂಡಾಗ, 1.66 ಲಕ್ಷ ಜನರು ಗಾಯ ಗೊಂಡಾಗ, 3.48 ಲಕ್ಷ ಮನೆಗಳು ಧ್ವಂಸಗೊಂಡಾಗ, 1.3 ರಿಂದ 5 ಶತಕೋಟಿ ಡಾಲರ್ ನಷ್ಟವುಂಟಾದಾಗ....

ಪ್ರಾಕೃತಿಕ ವಿಕೋಪವನ್ನು ಎದುರಿಸಲು, ಸಹಿಸಿಕೊಳ್ಳಲು, ಅದರಿಂದ ಚೇತರಿಸಿಕೊಳ್ಳಲು ಭಾರತ ಹೆಣಗಿತ್ತು! ಪ್ರತಿಬಾರಿಯೂ ಭಿಕ್ಷೆ ಎತ್ತಿತ್ತು. ಅಂತಾರಾಷ್ಟ್ರೀಯ ಸಹಾಯಕ್ಕಾಗಿ ಕೈಚಾಚಿತ್ತು. ಸಹಾಯ ನೀಡುತ್ತೇವೆ ಎಂದ ರಾಷ್ಟ್ರಗಳೆದುರು ಭಿಕ್ಷಾಪಾತ್ರೆ ಹಿಡಿದು ನಿಂತಿತ್ತು. ಗೋಗರೆದಿತ್ತು. ಆತ್ಮಗೌರವವನ್ನೇ ಮರೆತಿತ್ತು. ಜಗತ್ತನ್ನು ಆಳಲು ಹುಟ್ಟಿದವರು ನಾವಲ್ಲ ಎಂಬ ನಿರ್ಧಾರಕ್ಕೆ ಬಂದು ಎಷ್ಟೋ ವರ್ಷಗಳಾಗಿತ್ತು.

ಆದರೆ.....

ಮೊನ್ನೆ ಸುನಾಮಿ ಅಲೆಗಳು ಬಂದಪ್ಪಳಿಸಿದಾಗ, 10 ಸಾವಿರ ಭಾರತೀಯರು ಪ್ರಾಣ ಕಳೆದುಕೊಂಡಾಗ, ನಮ್ಮವರ ಸಹಾಯಕ್ಕಾಗಿ ತಮಿಳುನಾಡಿನ ತೀರ ಪ್ರದೇಶಗಳನ್ನು ತಲುಪುವುದಕ್ಕೂ ಮೊದಲೇ, 1 ಸಾವಿರ ಭಾರತೀಯ ಸೈನಿಕರು, ಅರ್ಧ ಡಜನ್‌ಗೂ ಅಧಿಕ ಹಡಗುಗಳು, ಎಂ-17 ಹೆಲಿಕಾಪ್ಟರ್‌ಗಳು, 55 ಸಾವಿರ ಜನರನ್ನು ಕಳೆದುಕೊಂಡು ದುಃಖತಪ್ತವಾಗಿದ್ದ ಶ್ರೀಲಂಕಾದ ಸಹಾಯಕ್ಕೆ ಮುಂದಾಗಿದ್ದವು, ಅಲ್ಲಿನ ಕಡಲ ಕಿನಾರೆಯನ್ನು ತಲುಪಿದ್ದವು, ಪರಿಹಾರ ಕಾರ್ಯವನ್ನು ಆರಂಭಿಸಿದ್ದವು! ಅಷ್ಟೇ ಅಲ್ಲ, ತನ್ನ ನೋವನ್ನು ಮರೆತ ಭಾರತ, ಅತೀವ ಸಂಕಷ್ಟಕ್ಕೀಡಾಗಿದ್ದ ಇಂಡೋನೇಷ್ಯಾಕ್ಕೂ ಸಹಾಯ ಹಸ್ತ ಚಾಚಿತ್ತು. ಕೇವಲ 2 ಗಂಟೆಯೊಳಗೆ "Operation Sea Waves" ಆರಂಭವಾಗಿತ್ತು. ಭಾರತೀಯ ವಾಯುಪಡೆಯ ವಿಮಾನಗಳು ಮೊದಲ ಮೂರು ದಿನಗಳಲ್ಲಿ ಸುಮಾರು 500 ಟನ್ ಆಹಾರ, ನೀರು, ಔಷಧ ಪೂರೈಸಿದವು. ಅಂಡಮಾನ್ ನಿಕೋಬಾರ್‌ನಲ್ಲಿದ್ದ 3,500ಕ್ಕೂ ಅಧಿಕ ಪ್ರವಾಸಿಗರನ್ನು ಸುರಕ್ಷಿತವಾಗಿ Air Lift ಮಾಡಲಾಯಿತು. ಈ ಮಧ್ಯೆ 44.5 ಲಕ್ಷ ರೂ. ನೀಡುತ್ತೇನೆಂದ ಅಮೆರಿಕದ ಸಹಾಯವನ್ನು, 10 ದಶಲಕ್ಷ ಡಾಲರ್

ನೀಡಲು ಮುಂದಾದ ಯುರೋಪಿಯನ್ ಯೂನಿಯನ್ ದೇಣಿಗೆಯನ್ನು, 85 ದಶಲಕ್ಷ ಡಾಲರ್ ನೀಡುತ್ತೇನೆಂದ ಸ್ಪೇನ್‌ನ ಇಡುಗಂಟನ್ನು ಭಾರತ ನಯವಾಗಿ ತಿರಸ್ಕರಿಸಿತು!!

ನಿಜಕ್ಕೂ ಆಶ್ಚರ್ಯವುಂಟಾಗುತ್ತಿದೆ.

ಕೆಲವೇ ವರ್ಷಗಳ ಹಿಂದಷ್ಟೇ ಭಿಕ್ಷೆ ಬೇಡುತ್ತಿದ್ದ ಭಾರತ ಇದೇನಾ? ಎಂದು ಅಂತಾರಾಷ್ಟ್ರೀಯ ಮಾಧ್ಯಮಗಳು ತಲೆಕೆರೆದುಕೊಳ್ಳುತ್ತಿವೆ. ಭಾರತದ ನಿರ್ಧಾರವನ್ನು ಅರಗಿಸಿಕೊಳ್ಳಲು, ಜೀರ್ಣಸಿಕೊಳ್ಳಲು ಅಮೆರಿಕ ಹೆಣಗುತ್ತಿದ್ದರೆ, ಚೀನಾ ಕೋಪದಿಂದ ಮೈಪರಚಿಕೊಳ್ಳುತ್ತಿದೆ. 350 ದಶಲಕ್ಷ ಡಾಲರ್ ನೀಡುತ್ತೇನೆಂದು ಆಮಿಷ ತೋರಿದರೂ ಸ್ವೀಕರಿಸಲು ಒಪ್ಪದಿದ್ದಾಗ ತನ್ನ ರಾಗ ಬದಲಾಯಿಸಿರುವ ಅಮೆರಿಕ, ಭಾರತದ ಎದೆಗಾರಿಕೆಯನ್ನು, ತೋರಿದ ನಾಯಕತ್ವ ಗುಣವನ್ನು ಮುಕ್ತಕಂಠದಿಂದ ಹೊಗಳಲು ಆರಂಭಿಸಿದೆ. ಕರೆಯದೇ ಹೋಗಲು ಹೇಗೆ ಸಾಧ್ಯ? ಎಂದು ವಿಶ್ವಸಂಸ್ಥೆಯ ಮಹಾ ಕಾರ್ಯದರ್ಶಿ ಕೋಫಿ ಅನ್ನಾನ್ ಹತಾಶೆ ವ್ಯಕ್ತಪಡಿಸಿದ್ದಾರೆ. ಆದರೂ ಕೆಲವು ಅಂತಾರಾಷ್ಟ್ರೀಯ ಮಾಧ್ಯಮಗಳು ಭಾರತವನ್ನು ಟೀಕಿಸುತ್ತಿವೆ. ಸಂಪಾದಕೀಯ ಬರೆದು, ಭಾರತಕ್ಕೆ ಸೊಕ್ಕು ಬಂದಿದೆ ಎಂದು ತೆಗಳುತ್ತಿವೆ. ವಿಶ್ವಸಂಸ್ಥೆಯ ಭದ್ರತಾ ಮಂಡಳಿಯಲ್ಲಿ ಕಾಯಂ ಸದಸ್ಯ ಸ್ಥಾನ ಮತ್ತು ವೀಟೊ ಅಧಿಕಾರ ಪಡೆದುಕೊಳ್ಳಲು ಭಾರತ ತೋರುತ್ತಿರುವ ಹುಸಿ ಎದೆಗಾರಿಕೆಯಿದು ಎಂದು ಕುಹಕವಾಡುತ್ತಿವೆ. ಆದರೆ ಸ್ವಂತ ಸಮಸ್ಯೆಗಳನ್ನು ಪರಿಹರಿಸಿಕೊಳ್ಳುವ ಸಾಮರ್ಥ್ಯ ಮಾತ್ರವಲ್ಲ, ಬೇರೆಯವರಿಗೆ ಸಹಾಯಹಸ್ತ ಚಾಚುವ ತಾಕತ್ತೂ ನಮಗಿದೆ ಎಂದು ಭಾರತದ ವಿದೇಶಾಂಗ ಕಾರ್ಯದರ್ಶಿ ಶ್ಯಾಂ ಸರಣ್ ಪ್ರತ್ಯುತ್ತರ ನೀಡಿದ್ದಾರೆ. ಈ ಮಧ್ಯೆ, ಸುನಾಮಿ ಸಂತ್ರಸ್ತರ ಪರಿಹಾರಕ್ಕಾಗಿ ಅಮೆರಿಕ, ಆಸ್ಟ್ರೇಲಿಯಾ ಮತ್ತು ಜಪಾನ್‌ಗಳನ್ನೊಳಗೊಂಡ ಸಂಘಟನೆಯೊಂದು ರಚನೆಯಾಗಿದ್ದು, ಅದರ ನೇತೃತ್ವವನ್ನು ಭಾರತಕ್ಕೆ ನೀಡಲಾಗಿದೆ.

ಖಂಡಿತಾ ಸುನಾಮಿ ಅಲೆಗಳು ಭಾರತದ ಪ್ರತಿಷ್ಠೆಯನ್ನು ಪಣಕ್ಕಿಟ್ಟಿದ್ದವು.

ಇಂತಹ ಸಂದಿಗ್ಧ ಸಮಯದಲ್ಲಿ ವೃಥಾ ವಿಳಂಬ ಮಾಡದೆ, ಭಾರತ ಸಮಸ್ಯೆಗೆ ಪ್ರತಿಕ್ರಿಯಿಸಿದ ವಿಧಾನ, ತೋರಿದ ಸಂವೇದನೆ, ಎದೆಗಾರಿಕೆಯನ್ನು ಮೆಚ್ಚಲೇಬೇಕು. ಇದೆಲ್ಲಕ್ಕಿಂತ ಮುಖ್ಯವಾಗಿ ಸಹಾಯದ ನೆಪದಲ್ಲಿ ಚೀನಾ ಮತ್ತು ಆಸ್ಟ್ರೇಲಿಯಾದಂತಹ ಧೂರ್ತ ರಾಷ್ಟ್ರಗಳು ಹಿಂದೂ ಮಹಾಸಾಗರಕ್ಕೆ(Indian Ocean) ಕಾಲಿ ಭಾರತ ಅವಕಾಶ ನೀಡಲಿಲ್ಲ. ಅಂತಹ ಸೂಕ್ಷ್ಮಗ್ರಾಹಿತ್ವ ತೋರಿರುವ ಮನಮೋಹನ್‌ಸಿಂಗ್ ಅವರ ಬೆನ್ನುತಟ್ಟಲೇಬೇಕು.

ನಿಜ ಹೇಳಬೇಕೆಂದರೆ ಭಾರತದ ನಿಲುವು, ಧೋರಣೆ, ಮನೋಭಾವನೆಯಲ್ಲಿ ಬದಲಾವಣೆ ಕಂಡುಬಂದಿದ್ದು 1998ರಲ್ಲಿ. ಅಂದು ಅಟಲ್ ಸರಕಾರ ಅಣ್ವಸ್ತ್ರ ಪರೀಕ್ಷೆ ನಡೆಸಿದಾಗ ಅಮೆರಿಕ, ಬ್ರಿಟನ್, ಆಸ್ಟ್ರೇಲಿಯಾ, ಕೆನಡಾಗಳಲ್ಲದೆ ಯಕಃಶ್ಚಿತ್ ನಾರ್ವೆ ಕೂಡ ಭಾರತದ ವಿರುದ್ಧ

ಆರ್ಥಿಕ ಮತ್ತು ಮಿಲಿಟರಿ ದಿಗ್ಬಂಧನವನ್ನು ಹೇರಿತು. ಆ ಮೂಲಕ ಭಾರತದ ಆತ್ಮಸ್ಥೈರ್ಯವನ್ನು ಉಡುಗಿಸಲು ಪ್ರಯತ್ನಿಸಲಾಯಿತು. ಆದರೆ ಅಳುಕಿ Apology ಕೇಳುವ ಬದಲು, ಅಟಲ್ ಸರಕಾರ ತನ್ನ ನಿಲುವನ್ನು ಸಮರ್ಥಿಸಿಕೊಂಡಿತು. ಅಮೆರಿಕದ ಉಪ ವಿದೇಶಾಂಗ ಸಚಿವ ಸ್ಟ್ರೋಬ್ ಟಾಲ್ಬೋಟ್ ಜತೆ 3 ಖಂಡಗಳ, 7 ದೇಶಗಳ 9 ಸ್ಥಳಗಳಲ್ಲಿ 17 ಸುತ್ತು ಮಾತುಕತೆ ನಡೆಸಿದ ಆಗಿನ ವಿದೇಶಾಂಗ ಸಚಿವ ಜಸ್ವಂತ್ ಸಿಂಗ್ ಭಾರತದ ನಿಲುವನ್ನು, ಸ್ಥಾನ ಮಾನವನ್ನು, ಪಾತ್ರವನ್ನು ಒಪ್ಪಿಕೊಳ್ಳುವಂತೆ ಮಾಡಿದರು. ಪರಿಣಾಮವಾಗಿ 1999ರಲ್ಲಿ ಕ್ಲಿಂಟನ್ ಭಾರತಕ್ಕೆ ಭೇಟಿ ನೀಡಿದರು. ಪರಸ್ಪರ ಕಚ್ಚಾಟದಲ್ಲಿ ತೊಡಗಿದ್ದ ಭಾರತ-ಅಮೆರಿಕ ಒಂದಾದವು.

ಇತ್ತ ಮುನಿಸಿಕೊಂಡಿದ್ದ ಆಸ್ಟ್ರೇಲಿಯಾ, ಅಣು ಪರೀಕ್ಷೆಯ ನಂತರ ಜಗತ್ತಿನಲ್ಲಿಯೇ ಅತ್ಯಂತ ಸಂಚಾರ ನಿಬಿಡ ಜಲಮಾರ್ಗ (Busiest Sea Root) ಗಳಲ್ಲೊಂದಾದ ಹಿಂದೂ ಮಹಾಸಾಗರದ ಮೇಲೆ ತನ್ನ ನಿಯಂತ್ರಣ ಸಾಧಿಸಲು ಹವಣಿಸತೊಡಗಿತು. ಏಕೆಂದರೆ ಕೊಲ್ಲಿ ರಾಷ್ಟ್ರಗಳಿಂದ ಅರಬ್ಬೀ ಸಮುದ್ರದ ಮೂಲಕ ಹಾದು ಬರುವ ತೈಲ ನೌಕೆಗಳು ಹಿಂದೂ ಮಹಾಸಾಗರದ ಮೂಲಕವೇ ಜಪಾನ್ ಮತ್ತು ಇತರ ರಾಷ್ಟ್ರಗಳಿಗೆ ಹೋಗಬೇಕು. ಹೀಗೆ ಹಾರ್ಮುರ್ಝ್‌ನಿಂದ ಮಲಕ್ಕಾ ಜಲಸಂಧಿಯವರೆಗೂ (Strait) ನಿಯಂತ್ರಣ ಹೊಂದುವ ಸಲುವಾಗಿ ಭಾರತದ ನೌಕಾಪಡೆಯೊಂದಿಗೆ ಆಸ್ಟ್ರೇಲಿಯಾ ಸಂಘರ್ಷಕ್ಕಿಳಿಯಿತು. ಇನ್ನೊಂದೆಡೆ ಮ್ಯಾನ್ಮಾರ್‌ನ ಕೋಕೋ ದ್ವೀಪಗಳನ್ನು ಖರೀದಿಸಿ ನೌಕಾ ನೆಲೆ ಸ್ಥಾಪಿಸಿಕೊಂಡ ಚೀನಾ ಬಂಗಾಳ ಕೊಲ್ಲಿ ಮೇಲೆ ಕಣ್ಣಿಟ್ಟಿತು. ಆದರೆ ಭಾರತ ಕೈಕಟ್ಟಿ ಕುಳಿತುಕೊಳ್ಳಲಿಲ್ಲ. ಅರಬ್ಬೀ ಸಮುದ್ರದಿಂದ ಮಲಕ್ಕಾ-ಹಾರ್ಮುರ್ಝ್ ಜಲಸಂಧಿವರೆಗೂ ಇರುವ ಸಾಗರವನ್ನು ನ್ಯಾಯಸಮ್ಮತವಾಗಿ ತನ್ನ ನಿಯಂತ್ರಣಕ್ಕೆ ತೆಗೆದುಕೊಂಡಿತು. ಸೆಪ್ಟೆಂಬರ್ 11ರ ಘಟನೆ ಮತ್ತು ಕತಾರ್ ಬಳಿ ಯು.ಎಸ್.ಎಸ್. ಕೋಲ್ ಹಡಗಿನ ಮೇಲೆ ನಡೆದ ದಾಳಿಯ ನಂತರವಂತೂ ಹಿಂದೂ ಮಹಾಸಾಗರದಲ್ಲಿ ಹಾದು ಹೋಗುವ ಎಲ್ಲ ಹಡಗುಗಳಿಗೂ ಭಾರತವೇ ಭದ್ರತೆ ಒದಗಿಸಲಾರಂಭಿಸಿತು. ಕಳೆದ ಫೆಬ್ರವರಿಯಲ್ಲಿ ನೂತನ ನಿಯಮವೊಂದನ್ನು ರೂಪಿಸಿದ ಅಟಲ್ ಸರಕಾರ, ಹಿಂದೂ ಮಹಾಸಾಗರದ ಮೂಲಕ ಹಾದು ಹೋಗುವ ಪ್ರತಿ ಹಡಗುಗಳೂ ಪೂರ್ವ ಮಾಹಿತಿ ನೀಡಬೇಕಾದ ವ್ಯವಸ್ಥೆ ಜಾರಿಗೆ ತಂದಿತು. ಅಲ್ಲದೆ ಹಡಗುಗಳು ಸಮಸ್ಯೆಗೆ ಸಿಲುಕಿದರೆ ಸಹಾಯಕ್ಕೆ ಬರುವ ಏಕೈಕ ಶಕ್ತಿಯೆಂದರೆ ಭಾರತೀಯ ನೌಕಾಪಡೆ. ಅಷ್ಟೊಂದು ಕಟ್ಟುನಿಟ್ಟಾದ ವ್ಯವಸ್ಥೆ ಹಿಂದೂ ಮಹಾಸಾಗರದಲ್ಲಿದೆ. ವಿದೇಶಿ ಹಸ್ತಕ್ಷೇಪಕ್ಕೆ ಅವಕಾಶವೇ ಇಲ್ಲ.

ಆದರೆ ಸುನಾಮಿ ನೆಪದಲ್ಲಿ ಆಸ್ಟ್ರೇಲಿಯಾ, ಚೀನಾಗಳು ಹಿಂದೂ ಮಹಾಸಾಗರಕ್ಕೆ ಕಾಲಿಡಲು ಮತ್ತೊಮ್ಮೆ ಹವಣಿಸಲಾರಂಭಿಸಿದವು. ಎಚ್ಚೆತ್ತ ಭಾರತ ತನ್ನ ಸಮಸ್ಯೆಯನ್ನು ಬದಿಗಿಟ್ಟು, ಶ್ರೀಲಂಕಾ, ಇಂಡೋನೇಷ್ಯಾದಂತಹ ಇತರ ರಾಷ್ಟ್ರಗಳ ಸಹಾಯಕ್ಕೆ ಮುಂದಾಗುವ ಮೂಲಕ ಆಸ್ಟ್ರೇಲಿಯಾಕ್ಕೆ ಮೂಗುತೂರಿಸಲು ಅವಕಾಶ ನೀಡಲಿಲ್ಲ. ಲಂಕಾಕ್ಕೆ ಕಾಲಿಡಲು ಅಮೆರಿಕಕ್ಕೆ ತಕ್ಕಮಟ್ಟಿನ ಅವಕಾಶ ನೀಡುವ ಮೂಲಕ ಚೀನಾದ ಬಾಯಿಮುಚ್ಚಿಸಲು ಯತ್ನಿಸಿತು. ಜತೆಗೆ

ಶ್ರೀಲಂಕಾಕ್ಕೆ 200 ಕೋಟಿ ರೂ. ಸಹಾಯಧನ ನೀಡುವ ಮೂಲಕ ವಿದೇಶಿ ಹಸ್ತಕ್ಷೇಪಕ್ಕೆ ತೆರೆ ಎಳೆಯಿತು. ಅಷ್ಟೇಕೆ, ಸೇವೆಯ ನೆಪದಲ್ಲಿ ಶತ್ರುಗಳು ಆಗಮಿಸುವುದನ್ನು ತಡೆಯುವ ಸಲುವಾಗಿ ವಿದೇಶಿ ಎನ್.ಜಿ.ಒ.(ಸ್ವಯಂ ಸೇವಾ ಸಂಸ್ಥೆ)ಗಳಿಗೂ ಕಡಿವಾಣ ಹಾಕಲಾಯಿತು. ಹಾಗಾಗಿಯೇ ಅಂತಾರಾಷ್ಟ್ರೀಯ ಮಾಧ್ಯಮಗಳು ಕುಪಿತಗೊಂಡಿವೆ. ಭಾರತದ ವಿರುದ್ಧ ನಕಾರಾತ್ಮಕ ಪ್ರಚಾರಾಂದೋಲನ ನಡೆಸುತ್ತಿವೆ.

ಇಂತಹ ಎಲ್ಲ ಒತ್ತಡ, ಟೀಕೆಗಳ ಹೊರತಾಗಿಯೂ ಭಾರತ ಮೈಕೊಡವಿಕೊಂಡು ನಿಂತಿದ್ದರೆ, ವಿದೇಶಿ ನೆರವು ಬೇಡ ಎಂಬ ದೃಢ ನಿಲುವು ತಳೆದಿದ್ದರೆ ಅದಕ್ಕೆ ಸ್ವಾಭಿಮಾನಿ ಭಾರತೀಯರೇ ಕಾರಣ! ಅದರಲ್ಲೂ ಆಂಧ್ರದ ಜತೆ ಗಡಿ ಸಮಸ್ಯೆಯ ಜತೆಗೆ ನೀರು ಹಂಚಿಕೆಯ ವಿಷಯದಲ್ಲಿ ತೀವ್ರ ಭಿನ್ನಾಭಿಪ್ರಾಯ ಹೊಂದಿದ್ದರೂ, ಕಾವೇರಿ ವಿಚಾರದಲ್ಲಿ ನೆರೆಯ ತಮಿಳುನಾಡು ಪಾಕಿಸ್ತಾನದಂತೆ ವರ್ತಿಸುತ್ತಿದ್ದರೂ ಎಲ್ಲವನ್ನೂ ಮರೆತು ಕರ್ನಾಟಕ ತೋರಿದ ಸಹೃದಯತೆಯನ್ನು ಮರೆಯಲು ಸಾಧ್ಯವಿಲ್ಲ. ಸುನಾಮಿ ಅಪ್ಪಳಿಸಿದ ಕ್ಷಣದಿಂದಲೇ ಭಿನ್ನಾಭಿಪ್ರಾಯಗಳನ್ನು ಬದಿಗಿಟ್ಟ ಕರ್ನಾಟಕ, ತನ್ನ ಹಿರಿಯ ಸಚಿವರನ್ನು ಆಂಧ್ರಪ್ರದೇಶ, ತಮಿಳುನಾಡು, ಕೇರಳ ಮತ್ತು ಅಂಡಮಾನ್-ನಿಕೋಬಾರ್‌ಗಳಿಗೆ ಕಳುಹಿಸಿ, ನಿರಾಶ್ರಿತರ ಅಗತ್ಯಗಳ ಬಗ್ಗೆ ಮಾಹಿತಿ ಸಂಗ್ರಹಿಸಿ, ಸ್ಪಂದಿಸಿತು. ನಿತ್ಯವೂ ಲಕ್ಷಾಂತರ ಚಪಾತಿ ಸಿದ್ಧಪಡಿಸಿ ಕಳುಹಿಸಿತು. ಸಂತ್ರಸ್ತರ ನೆರವಿಗಾಗಿ ಸುಮಾರು 50 ಕೋಟಿ ರೂ. ಧನಸಂಗ್ರಹ ಮಾಡಿದೆ. ಅದೇ ರೀತಿ, ಸಚಿನ್ ತೆಂಡೂಲ್ಕರ್ ಸೇರಿದಂತೆ ನಮ್ಮೆಲ್ಲ ಸ್ವಾರ್ಥಪರ ಕ್ರಿಕೆಟ್ ತಾರೆಗಳು ಕೈಕಟ್ಟಿ ಕುಳಿತುಕೊಂಡಿರುವಾಗ, ಕಿಸೆಯಿಂದ ನಯಾಪೈಸೆ ನೀಡಲೂ ಹಿಂಜರಿಯುತ್ತಿರುವಾಗ, ವಿವೇಕ್ ಒಬೆರಾಯ್ ಅವರಂತಹ ಸಾಮಾನ್ಯ ನಟ, ದೇವನಪಟ್ಟಣಂ ಎಂಬ ಗ್ರಾಮವನ್ನೇ ದತ್ತು ತೆಗೆದುಕೊಳ್ಳುವಂತಹ ಔದಾರ್ಯ ತೋರಿದ್ದಾರೆ. ಹಿಂದೂ ಸಾಧು-ಸಂತರನ್ನು ಯಾರೇನೇ ತೆಗಳಬಹುದು. ಆದರೆ ಶ್ರೀ ಶ್ರೀ ರವಿಶಂಕರ್ 150 ಕೋಟಿ ಮತ್ತು ಮಾತಾ ಅಮೃತಾನಂದಮಯಿ 100 ಕೋಟಿ ರೂ. ನೀಡುವ ಭರವಸೆ ನೀಡಿದ್ದಾರೆ. ಇಂತಹ ಸಹೃದಯತೆಯಿಂದಾಗಿಯೇ, ದೇಶಾದ್ಯಂತ ಈಗಾಗಲೇ ಸುಮಾರು 700 ಕೋಟಿ ರೂ. ನಿಧಿ ಸಂಗ್ರಹಣೆಯಾಗಿದೆ. ಸುನಾಮಿ ಅಪ್ಪಳಿಸಿ ವಾರ ಕಳೆಯುವಷ್ಟರಲ್ಲಿ ಪುನರ್‌ನಿರ್ಮಾಣ ಕಾರ್ಯ ಪ್ರಾರಂಭವಾಗಿದೆ. ಭಾರತ ಚೇತರಿಸಿಕೊಳ್ಳುತ್ತಿದೆ.

ಏನೇ ಆಗಲಿ, ಶಾರುಕ್ ಖಾನ್ ಹೇಳಿದಂತೆ ಶತಕೋಟಿ ಜನರಿರುವ ಭಾರತಕ್ಕೆ ವಿದೇಶಿ ಸಹಾಯದ ಅಗತ್ಯವಿಲ್ಲ!

ಬುದ್ಧಿಜೀವಿಗಳೆಂದು ತಮಗೆ ತಾವೇ ಬಿರುದು ಕೊಟ್ಟುಕೊಂಡಿರುವವರ ಲೇಖನಗಳು ಭಾರತೀಯರಿಗೆ ತನ್ನ ದೇಶದ ಬಗ್ಗೆಯೇ ಅಸಡ್ಡೆ ಬೆಳೆಸಿಕೊಳ್ಳುವಂತೆ ಮಾಡುತ್ತಿವೆ. ಇಂತಹ ಸಂದರ್ಭದಲ್ಲಿ ವಿಜಯ ಕರ್ನಾಟಕದಲ್ಲಿ ಪ್ರಕಟವಾಗುವ ಪ್ರತಾಪ್ ಸಿಂಹ ಅವರ ಅಂಕಣ ಬರಹಗಳು ಇಂದಿನ ಯುವ ಪೀಳಿಗೆಗೆ ಪ್ರೇರಕವಾಗಿರುತ್ತವೆ ಮತ್ತು ಸ್ವಾಭಿಮಾನವನ್ನು ತುಂಬುತ್ತಿವೆ.

ಕಾ.ಗೋ. ಸೇತುರಾಂ
ಬಂಗಾರಪೇಟೆ

ಸರವಣನ್, ಕಾರ್ತಿಕ್ ಮತ್ತು ಅಮಲ್‌ರಾಜ್ ಆಪ್ತ ಸ್ನೇಹಿತರು. ಎಲ್ಲಿಗೇ ಹೋಗಲಿ, ಒಬ್ಬರನ್ನು ಬಿಟ್ಟು ಒಬ್ಬರಿರುತ್ತಿರಲಿಲ್ಲ. ಒಮ್ಮೆ ವಿಹಾರಕ್ಕೆಂದು ಕನ್ಯಾಕುಮಾರಿಗೆ ಹೋಗಿದ್ದರು. ಬಸ್ ಚಾಲಕ ತೂಕಡಿಸಲಾರಂಭಿಸಿದ. ಲಾರಿ ಮತ್ತು ಬಸ್ ಮುಖಾಮುಖಿಯಾದವು. ಏಳು ಜನರು ಸ್ಥಳದಲ್ಲೇ ಮೃತರಾದರು. ಹಲವಾರು ಪ್ರಯಾಣಿಕರು ಗಂಭೀರವಾಗಿ ಗಾಯಗೊಂಡರು. ಎಲ್ಲರೂ ಗಾಬರಿಯಿಂದ, ಭಯದಿಂದ ಚಡಪಡಿಸುತ್ತಿದ್ದರೆ, ಸರವಣನ್ ಗಾಯಗೊಂಡವರನ್ನು ಹೊರಗೆಳೆದು ರಸ್ತೆಯಲ್ಲಿ ಸಾಗುತ್ತಿದ್ದ ವಾಹನಗಳನ್ನು ಅಡ್ಡಗಟ್ಟಿ ಆಸ್ಪತ್ರೆಗೆ ಸಾಗಿಸಲು ಮುಂದಾದ! ಏಳು ಹೆಣಗಳು ಕಣ್ಣೆದುರಿಗೇ ಇದ್ದರೂ ಸರವಣನ್ ಮಾತ್ರ ಭೀತಿಗೊಂಡಿರಲಿಲ್ಲ, ಭಾವುಕನೂ ಆಗಿರಲಿಲ್ಲ. ಬಹುಶಃ ಅಪ್ರಾಪ್ತ ವಯಸ್ಸಿನಲ್ಲೇ ಅಪ್ಪನನ್ನು ಕಳೆದುಕೊಂಡ ನೋವು ಆತನ ಹೃದಯವನ್ನು ಕಲ್ಲಾಗಿಸಿತ್ತು. ಜತೆಗೆ ಆರ್ಮಿಯ ಹಿನ್ನೆಲೆಯೂ ಆತನಿಗಿತ್ತು.

ಸರವಣನ್ ಅಪ್ಪ ಲೆಫ್ಟಿನೆಂಟ್ ಕರ್ನಲ್ ಎ. ಮರಿಯಪ್ಪನ್ ಸೇನೆಯಲ್ಲಿ ವೈದ್ಯರಾಗಿದ್ದರು. 1987ರಲ್ಲಿ ಶ್ರೀಲಂಕಾಕ್ಕೆ ತೆರಳಿದ ಭಾರತೀಯ ಶಾಂತಿಪಾಲನಾ ಪಡೆಯಲ್ಲಿ ಮರಿಯಪ್ಪನ್ ಕೂಡ ಇದ್ದರು. ಒಂದೆರಡು ವರ್ಷ ಸೇವೆ ಸಲ್ಲಿಸಿದ ಅವರು, 1988ರಲ್ಲಿ ಮನೆಗೆ ಮರಳುತ್ತಿದ್ದಾಗ ಮಾರ್ಗ ಮಧ್ಯೆ ಬೆಂಗಳೂರಿನಲ್ಲಿ ನಡೆದ ರಸ್ತೆ ಅಪಘಾತ, ಮರಿಯಪ್ಪನ್ ಅವರನ್ನು ಬಲಿತೆಗೆದುಕೊಂಡಿತು. ಆಗ ಸರವಣನ್‌ಗೆ 14 ವರ್ಷ.

ಬೆಳಗಾಂ, ಕಣ್ಣೂರು, ಗುರುದಾಸ್‌ಪುರ ಮತ್ತು ಬಿಹಾರದಲ್ಲಿ ಶಾಲಾಭ್ಯಾಸ ಪೂರೈಸಿದ ಸರವಣನ್, ತಿರುಚಿಯ ಸೈಂಟ್ ಜೋಸೆಫ್ ಕಾಲೇಜು ಸೇರಿದ. ಅಪ್ಪನನ್ನು ಕಳೆದುಕೊಂಡ ನೋವನ್ನು ಮರೆತು ಸೇನೆ ಸೇರಲು ಹಾತೊರೆಯತೊಡಗಿದ. ಕಾಲೇಜು ವ್ಯಾಸಂಗ ಮುಗಿದ ನಂತರ ತಲುಪಿದ್ದು ಆಫೀಸರ್ಸ್ ಟ್ರೈನಿಂಗ್ ಅಕಾಡೆಮಿಗೆ. ಸೇನೆ ಸೇರುವ ಆತನ ಕನಸೂ ಸಾಕಾರಗೊಂಡಿತು. ಬಿಹಾರ್ ರೆಜಿಮೆಂಟ್ ಸೇರಿದ ಆತ, ಮರುವರ್ಷವೇ ಕ್ಯಾಪ್ಟನ್ ಆದ. 1999ರಲ್ಲಂತೂ 'ಮೇಜರ್ ಸರವಣನ್' ಆಗಿದ್ದೇ ತಡ ಅಮ್ಮನನ್ನು ಕಾಣಲು ತಿರುಚಿಗೆ ಬಂದ. ಸ್ನೇಹಿತರ ಮದುವೆ, ಪಾರ್ಟಿ ಎನ್ನುತ್ತಾ ಒಂದೂವರೆ ತಿಂಗಳು ಕಳೆದಿದ್ದೇ ಗೊತ್ತಾಗಲಿಲ್ಲ. ಮತ್ತೆ ಯೂನಿಫಾರ್ಮ್ ಧರಿಸಿ ಅಮ್ಮನಿಗೆ ವಿದಾಯ ಹೇಳಿದ ಆತ, ಅಸ್ಸಾಂನಲ್ಲಿದ್ದ ಬಿಹಾರ್ ರೆಜಿಮೆಂಟ್ ಸೇರಿದ. ಈ ಮಧ್ಯೆ, ಮಗನ ಮದುವೆ ಬಗ್ಗೆ ಚಿಂತಿಸಲಾರಂಭಿಸಿದಳು ಅಮ್ಮ ಅಮಿತಾವಳ್ಳಿ. ಫೋಟೊ ಕೂಡ ಕಳುಹಿಸಿಕೊಟ್ಟಳು. ಸರವಣನ್‌ಗೆ ಇಷ್ಟವೂ ಆಯಿತು. ಮದುವೆಗೂ ಒಪ್ಪಿದ. ಆಗಸ್ಟ್ 10ರಂದು ಹೇಗೂ ಹುಟ್ಟುಹಬ್ಬವಿದೆ. ಜತೆಗೆ ಮದುವೆಯನ್ನೂ ಮಾಡಿದರಾಯಿತು ಅಂತ ಅಮ್ಮ ಲೆಕ್ಕಾಚಾರ ಹಾಕಿದಳು.

ಇತ್ತ ಅಸ್ಸಾಂನಲ್ಲಿದ್ದ ಬಿಹಾರ್ ರೆಜಿಮೆಂಟ್‌ಗೆ ತುರ್ತು ಕರೆ ಬಂದಿತ್ತು. ಸ್ಥಳಾಂತರಗೊಳ್ಳಬೇಕಿತ್ತು. ಅಮ್ಮನಿಗೆ ಕರೆ ಮಾಡಿದ ಸರವಣನ್, ಮುಂದಿನ ಪಯಣ ಎಲ್ಲಿಗೆ ಎಂದು ಹೇಳಲೇ ಇಲ್ಲ. ನಿತ್ಯವೂ ಫೋನ್ ಮಾಡುವೆ ಎಂದಷ್ಟೇ ಹೇಳಿ, ಫೋನ್ ಇಟ್ಟ. ಅಮ್ಮನೂ

ತಲೆಕೆಡಿಸಿಕೊಳ್ಳಲಿಲ್ಲ. ಏಕೆಂದರೆ ಸೈನಿಕನ ಕೈಹಿಡಿದಿದ್ದ ಆಕೆಗೆ, ಆರ್ಮಿ ಎಂದರೆ ಹತ್ತಾರು ಕಡೆ ಪೋಸ್ಟಿಂಗ್ ಇದ್ದೇ ಇರುತ್ತದೆ ಎಂದು ಗೊತ್ತಿತ್ತು. ಆದರೆ 15 ದಿನಗಳಾದರೂ ಮಗನ ಕರೆ ಬರಲೇ ಇಲ್ಲ!

1999, ಮೇ 28. ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿಯವರು 'ಆಪರೇಶನ್ ವಿಜಯ್'ಗೆ ಆಜ್ಞೆ ನೀಡಿದ್ದರು. ಮೇಜರ್ ಸರವಣನ್, ಅಸ್ಸಾಂನಿಂದ ಕಾರ್ಗಿಲ್‌ಗೆ ತೆರಳಿದ್ದ! 14,229 ಅಡಿ ಎತ್ತರದ ಬಟಾಲಿಕ್ ಸೆಕ್ಟರ್‌ನ ಪರ್ವತ ಶ್ರೇಣಿಗಳಲ್ಲಿ ಅಡಗಿ ಕುಳಿತಿದ್ದ ಭಯೋತ್ಪಾದಕರ ಹುಟ್ಟಡಗಿಸುವುದು ಅಸಾಧ್ಯದ ಮಾತಾಗಿತ್ತು. ಜತೆಗೆ ಭಯೋತ್ಪಾದಕರ ನೈಜ ಸಾಮರ್ಥ್ಯದ ಯಾವುದೇ ಅರಿವಿರಲಿಲ್ಲ. ಆದರೂ 'ಚೆಂಗಿಸ್ ಖಾನ್' ಎಂಬ ಗುಪ್ತನಾಮ ಪಡೆದಿದ್ದ ಮೇಜರ್ ಸರವಣನ್ ಬೆಳಗಿನಜಾವ 4 ಗಂಟೆಗೆ ಪರ್ವತವನ್ನೇರಲು ಆರಂಭಿಸಿದ. ಆದರೆ ಮೊದಲೇ ಪೂರ್ವ ತಯಾರಿ ಮಾಡಿಕೊಂಡಿದ್ದ ಭಯೋತ್ಪಾದಕರು ಸ್ವಯಂಚಾಲಿತ ಬಂದೂಕುಗಳ ಮೂಲಕ ಗುಂಡಿನ ಸುರಿಮಳೆಗೈಯ್ಯಲಾರಂಭಿಸಿದರು. ಬಿಹಾರ್ ರೆಜಿಮೆಂಟ್‌ನ ಪ್ರತಿದಾಳಿಯೂ ಆರಂಭವಾಯಿತು. ರಾಕೆಟ್ ಲಾಂಚರ್ ಮೂಲಕ ಸರವಣನ್ ಶತ್ರುಗಳ ಬಂಕರ್ ಮೇಲೆ ದಾಳಿ ಮಾಡಿದ. ಆದರೂ ಹಲವಾರು ಭಾರತೀಯ ಸೈನಿಕರು ಗಾಯಗೊಂಡರು. ಏಕೆಂದರೆ ಪರಿಸ್ಥಿತಿ, ಪರ್ವತದ ಮೇಲಿದ್ದ ಭಯೋತ್ಪಾದಕರ ಪರವಾಗಿತ್ತು. ಈ ಮಧ್ಯೆ ಶತ್ರುವಿನ ಗುಂಡೊಂದು ಸರವಣನ್ ದೇಹವನ್ನೇ ಹೊಕ್ಕಿತು. ಆಕ್ರಮಣದ ನಿರ್ದೇಶನ ನೀಡುತ್ತಿದ್ದ ಅಧಿಕಾರಿ, 'ಚೆಂಗಿಸ್ ಖಾನ್ ಹಿಂದೆ ಸರಿ' ಎಂದು ಆಜ್ಞೆ ಮಾಡಿದ. ಆದರೆ 'ಸರ್ ಇದು ಹಿಂದೆ ಸರಿಯುವ ಸಮಯವಲ್ಲ. ನಮ್ಮ ಗುರಿ ಸಾಧನೆ ಸಮಯ ಹತ್ತಿರ ಬಂದಿದೆ' ಎಂದ ಸರವಣನ್, ಹೋರಾಟ ಮುಂದುವರಿಸಿದ. ಮತ್ತೊಂದು ಗುಂಡು ತಲೆಯನ್ನೇ ಸೀಳಿತು. ಬೆಳಗ್ಗೆ 6 ಗಂಟೆ 30 ನಿಮಿಷಕ್ಕೆ ಸರವಣನ್ ನೆಲಕ್ಕುರುಳಿದ. ಹಿಮದಡಿ ಹೂತುಹೋದ. ಕಾರ್ಗಿಲ್ ಕದನದಲ್ಲಿ ದೇಶ ರಕ್ಷಣೆಗಾಗಿ ಬಲಿದಾನ ಮಾಡಿದ ಮೊದಲ ಅಧಿಕಾರಿ ಅವನಾಗಿದ್ದ. ಆದರೆ ಸಂಘರ್ಷ ಎಷ್ಟು ತೀವ್ರವಾಗಿತ್ತೆಂದರೆ, ಪ್ರಾಣತ್ಯಾಗ ಮಾಡಿದ ಮೊದಲ ಅಧಿಕಾರಿಯಾದರೂ, ತ್ರಿವರ್ಣ ಧ್ವಜದಲ್ಲಿ ಹೆಣವಾಗಿ ವಾಪಸ್ ಬಂದಿದ್ದು ಎಲ್ಲರಿಗಿಂತ ಕೊನೆಯವನಾಗಿ!

41 ದಿನಗಳ ನಂತರ, ಅಂದರೆ ಜುಲೈ 8ರಂದು ಹಿಮದಡಿ ಇದ್ದ ಸರವಣನ್ ದೇಹವನ್ನು ಹೊರತೆಗೆಯಲಾಯಿತು. ದುಃಖತಪ್ತ ತಿರುಚಿ ನಗರವೇ ಸರವಣನ್ ಅಂತ್ಯಸಂಸ್ಕಾರಕ್ಕೆ ಆಗಮಿಸಿತು. ನೋವಿಗೆ ಸ್ಪಂದಿಸಿದ ತಮಿಳುನಾಡು ಸರಕಾರ 7ನೇ ತರಗತಿಯ ಪಠ್ಯಪುಸ್ತಕದಲ್ಲಿ 'ಹೆಣವಾಗಿ ಹಿಂದಿರುಗಿದ ವೀರ ಸೇನಾನಿ' ಎಂಬ ಅಧ್ಯಾಯವೊಂದನ್ನು ಅಳವಡಿಸಿತು. 'ಹೀರೊ ಆಫ್ ಬಟಾಲಿಕ್' ಎಂಬ ಬಿರುದು ನೀಡಿತು ಭಾರತೀಯ ಸೇನೆ. 'ವೀರ ಚಕ್ರ'ವನ್ನು ನೀಡಿದ ದೇಶ, ತನ್ನ ಧೀರ ಪುತ್ರನ ಬಗ್ಗೆ ಹೆಮ್ಮೆಪಟ್ಟಿತು.

ಈಗ ಕಾಶ್ಮೀರದಲ್ಲಿ ಹಿಮಪಾತವಾಗುತ್ತಿದೆ. ಆರು ವರ್ಷಗಳ ಹಿಂದೆ, ಪಾಕ್

ಪ್ರೇರಿತ ಭಯೋತ್ಪಾದಕರು ಕಾರ್ಗಿಲ್‌ನೊಳಕ್ಕೆ ನುಸುಳಿ ನಮ್ಮ ಪರ್ವತ ಶ್ರೇಣಿಗಳನ್ನು ಆಕ್ರಮಿಸಿ, ರಣರಂಗವಾಗಿಸಿದ್ದು ಇದೇ ಮಾರ್ಚ್-ಏಪ್ರಿಲ್‌ನಲ್ಲಿ. ಆಗಲೂ ಹಿಮಪಾತ ವಾಗುತ್ತಿತ್ತು. ಆ ಹಿಮಪಾತದ ಲಾಭ ಪಡೆದೇ ಭಯೋತ್ಪಾದಕರು ಭಾರತದೊಳಕ್ಕೆ ನುಸುಳಿದ್ದು. ಜತೆಗೆ 1999, ಫೆಬ್ರವರಿ 19ರಂದು ಲಾಹೋರ್‌ಗೆ ಬಸ್‌ಯಾತ್ರೆ ಕೈಗೊಂಡಿದ್ದ ಪ್ರಧಾನಿ ಅಟಲ್ ಬಿಹಾರಿ ವಾಜಪೇಯಿ, ಪಾಕ್ ಪ್ರಧಾನಿ ನವಾಜ್ ಷರೀಫ್‌ಗೆ ಸ್ನೇಹ ಹಸ್ತಚಾಚಿದ್ದರು. ಲಾಹೋರ್ ಘೋಷಣೆಗೆ ಸಹಿ ಹಾಕಿ ಬಂದಿದ್ದರು. ಮಾರ್ಚ್ 16ರಂದು ದಿಲ್ಲಿ-ಲಾಹೋರ್ ಬಸ್ ಸೇವೆ ಆರಂಭವಾಗಿತ್ತು. ದ್ವೇಷ ಮರೆತು ದೋಸ್ತಿ ಮಾತು ಆರಂಭವಾಗಿತ್ತು. ಆದರೆ ಆಗಿದ್ದೇನು?

ಕಾರ್ಗಿಲ್ ಯುದ್ಧ!

ಈಗ ಮತ್ತದೇ ದೋಸ್ತಿ ಮಾತು ಕೇಳಿ ಬರುತ್ತಿದೆ. 'ಸ್ನೇಹ ಸರಣಿ' ಹೆಸರಲ್ಲಿ ಪಾಕಿಸ್ತಾನಿ ಕ್ರಿಕೆಟ್ ತಂಡ ಭಾರತಕ್ಕೆ ಆಗಮಿಸಿದೆ. ಕಾರ್ಗಿಲ್ ಸೂತ್ರಧಾರಿ ಮುಷರ್ರಫ್ ಅವರ ಅಮ್ಮ ಮತ್ತು ಮಗ ಮೂಲವನ್ನರಸುತ್ತಾ ಭಾರತಕ್ಕೆ ಬಂದಿದ್ದಾರೆ. ಸಾಲದೆಂಬಂತೆ ಭಯೋತ್ಪಾದಕರ ತರಬೇತಿ ಶಿಬಿರಗಳಿರುವ ಪಾಕ್ ಆಕ್ರಮಿತ ಕಾಶ್ಮೀರದ ಮುಜಫರಾಬಾದ್ ಮತ್ತು ಶ್ರೀನಗರದ ನಡುವೆ ಬರುವ ಏಪ್ರಿಲ್ 7ರಂದು ಬಸ್ ಸೇವೆ ಆರಂಭವಾಗಲಿದೆ. ಸ್ನೇಹದ ಮಾತನಾಡುತ್ತಾ, ಸಂಬಂಧ ವೃದ್ಧಿಯ ತುತ್ತೂರಿ ಊದುತ್ತಾ ಪಾಕಿಸ್ತಾನಿ ನಟ-ನಟಿಯರೂ ಭಾರತಕ್ಕೆ ಆಗಮಿಸುತ್ತಿದ್ದಾರೆ. ಇದರಲ್ಲೇನೂ ತಪ್ಪಿಲ್ಲ ಬಿಡಿ. ಪರಸ್ಪರ ಅಪನಂಬಿಕೆಯನ್ನು ಹೋಗಲಾಡಿಸಲು ಇಂತಹ ಕ್ರಮಗಳನ್ನು ಕೈಗೊಳ್ಳಬೇಕಾದ ಅಗತ್ಯವಿದೆ. ಆದರೆ ಪ್ರಶ್ನೆಯಿಷ್ಟೇ. ಬಸ್ ಸೇವೆಯಿಂದ, ಆಟ ಆಡುವುದರಿಂದ ಸಂಬಂಧ ಸುಧಾರಣೆಯಾಗುತ್ತದೆಯೇ?

ಒಂದು ವೇಳೆ ಬಸ್-ರೈಲು-ವಿಮಾನ ಸೇವೆಯಿಂದ ಸಂಬಂಧ ಸುಧಾರಣೆಯಾಗುವುದೇ ಆದರೆ, ನ್ಯೂಜಿಲ್ಯಾಂಡ್-ಆಸ್ಟ್ರೇಲಿಯಾ, ಇಂಗ್ಲೆಂಡ್-ಅರ್ಜೆಂಟೀನಾ, ಅರ್ಜೆಂಟೀನಾ-ಬ್ರೆಜಿಲ್, ಅಮೆರಿಕ-ಇರಾನ್, ಅಮೆರಿಕ- ಮೆಕ್ಸಿಕೋ, ಕ್ಯೂಬಾ-ಅಮೆರಿಕ, ದಕ್ಷಿಣ-ಉತ್ತರ ಕೊರಿಯಾ, ಉತ್ತರ ಕೊರಿಯಾ-ಜಪಾನ್, ಜಪಾನ್-ಚೀನಾಗಳು ಎಂದೋ ಮಿತ್ರರಾಷ್ಟ್ರಗಳಾಗಿರುತ್ತಿದ್ದವು. ಏಕೆಂದರೆ ಈ ರಾಷ್ಟ್ರಗಳ ನಡುವೆ ಫುಟ್ಬಾಲ್ ಪಂದ್ಯಗಳು ನಡೆಯುತ್ತಲೇ ಇರುತ್ತವೆ. ಆದರೆ ಪ್ರತಿಬಾರಿ ಮುಖಾ ಮುಖಿಯಾದಾಗಲೂ ಕ್ರೀಡಾಂಗಣ ರಣರಂಗದ ರೂಪ ಪಡೆಯುತ್ತದೆ. ಸಂಚಾರ ಸೇವೆಯಿಂದಲೂ ದ್ವೇಷವನ್ನು ಶಮನ ಮಾಡಲು ಸಾಧ್ಯವಾಗಿಲ್ಲ. ಇನ್ನು ದಕ್ಷಿಣ ಮತ್ತು ಉತ್ತರ ಕೊರಿಯಾಗಳು ಒಂದಾಗುವ ಮಾತು ಹಾಗಿರಲಿ, ಎರಡೂ ರಾಷ್ಟ್ರಗಳ ಧರ್ಮ ಒಂದೇ ಆಗಿದ್ದರೂ, ಕನಿಷ್ಠ ಸ್ನೇಹದ ಬೆಸುಗೆ ಹಾಕಲು ಆ ಧರ್ಮದಿಂದಲೂ ಸಾಧ್ಯವಾಗಿಲ್ಲ. ಹಾಗಾಂತ ಫುಟ್ಬಾಲ್, ಕ್ರಿಕೆಟ್ ಆಡುವುದನ್ನೇ ನಿಲ್ಲಿಸಬೇಕು. ಸಂಚಾರ ಸಂಪರ್ಕವೂ ಬೇಡ ಎಂದು ಹೇಳುತ್ತಿಲ್ಲ. ನಾವೂ ಕೂಡ ಪಾಕಿಸ್ತಾನದ ಜತೆ ಕ್ರಿಕೆಟ್ ಆಡೋಣ, ವೈಷಮ್ಯ ಮರೆತು

ಸತ್ಕಾರವನ್ನೂ ಮಾಡೋಣ, ಪಾಕಿಸ್ತಾನಿ ಕಲಾವಿದರಿಗೆ ಬಾಲಿವುಡ್‌ನಲ್ಲಿ ಮಣೆ ಹಾಕೋಣ. ಹಾರ್ಟ್ ಆಪರೇಶನ್ ಕೂಡ ಮಾಡೋಣ. ದ್ರೋಹ ಮರೆತು ಮುಷರ್ರಫ್‌ಗೂ ಸ್ವಾಗತ ಕೋರೋಣ. ಆದರೆ ಸ್ನೇಹದ ಜಪ ಮಾಡುತ್ತಾ ಕಾರ್ಗಿಲ್‌ನಲ್ಲಿ ಬೆನ್ನಿಗೆ ಚೂರಿ ಹಾಕಿದ್ದನ್ನು ಮರೆಯುವುದು ಬೇಡ. ಏಕೆಂದರೆ....

"ನೀವು ಸರವಣನ್‌ಗೆ ಮಾತ್ರವಲ್ಲ, ಇಡೀ ದೇಶಕ್ಕೇ ಅಮ್ಮ" ಎಂದ ಸೇನಾಧಿಕಾರಿಯೊಬ್ಬರ ಸಾಂತ್ವನದ ಮಾತುಗಳಲ್ಲೇ, ಬಲಿದಾನದ ಹೆಮ್ಮೆಯಲ್ಲೇ, ದೇಶಪ್ರೇಮದ ಗುಂಗಿನಲ್ಲೇ ವೈಯಕ್ತಿಕ ನೋವನ್ನು ಮರೆತು ಬದುಕು ಸವೆಸುತ್ತಿರುವ ಅಮಿತಾವಳ್ಳಿಯವರಂತಹ ನೂರಾರು ಅಮ್ಮಂದಿರು ನಮ್ಮ ನಡುವೆಯೇ ಇದ್ದಾರೆ. ಒಂದು ವೇಳೆ, ಪಾಕಿಸ್ತಾನವನ್ನು ಅಪ್ಪಿಕೊಳ್ಳುವ ಆತುರದಲ್ಲಿ ಮೈಮರೆತರೆ ಮತ್ತಷ್ಟು ಅಮ್ಮಂದಿರ ಕಣ್ಣಲ್ಲಿ ಕಂಬನಿಯ ಕೋಡಿ ಹರಿದೀತು.

ಬೆನ್ನಿಗೆ ಚೂರಿಹಾಕುತ್ತಲೇ ಬಂದಿರುವ ಪಾಕಿಸ್ತಾನದ ಜತೆ ಸ್ನೇಹ ಕುದುರಿಸಿಕೊಳ್ಳುವ ಆತುರದಲ್ಲಿ ಸೈನಿಕರ ಬಲಿದಾನ ಮರೆತು ಹೋಗುತ್ತಿರುವುದು ನಾಚಿಕೆಗೇಡು.

ಸವಿತಾ ಕಂಬದ್
ಗುಲ್ಬರ್ಗ

Bullet for bullet ಎನ್ನುತ್ತಿದ್ದ ಡಿ.ಜಿ.ಪಿ. ಜೂಲಿಯಸ್ ರಿಬೆರೋ ಅವರೇ ಅಸಹಾಯಕತೆಯಿಂದ ಕೈಚೆಲ್ಲುವಂತಾಗಿತ್ತು. ಇನ್ನೇನು ಪಂಜಾಬ್ ಸಿಡಿದು ಸ್ವತಂತ್ರಗೊಳ್ಳುತ್ತದೇನೋ ಎಂಬಂತಹ ವಾತಾವರಣ ಸೃಷ್ಟಿಯಾಗಿತ್ತು. ಇಡೀ ರಾಜ್ಯವೇ ಕದಡಿತ್ತು. ಇತ್ತ ಅಜಿತ್ ಸಿಂಗ್ ಸಂಧು, ಸೀನಿಯರ್ ಸೂಪರಿಂಟೆಂಡೆಂಟ್ ಆಫ್ ಪೊಲೀಸ್ ಆಗಿ ಪಂಜಾಬ್‌ನ ತರನ್ ತಾರನ್ ಜಿಲ್ಲೆಗೆ ಕಾಲಿಟ್ಟಾಗ, ಸಾಮಾನ್ಯ ಜನರಿಗಿಂತ ಭಯೋತ್ಪಾದಕರೇ ಹೆಚ್ಚಿದ್ದರು! ಏಕೆಂದರೆ ಅದು ಖಾಲಿಸ್ತಾನಿ ಪ್ರತ್ಯೇಕತಾವಾದಿಗಳ ರಾಜಧಾನಿಯೆನಿಸಿತ್ತು. ತರನ್ ತಾರನ್‌ಗೆ ಕಾಲಿಡುವುದೆಂದರೆ ಸಾವಿಗೆ ಆಹ್ವಾನ ನೀಡಿದಂತೆಯೇ ಎಂಬಂತಿತ್ತು. ಜತೆಗೆ ಸ್ವತಃ ಸಿಖ್ ಪಂಥಕ್ಕೆ ಸೇರಿದ್ದರೂ ಸಂಧು, ಸಿಖ್ಖರ ವಿರುದ್ಧವೇ ಕಠಿಣ ಕ್ರಮ ತೆಗೆದುಕೊಳ್ಳಬೇಕಾಗಿತ್ತು. ಸಾಲದೆಂಬಂತೆ, ಭಯೋತ್ಪಾದಕರ ಎ.ಕೆ.-47 ರೈಫಲ್‌ಗಳೆದುರು ಬ್ರಿಟಿಷರ ಕಾಲದ ಬಂದೂಕು ಹಿಡಿದಿದ್ದ ಪೊಲೀಸರ ಆತ್ಮಸ್ಥೈರ್ಯವೇ ಸತ್ತು ಹೋಗಿತ್ತು. ಆದರೂ ಸಂಧು ಧೃತಿಗೆಡಲಿಲ್ಲ. ಭಯೋತ್ಪಾದಕರ ವಿರುದ್ಧ ಕಾರ್ಯಾಚರಣೆ ಕೈಗೊಳ್ಳುವ ಮೊದಲು ಪೊಲೀಸರಲ್ಲಿ ಆತ್ಮಸ್ಥೈರ್ಯ ತುಂಬುವ ಕಾರ್ಯ ಮಾಡಿದರು.

ಅನಂತರ ಪ್ರಾರಂಭವಾಗಿದ್ದೇ....
ಆಪರೇಶನ್ ವುಡ್‌ರೋಸ್
ಆಪರೇಶನ್ ಲಿಲ್ಲಿವೈಟ್
ಆಪರೇಶನ್ ಫ್ಲಶೌಟ್!

1984ರಿಂದ 94ರವರೆಗೂ ನಡೆದ ಈ ಕಾರ್ಯಾಚರಣೆಗಳ ಮೂಲಕ ಪ್ರತ್ಯೇಕತಾವಾದವನ್ನು ಬೇರು ಸಮೇತ ಕಿತ್ತೊಗೆಯಲಾಯಿತು. ಭಿಂದ್ರನ್‌ವಾಲೆಯ ಟೈಗರ್ ಫೋರ್ಸನ್ನು ಸಂಪೂರ್ಣವಾಗಿ ನಿರ್ನಾಮ ಮಾಡಲಾಯಿತು. ಒಟ್ಟು 13 ವರ್ಷಗಳ ಕಾಲ ನಡೆದ ಸಂಘರ್ಷದ ನಂತರ ಪಂಜಾಬ್‌ನಲ್ಲಿ ಶಾಂತಿಯೇನೋ ಸ್ಥಾಪನೆಯಾಯಿತು. ಆದರೆ ಅಂದು ಜೀವ ಒತ್ತೆಯಿಟ್ಟು, ಪ್ರಾಣದ ಹಂಗುತೊರೆದು ಹೋರಾಡಿದ ಪೊಲೀಸರಿಗೆ ಈ ದೇಶ ಕೃತಜ್ಞತೆ ಅರ್ಪಿಸುವ ಬದಲು ಕೋರ್ಟಿಗೆಳೆಯಿತು!

ಅಜಿತ್ ಸಿಂಗ್ ಸಂಧು ವಿರುದ್ಧ 43 ಕೊಲೆ ಮತ್ತು ಮಾನವ ಹಕ್ಕು ಉಲ್ಲಂಘನೆ ಆರೋಪಗಳನ್ನು ಹೊರಿಸಲಾಯಿತು. ಮೊಕದ್ದಮೆ ಹೂಡಿ ನ್ಯಾಯಾಲಯಕ್ಕೆಳೆಯಲಾಯಿತು. ಭಿಂದ್ರನ್‌ವಾಲೆಯ ರಕ್ಕಸೀ ಕೃತ್ಯವನ್ನು ಮೌನವಾಗಿ ವೀಕ್ಷಿಸುತ್ತಿದ್ದ ಮಾನವ ಹಕ್ಕು ಆಯೋಗ, ಸಂಧು ವಿರುದ್ಧ ಇಲ್ಲ-ಸಲ್ಲದ ಆರೋಪ ಹೊರಿಸಿತು. ದುರದೃಷ್ಟವಶಾತ್, 1996ರಲ್ಲಿ ಸಂಧು ಅವರನ್ನು ಕೆಲಸದಿಂದ ಕಿತ್ತೊಗೆದು ಜೈಲಿಗೆ ತಳ್ಳಲಾಯಿತು! ಕಟ್ಟಾ ಭಯೋತ್ಪಾದಕ ನಿಶಾನ್ ಸಿಂಗ್ ಕಲನೂರ್ ಅದೇ ಜೈಲಿನಲ್ಲಿದ್ದ. ಪಂಜಾಬ್ ಪ್ರತ್ಯೇಕಗೊಳ್ಳುವ ಅಪಾಯ ಎದುರಾಗಿದ್ದಾಗ, ಎಂತಹ ಕಠಿಣ ಕ್ರಮವನ್ನಾದರೂ ತೆಗೆದು ಕೊಂಡು ಪರಿಸ್ಥಿತಿಯನ್ನು ಹತೋಟಿಗೆ ತನ್ನಿ ಎಂದಿದ್ದ ಸರಕಾರ, ಜೈಲಿನಲ್ಲಿ ಸಂಧು ಮೇಲೆ ಆಕ್ರಮಣ ಮಾಡಲು ನಿಶಾನ್ ಸಿಂಗ್‌ಗೆ ಅವಕಾಶ ಮಾಡಿಕೊಟ್ಟಿತು! ಎಲ್ಲರೂ ಎಣಿಸಿದಂತೆಯೇ ಸಂಧು ಮೇಲೆ ಹಲ್ಲೆ ನಡೆಯಿತು. ಹೇಗೋ ಒಂದು ವರ್ಷ

ಜೈಲುವಾಸ ಅನುಭವಿಸಿದ ಸಂಧು, 1997ರಲ್ಲಿ ಬಿಡುಗಡೆಯಾದರು. ಆದರೆ ನ್ಯಾಯಾ'ಲಯ'ಕ್ಕೆ ಅಲೆಯುವುದು ತಪ್ಪಲಿಲ್ಲ.

ಈ ಮಧ್ಯೆ, ಸಂಧು ಅವರಿಗೆ ನೀಡಿದ್ದ ಜಾಮೀನನ್ನು ವಜಾ ಮಾಡಬೇಕು ಎಂದು ಸಲ್ಲಿಸಿದ್ದ ಅರ್ಜಿ ವಿಚಾರಣೆಗೆ ಬಂತು. ಆದರೆ ಜಾಮೀನು ವಜಾಗೊಂಡು ಮತ್ತೆ ಜೈಲು ಸೇರಬೇಕಾಗುತ್ತದೆಂಬ ಬಗ್ಗೆ ಸಂಧು ಮನದಲ್ಲಿ ಯಾವ ಸಂಶಯವೂ ಇರಲಿಲ್ಲ. ಅವತ್ತು 1997, ಮೇ 13. ಸಂಧು ನ್ಯಾಯಾಲಯದ ಮುಂದೆ ಹಾಜರಾಗಲಿಲ್ಲ. ಕಟಕಟೆಯಲ್ಲಿ ನಿಲ್ಲಲಿಲ್ಲ. ''ಕಳಂಕಿತ ಬದುಕಿಗಿಂತ ಸಾವೇ ಮೇಲು'' ಎಂದು ಬರೆದಿಟ್ಟು, ''ಹಿಮಾಲಯನ್ ಕ್ವೀನ್ ಎಕ್ಸ್‌ಪ್ರೆಸ್'' ರೈಲಿಗೆ ತಲೆಕೊಟ್ಟರು! ಆತ್ಮಹತ್ಯೆ ಮಾಡಿಕೊಂಡರು!! ಟ್ರಕ್‌ಗಳಲ್ಲಿ ಹಣ, ಆರ್‌ಡಿಎಕ್ಸ್, ಎಕೆ-47 ರೈಫಲ್‌ಗಳನ್ನು ತುಂಬಿ ಕಳುಹಿಸಿದರೂ ಕೈಗೂಡದ ಪಾಕಿಸ್ತಾನದ ಐಎಸ್‌ಐ ಕನಸನ್ನು ಮಾನವ ಹಕ್ಕುಗಳ ಹೆಸರಲ್ಲಿ ಭಾರತೀಯರೇ ಸಾಕಾರಗೊಳಿಸಿದರು!

ನಾವೆಂತಹ ಕೃತಘ್ನರು?

Bolting the stable after the horse has left! ಅಂದರೆ ಕೊಳ್ಳೆ ಹೊಡೆದ ಮೇಲೆ ಕೋಟೆ ಬಾಗಿಲು ಹಾಕಿದರು ಅಂತಾ ಪೊಲೀಸರನ್ನು ಮೂದಲಿಸುವುದನ್ನು, ಕುಹಕವಾಡುವುದನ್ನು ನಾವೆಂದೂ ಮರೆಯುವುದಿಲ್ಲ. ಆದರೆ ಕೊಳ್ಳೆಹೊಡೆಯುವ ಮೊದಲೇ ಕ್ರಮಕೈಗೊಂಡರೆ ಮಾನವ ಹಕ್ಕು ಉಲ್ಲಂಘನೆ, ಕಾನೂನು ದುರುಪಯೋಗ, ದೌರ್ಜನ್ಯ ವೆನ್ನುತ್ತಾ ಬಾಯಿಬಡಿದುಕೊಳ್ಳುತ್ತೇವೆ. ಹಾಗಾಗಿಯೇ 2002ರಲ್ಲಿ ನಡೆದಿರುವ 1307 ಲಾಕಪ್ ಡೆತ್‌ಗಳನ್ನು ಮುಂದಿಟ್ಟುಕೊಂಡು ಸಂಪಾದಕೀಯ ಬರೆಯುತ್ತಿರುವ ಪತ್ರಿಕೆಗಳು ಪೊಲೀಸ್ ವ್ಯವಸ್ಥೆಯನ್ನೇ ಅಪರಾಧಿ ಸ್ಥಾನದಲ್ಲಿ ನಿಲ್ಲಿಸಿವೆ. ಆದರೆ 2001ರಲ್ಲಿ ಹತ್ಯೆಯಾಗಿರುವ ಒಟ್ಟು 828 ಪೊಲೀಸರು ಮತ್ತು ಅವರನ್ನೇ ನಂಬಿಕೊಂಡಿರುವ ಹೆಂಡತಿ-ಮಕ್ಕಳ ಗತಿಯೇನು? ಅಪ್ಪ-ಅಮ್ಮಂದಿರಿಗೆ ಆಸರೆ ಯಾರು? ಇದಾವುದೂ ನಮಗಾಗಲಿ, ಮಾಧ್ಯಮಗಳಿಗಾಗಲಿ ಕಾಣುತ್ತಿಲ್ಲ.

ಒಬ್ಬ ಸಾಮಾನ್ಯ ಸೈನಿಕ ಸತ್ತರೂ, ಆತ ಸೇನೆಯಲ್ಲಿ ಅಡುಗೆ ಭಟ್ಟನ ಕೆಲಸ ಮಾಡುತ್ತಿದ್ದರೂ ಪರವಾಗಿಲ್ಲ. ನಾವು ಕಣ್ಣೀರು ಸುರಿಸುತ್ತೇವೆ. ಹುತಾತ್ಮರಾದರು, ಪ್ರಾಣತ್ಯಾಗ ಮಾಡಿದರು, ವೀರ ಮರಣವನ್ನಪ್ಪಿದರು, ದೇಶಕ್ಕಾಗಿ ಮಡಿದರು ಎಂದು ಗುಣಗಾನ ಮಾಡುತ್ತೇವೆ. ಹೊಗಳಿ ಅಟ್ಟಕ್ಕೇರಿಸುತ್ತೇವೆ. ಹೊತ್ತು ಮೆರೆಯುತ್ತೇವೆ. ಒಬ್ಬ ಮಾಜಿ ಸಚಿವ ಅಥವಾ ಭ್ರಷ್ಟ ರಾಜಕಾರಣಿ ಸತ್ತರೂ ದೇಶಸೇವೆ ಮಾಡಿದರು, ಜನಸೇವೆಯೇ ಜನಾರ್ದನನ ಸೇವೆ ಎಂದು ನಂಬಿದ್ದರು ಎಂದು ಪುಟಗಟ್ಟಲೆ ಬರೆಯುತ್ತೇವೆ. ಹಾಲಿ ಸಚಿವರು ಹೂಗುಚ್ಛ ಇಟ್ಟು ಕಂಬನಿ ಮಿಡಿದು ಹೋಗುತ್ತಾರೆ. ಸಕಲ ಸರಕಾರಿ ಗೌರವಗಳೊಂದಿಗೆ ಅಂತ್ಯಸಂಸ್ಕಾರ ಮಾಡುತ್ತೇವೆ. ಆದರೆ ಮಳೆ, ಚಳಿಯೆನ್ನದೆ ಮಣಭಾರದ ಬಂದೂಕು ಹೊತ್ತು ಹಗಲೂ ರಾತ್ರಿ ಗಸ್ತು ತಿರುಗುವ 'ಬೀಟ್'

ಪೊಲೀಸರು ನಮಗೆ ಜೋಕರ್‌ಗಳಂತೆ, ಭ್ರಷ್ಟಾಚಾರದ ಪ್ರತಿರೂಪದಂತೆ ಕಾಣುತ್ತಾರೆ. ಏಕೆಂದರೆ ನಮಗೆ ಮನೆಯ ಬೀಗ ಮತ್ತು ಅಗುಳಿಯ ಮೇಲೆಯೇ ಹೆಚ್ಚು ವಿಶ್ವಾಸ. ಆದರೆ ಪೊಲೀಸರ ಹೆದರಿಕೆಯಿಂದಾಗಿ ಕಾನೂನು ಪಾಲನೆಯಾಗುತ್ತಿದೆ, ಸುವ್ಯವಸ್ಥೆ ನೆಲೆಗೊಂಡಿದೆ ಎಂಬ ಕನಿಷ್ಠ ಜ್ಞಾನವೂ ನಮಗಿರುವುದಿಲ್ಲ.

ಹಾಗಂತ ಪೊಲೀಸರೇನು ಸಾಚಾಗಳಲ್ಲ. ಉಪ್ಪಾರಪೇಟೆ, ಕಲಾಸಿಪಾಳ್ಯದಂತಹ ಸ್ಟೇಶನ್‌ಗಳಲ್ಲಿ ಕೆಲಸ ಮಾಡಿ ಬಾರ್ ಆ್ಯಂಡ್ ರೆಸ್ಟೋರೆಂಟ್‌ಗಳ ಮಾಲೀಕರಾಗಿರುವ ಕಾನ್‌ಸ್ಟೇಬಲ್‌ಗಳೂ ಇದ್ದಾರೆ. ಆದರೆ 5 ಸಾವಿರ ಸಂಬಳ ತೆಗೆದುಕೊಂಡು ಅಬ್ಬೇಪಾರಿ ಜೀವನ ನಡೆಸುತ್ತಿರುವ ಸಾವಿರಾರು ಬಡ ಕಾನ್‌ಸ್ಟೇಬಲ್‌ಗಳನ್ನು ಭ್ರಷ್ಟರ ಗುಂಪಿಗೆ ಸೇರಿಸುವುದು ಎಷ್ಟು ಸರಿ? ಟಿ.ಆರ್. ಶ್ರೀನಿವಾಸಲು, ಕೊಲಾಸೋ, ರೇವಣಸಿದ್ಧಯ್ಯ, ಸಾಂಗ್ಲಿಯಾನಾ, ಜೆ.ಜೆ. ಆನಂದನ್, ಎ.ಎ. ಭಾಸ್ಕರ್ ಅವರಂತಹ 'ಬೆನ್ನಿಹಿನ್ ಪ್ರೇಮಿ' ಪೊಲೀಸ್ ಅಧಿಕಾರಿಗಳಿಂದಾಗಿ ಎಲ್ಲಾ ಪೊಲೀಸರನ್ನೂ ಅವಿವೇಕಿಗಳ ಗುಂಪಿಗೆ ಸೇರಿಸುವುದು ಸರಿಯೇ? ಇನ್ನು ಕೆಲವರು, ಅಧಿಕಾರದಲ್ಲಿದ್ದಾಗ ತೋರಿಸಲಾಗದ ಪೌರುಷವನ್ನು ಪುಸ್ತಕ ಬರೆದು ಪ್ರದರ್ಶಿಸುತ್ತಾರೆ. ಅಂಥವರನ್ನು ದೃಷ್ಟಿಯಲ್ಲಿಟ್ಟುಕೊಂಡು ಪೊಲೀಸರೆಲ್ಲ ಪುಕ್ಕಲರು, ನಿರರ್ಥಕರು ಎನ್ನುವುದೂ ತಪ್ಪಲ್ಲವೆ?

ಪೊಲೀಸರನ್ನು ನಾವೆಷ್ಟೇ ತೆಗಳಬಹುದು. ಅವರು ಎಸಗುವ ದೌರ್ಜನ್ಯದ ಬಗ್ಗೆ ಹುಯಿಲೆಬ್ಬಿಸಬಹುದು. ಆದರೆ ನಮ್ಮಷ್ಟೂ ಸ್ವಾತಂತ್ರ್ಯ ಪೊಲೀಸರಿಗಿಲ್ಲ. ಏಕೆಂದರೆ ಸ್ವಾತಂತ್ರ್ಯ ಬಂದು 58 ವರ್ಷಗಳಾದರೂ ಇಂದಿಗೂ ಬ್ರಿಟಿಷರ ಕಾಲದ ''ಕಲೋನಿಯಲ್ ಸಿಸ್ಟಮ್'' ನಮ್ಮಲ್ಲಿದೆ. ಅಂದರೆ ಆಳುವವರ ಕೈಲಿ ಪೊಲೀಸರ ಲಂಗು- ಲಗಾಮಿದೆ. ರೂಲರ್ಸ್ ಹೇಳಿದಂತೆ ಕೇಳಬೇಕು. ಹಾಗಾಗಿಯೇ ಬೆನ್ನಿಹಿನ್‌ನಂತಹ ಅವಿವೇಕಿಗೂ ಭದ್ರತೆ ನೀಡಬೇಕಾಗಿದೆ. 10 ಸಾವಿರ ಪೊಲೀಸರು ಬೆಳಗಿನಿಂದ ಸಂಜೆವರೆಗೂ ಬಿಸಿಲಿನಲ್ಲಿ ಬೇಯುತ್ತಿದ್ದಾರೆ. ಆದರೂ ಗಲಾಟೆ, ದೊಂಬಿಯಾದರೆ, ಆಸ್ತಿ-ಪಾಸ್ತಿಗೆ ಹಾನಿಯುಂಟಾದರೆ, ವಾಹನಗಳು ಜಖಂಗೊಂಡರೆ ದೂರುವುದು ಪೊಲೀಸರನ್ನೇ. ನಮ್ಮ ಮುಖ್ಯಮಂತ್ರಿ ಧರ್ಮಸಿಂಗ್ ಹಾಗೂ ಉಪಮುಖ್ಯಮಂತ್ರಿ ಸಿದ್ಧರಾಮಯ್ಯನವರು ಪೊಲೀಸರಿಗೆ "Functional Autonomy" ಕೊಟ್ಟಿಲ್ಲ ಎಂಬುದು ಎಷ್ಟು ಜನರಿಗೆ ಗೊತ್ತು? ಒಂದು ವೇಳೆ ಪೊಲೀಸರಿಗೆ ವೃತ್ತಿ ಸ್ವಾತಂತ್ರ್ಯ ಕೊಟ್ಟಿದ್ದರೆ ಮಾಟ-ಮಂತ್ರ ಮಾಡುವ ಬೆನ್ನಿಹಿನ್, ಈ ವೇಳೆಗಾಗಲೇ ಸಿಪಿಸಿ ಅಥವಾ ಐಪಿಸಿಯಡಿ ಪೊಲೀಸರ ಆತಿಥ್ಯ ಸ್ವೀಕರಿಸುತ್ತಿರುತ್ತಿದ್ದ!

ಪೊಲೀಸರು ಎಷ್ಟೇ ಕಾರ್ಯದಕ್ಷರಾಗಿದ್ದರೂ ಆಳುವವರ ಅಡಿಯಾಳುಗಳಾಗಿರಲೇ ಬೇಕಾಗುತ್ತದೆ. ದತ್ತಪೀಠದ ವಿಚಾರ ಬಂದಾಗ ಶೋಭಾಯಾತ್ರೆಯನ್ನು ತಡೆಯಿರಿ, ಬಡಿಯಿರಿ, ಬಂಧಿಸಿ ಜೈಲಿಗೆ ತಳ್ಳಿರಿ ಅಂತಾ ಸರಕಾರ ಆದೇಶ ನೀಡಿತು. ಸುಮಾರು 14 ಸಾವಿರ ಪೊಲೀಸರು

ಮರುಮಾತನಾಡದೆ ಆದೇಶವನ್ನು ಪಾಲಿಸಿದರು.

ಅದೇ ಪೊಲೀಸರಿಗೆ ಈಗ ಬೆನ್ನಿಹಿನ್‌ಗೆ ಭದ್ರತೆ ನೀಡುವ ಜವಾಬ್ದಾರಿ ನೀಡಲಾಗಿದೆ. ಅದನ್ನೂ ಶಿರಸಾ ಪಾಲಿಸುತ್ತಿದ್ದಾರೆ. ಇಂತಹ ಕೈಗೊಂಬೆ ಕೆಲಸ ಬೇಡ, "Functional Autonomy" ಅಥವಾ ವೃತ್ತಿ ಸ್ವಾತಂತ್ರ್ಯ ನೀಡಿ ಎಂದು ಕಳೆದ 50 ವರ್ಷಗಳಿಂದ ಒತ್ತಾಯಿಸುತ್ತಾ ಬಂದಿದ್ದರೂ ಯಾವುದೇ ರಾಜ್ಯ ಸರಕಾರಗಳು ದೃಷ್ಟಿಹಾಯಿಸಿಲ್ಲ. ಈ ಬಗ್ಗೆ ಪರಿಶೀಲನೆ ನಡೆಸುವುದಾಗಿ ಭರವಸೆ ನೀಡಿದ್ದ ಆಡ್ವಾಣಿಯವರು ಕ್ರಮಕೈಗೊಳ್ಳುವ ಮೊದಲು ಅಧಿಕಾರವನ್ನೇ ಕಳೆದುಕೊಂಡರು. ಹಾಗಾಗಿಯೇ ಪುಟಗೋಸಿ ಕೌನ್ಸಿಲರ್‌ಗಳು, ಗ್ರಾಮಪಂಚಾಯಿತಿಯ ಸದಸ್ಯರೂ ಪೊಲೀಸರ ಮೇಲೆ ಸವಾರಿ ಮಾಡಲು ಯತ್ನಿಸುತ್ತಾರೆ. ತಮ್ಮ ದಾಳಗಳಂತೆ ನಡೆಸಿಕೊಳ್ಳುತ್ತಾರೆ. ಹೆಬ್ಬೆಟ್ಟು ಒತ್ತುವ ಚಿಲ್ಲರೆ ರಾಜಕಾರಣಿಗೆ ಡಿಗ್ರಿ ಮಾಡಿರುವ Qualified ಪೊಲೀಸ್ ಅಧಿಕಾರಿ ಸಲಾಮು ಹೊಡೆಯಬೇಕು.

ಇನ್ನು ಮಾತೆತ್ತಿದರೆ ಹೈಕೋರ್ಟ್ ಮತ್ತು ಸುಪ್ರೀಂಕೋರ್ಟ್‌ಗಳು ಬಿಹಾರದ ಬೇವೂರ್ ಜೈಲಿನ ಸೂಪರಿಂಟೆಂಡೆಂಟ್ ಮೇಲೆ ಟೀಕಾ ಪ್ರಹಾರ ಮಾಡುತ್ತದೆ. ಆದರೆ ನ್ಯಾಯಾಲಯಕ್ಕೆ ಅಂಜಿ ಪಪ್ಪು ಯಾದವ್‌ನ ಕೈಲಿರುವ ಮೊಬೈಲ್ ಕಿತ್ತುಕೊಂಡರೆ, ಆತನ ಚೇಲಾಗಳಿಗೆ ಜೈಲಿನೊಳಕ್ಕೆ ಪ್ರವೇಶ ನೀಡದಿದ್ದರೆ ಬಂದೂಕು ಬಾಯ್ತೆರೆಯುತ್ತದೆ. ಸೂಪರಿಂಟೆಂಡೆಂಟ್ ಹೆಣವಾಗಬೇಕಾಗುತ್ತದೆ. ಏಕೆಂದರೆ ಪಪ್ಪುವಿನಂತಹ ಪರಮಪಾಪಿಗೆ ಲಾಲುವಿನ ಶ್ರೀರಕ್ಷೆಯಿದೆ. ಪೊಲೀಸರ ಈ ಪಾಡು ನ್ಯಾಯಾಲಯಕ್ಕೇನು ಗೊತ್ತು?

ಇತ್ತ 500ಕ್ಕೂ ಅಧಿಕ ಪೊಲೀಸರು ಮತ್ತು ಸಾಮಾನ್ಯ ಜನರ ರಕ್ತ ಹೀರಿರುವ ನಕ್ಸಲೀಯರ ಬಗ್ಗೆ ಅನುಕಂಪ ಸೃಷ್ಟಿಸಲು ಪ್ರಯತ್ನಿಸುತ್ತಿರುವ ಕನ್ನಡದ ಕೆಲ ಮೆಗಾ ಧಾರಾವಾಹಿಗಳ ನಿರ್ದೇಶಕರಿಗೆ ಖಾಕಿ ತೊಟ್ಟವರ ನೋವು, ವೇದನೆ ಅರ್ಥವಾಗುವುದಿಲ್ಲ. ಏಕೆಂದರೆ ತಾವು ಅನುಭವಿಸುತ್ತಿರುವ 'ಮುಕ್ತ' ಸ್ವಾತಂತ್ರ್ಯದ ಹಿಂದಿರುವ ಪೊಲೀಸರ ಪರಿಶ್ರಮದ ಬಗ್ಗೆ ಅವರಿಗೆ ಗೌರವವಿಲ್ಲ. ಇಂತಹ ವ್ಯಕ್ತಿಗಳಿಂದ ಪ್ರಭಾವಿತವಾಗಿರುವ ಸಮಾಜ ಮತ್ತು ರಾಜಕಾರಣಿಗಳೆಂಬ ಪೊಲಿಟಿಕಲ್ ಬಾಸ್‌ಗಳ ನಡುವೆ ಅಡಕತ್ತರಿಯಲ್ಲಿ ಸಿಲುಕಿರುವ ಪೊಲೀಸರದ್ದು ನಿಜಕ್ಕೂ Thankless job (ಫಲವಿಲ್ಲದ ಪರಿಶ್ರಮ)!! ಅವರ ಸೇವೆಗೆ ಮಾನ, ಮಾನ್ಯತೆ ಎರಡೂ ಇಲ್ಲ. ಆದರೂ ಜೀವ ತೇಯುವುದು ತಪ್ಪುವುದಿಲ್ಲ.

ಹಾಗಾಗಿಯೇ ಸಂಧು ನಮಗೆ ನೆನಪಾಗುವುದಿಲ್ಲ.

ಪೊಲೀಸ್ ವೃತ್ತಿಯ ಬಗ್ಗೆ ಗೌರವ ಮೂಡಿಸುವಂತಹ ಲೇಖನ. ಎಲ್ಲ ಪೊಲೀಸರನ್ನೂ ಒಂದೇ ತಕ್ಕಡಿಯಲ್ಲಿ ತೂಗುವುದನ್ನು ಜನರೂ ಬಿಡಬೇಕು.

ಕಲ್ಯಾಣಯ್ಯ
ಅರಕಲಗೂಡು

## Midwife!!

ಈಕೆ ನರ್ಸ್ ಅಲ್ಲದಿದ್ದರೂ ಒಂದು ರೀತಿಯಲ್ಲಿ ಹಾಗೇ ಕರೆಯಬಹುದು. ಹೆರಿಗೆಗೆ ಮೊದಲು ಗರ್ಭಿಣಿಯ ಯೋಗಕ್ಷೇಮ ನೋಡಿಕೊಳ್ಳುವ ಮತ್ತು ಹೆರಿಗೆಯ ನಂತರ ತಾಯಿ ಹಾಗೂ ಮಗುವಿನ ಶುಶ್ರೂಷೆ ಮಾಡುವವಳೇ ಮಿಡ್‌ವೈಫ್ ಅಥವಾ ಸೂಲಗಿತ್ತಿ!

1970ರ ನವೆಂಬರ್‌ನಲ್ಲಿ ಬೀಸಿದ ಭಾರಿ ಚಂಡಮಾರುತಕ್ಕೆ ಸಿಲುಕಿ ಪೂರ್ವ ಪಾಕಿಸ್ತಾನ(ಬಾಂಗ್ಲಾದೇಶ)ದಲ್ಲಿ 2.5 ಲಕ್ಷ ಜನರು ಪ್ರಾಣ ಕಳೆದುಕೊಂಡಿದ್ದರು. ಆದರೆ ಪಾಕಿಸ್ತಾನದ ಚುಕ್ಕಾಣಿ ಹಿಡಿದವರು ನೋವಿಗೆ ಸ್ಪಂದಿಸುವುದನ್ನೇ ಮರೆತಿದ್ದರು. ಉದಾಸೀನ ತೋರಿದ್ದರು. ಅದು ಜನರನ್ನು ಕುಪಿತಗೊಳಿಸಿತ್ತು. ಪರಿಣಾಮವಾಗಿ 1970, ಡಿಸೆಂಬರ್‌ನಲ್ಲಿ ನಡೆದ ಸಾರ್ವತ್ರಿಕ ಚುನಾವಣೆಯಲ್ಲಿ ಶೇಕ್ ಮುಜಿಬುರ್ ರೆಹಮಾನ್ ಅವರ ಅವಾಮಿ ಲೀಗ್ ಪೂರ್ವ ಪಾಕಿಸ್ತಾನದ ಒಟ್ಟು 169 ಸ್ಥಾನಗಳಲ್ಲಿ 167 ಸ್ಥಾನಗಳನ್ನು ಗೆದ್ದುಕೊಂಡಿತು. ಹೀಗೆ 313 ಸ್ಥಾನಗಳ ಪಾಕ್ ಸಂಸತ್ತಿನಲ್ಲಿ ಅವಾಮಿ ಲೀಗ್ ಬಹುಮತ ಪಡೆಯಿತು! ಅಸಡ್ಡೆ ತೋರುತ್ತಿದ್ದವರಿಗೆ ಬಿಸಿ ತಟ್ಟತೊಡಗಿತು. ಪೂರ್ವ ಮತ್ತು ಪಶ್ಚಿಮ(ಪಾಕ್) ಪಾಕಿಸ್ತಾನದ ರಾಜಕಾರಣಿಗಳ ನಡುವಿನ ಭಿನ್ನಾಭಿಪ್ರಾಯ ಪ್ರಮುಖ ಅಂತಾರಾಷ್ಟ್ರೀಯ ಸಮಸ್ಯೆಯಾಗಿ ಮಾರ್ಪಟ್ಟಿತು. ತಲ್ಲಣಗೊಂಡ ಯಾಹ್ಯಾಖಾನ್ 1971, ಮಾರ್ಚ್ 25ರಂದು ಸೇನೆಗೆ ನಿರ್ದೇಶನ ನೀಡಿದರು. ರಾಜಕೀಯ ವೈರಿಗಳನ್ನು ಹತ್ತಿಕ್ಕುವ ಕಾರ್ಯ ಪ್ರಾರಂಭವಾಯಿತು. ಒಂಬತ್ತು ತಿಂಗಳಲ್ಲಿ 2 ದಶಲಕ್ಷಕ್ಕೂ ಅಧಿಕ ಜನರು ಕೊಲೆಯಾದರು. ಒಂದು ಕೋಟಿ ಬಾಂಗ್ಲಾದೇಶಿಯರು ಭಾರತಕ್ಕೆ ಓಡಿ ಬಂದರು. ಪಾಕ್ ಸೈನಿಕರ ಕಾಮ ಪಿಪಾಸೆಗೆ ಸಿಲುಕಿ ಸಾವಿರಾರು ಮಹಿಳೆಯರು ಮಾನ ಕಳೆದುಕೊಂಡರು.

ಆಗ ಗರ್ಭ ತಳೆದಿದ್ದೇ ಬಾಂಗ್ಲಾದೇಶವೆಂಬ ಪ್ರತ್ಯೇಕ ರಾಷ್ಟ್ರ ರಚನೆಯ ಕಲ್ಪನೆ. ಅಂದು ಭಾರತ ಸೂಲಗಿತ್ತಿಯಾಯಿತು (Midwife)!

1971, ಡಿಸೆಂಬರ್ 17ರಂದು ಪಾಕ್ ಸೇನೆ ಭಾರತಕ್ಕೆ ಶರಣಾಗುವುದರೊಂದಿಗೆ ಬಾಂಗ್ಲಾದೇಶವೇನೋ ಉದಯಿಸಿತು. ಆದರೆ ನಮಗೆ ದೊರೆತ ಪ್ರತಿಫಲವಾದರೂ ಏನು? ಇದೆಲ್ಲ ಕಳೆದು 33 ವರ್ಷಗಳಾಗಿವೆ. ಆಗ Midwife ಆಗಿದ್ದ ಭಾರತ ಈಗ 2 ಕೋಟಿ ವಿದ್ರೋಹಿ ಬಾಂಗ್ಲಾದೇಶಿಯರಿಗೆ Legal Patron ಆಗಬೇಕಾಗಿ ಬಂದಿದೆ!

ಈ ಮಾತನ್ನು ಒಪ್ಪುವುದಿಲ್ಲವೆ?

ಅಸ್ಸಾಂನಲ್ಲಿ ತರುಣ್ ಗೊಗೋಯಿ ನೇತೃತ್ವದ ಕಾಂಗ್ರೆಸ್ ಸರಕಾರವಿದೆ. ರಾಜ್ಯಪಾಲರಾದ ಅಜಯ್ ಸಿಂಗ್ ಕೂಡ ಕಾಂಗ್ರೆಸ್‌ನಿಂದ ನೇಮಕಗೊಂಡವರೇ. ಇಂತಹ ಅಜಯ್ ಸಿಂಗ್ ಕೇಂದ್ರ ಸರಕಾರಕ್ಕೆ ಸಲ್ಲಿಸಿರುವ ಗೌಪ್ಯ ವರದಿ ಏಪ್ರಿಲ್ 14 ರಂದು ಮಾಧ್ಯಮಗಳಿಗೆ ಸೋರಿಹೋಗಿದೆ. ಅಸ್ಸಾಂನಲ್ಲಿರುವ ತೆರೆದ ಗಡಿಯೊಂದರ ಮೂಲಕವೇ ಪ್ರತಿದಿನ 6 ಸಾವಿರ ಬಾಂಗ್ಲಾದೇಶಿ ಮುಸ್ಲಿಮರು ಭಾರತಕ್ಕೆ ನುಸುಳುತ್ತಿದ್ದಾರೆ. ಈ ಹಿಂದೆ ಬಾಂಗ್ಲಾ ಅತಿಕ್ರಮಣಕಾರರ ಬಗ್ಗೆ

ಧ್ವನಿಯೆತ್ತಿದರೆ ಜಾತ್ಯತೀತವಾದಿಗಳು ಕೋಮುಬಣ್ಣ ಬಳಿಯುತ್ತಿದ್ದರು. ಆದರೆ ಏಪ್ರಿಲ್ 15ರಂದು ದಿಲ್ಲಿಯಲ್ಲಿ ನಡೆದ ಮುಖ್ಯಮಂತ್ರಿಗಳ ಸಭೆಯಲ್ಲಿ ಪಶ್ಚಿಮ ಬಂಗಾಳ, ಮೇಘಾಲಯ, ಅರುಣಾಚಲ ಪ್ರದೇಶ, ಮಿಜೋರಾಮ್, ಮಣಿಪುರ ಮತ್ತು ನಾಗಾಲ್ಯಾಂಡ್‌ಗಳಂತಹ ಈಶಾನ್ಯ ರಾಜ್ಯಗಳಲ್ಲದೆ ಮಹಾರಾಷ್ಟ್ರದ ಮುಖ್ಯಮಂತ್ರಿಯೂ ಬಾಂಗ್ಲಾ ಅತಿಕ್ರಮಣಕಾರರ ಬಗ್ಗೆ ದೂರು ಹೇಳಿದ್ದಾರೆ. ಪಾಕಿಸ್ತಾನದ ಐಎಸ್‌ಐ ಜತೆ ಸಂಪರ್ಕ ಹೊಂದಿರುವ ಅತಿಕ್ರಮಣಕಾರರು ತಂದೊಡ್ಡುತ್ತಿರುವ ಅಪಾಯದ ಬಗ್ಗೆ ಆತಂಕ ವ್ಯಕ್ತಪಡಿಸಿದ್ದಾರೆ. ಅಲ್ಲದೆ ಮುಂಬೈನಲ್ಲಿರುವ 75 ಸಾವಿರ ಬಾರ್ ಗರ್ಲ್‌ಗಳಲ್ಲಿ ಶೇ.5ರಷ್ಟು ಬಾಂಗ್ಲಾದೇಶಿಯರಿದ್ದಾರೆ ಎಂದು ಮಹಾರಾಷ್ಟ್ರ ಸರಕಾರವೇ ಸ್ಪಷ್ಟಪಡಿಸಿದೆ. ಒಂದು ವೇಳೆ, ಸೂಕ್ತ ಕ್ರಮ ಕೈಗೊಳ್ಳದಿದ್ದರೆ ಅಸ್ಸಾಂನ ಧುಬ್ರಿ ಮತ್ತು ಗೋಲ್‌ಪುರ ಜಿಲ್ಲೆಗಳು ಬಾಂಗ್ಲಾ ಜತೆ ಸೇರ್ಪಡೆಗೊಳ್ಳಲು ಹೋರಾಟ ಆರಂಭಿಸಬಹುದು ಎಂದು 1999ರಲ್ಲಿ ಆಗಿನ ರಾಜ್ಯಪಾಲ ಲೆಫ್ಟಿನೆಂಟ್ ಜನರಲ್ ಎಸ್.ಕೆ. ಸಿನ್ಹಾ ರಾಷ್ಟ್ರಪತಿ ಕೆ. ಆರ್. ನಾರಾಯಣನ್ ಅವರಿಗೆ 42 ಪುಟಗಳ ವರದಿ ಸಲ್ಲಿಸಿದ್ದರು.

ಆತಂಕ ಪಡಲೇಬೇಕಾಗಿದೆ.

ಏಕೆಂದರೆ ಬಾಂಗ್ಲಾದೇಶಿ ಅತಿಕ್ರಮಣಕಾರರ ಸಂಖ್ಯೆ ಯಾವ ಮಟ್ಟಿಗೆ ಬೆಳೆದಿದೆಯೆಂದರೆ ಅಸ್ಸಾಂನಲ್ಲಿ ಯಾವುದೇ ಪಕ್ಷ ಅಧಿಕಾರಕ್ಕೆ ಬರಬೇಕಾದರೂ ಬಾಂಗ್ಲಾ ಮುಸ್ಲಿಮರನ್ನು ಓಲೈಸಲೇಬೇಕಾಗಿದೆ. ಹಾಗಾಗಿಯೇ ಅತಿ ಹೆಚ್ಚು ಸಮಸ್ಯೆಗೊಳಗಾಗಿದ್ದರೂ, ರಾಜ್ಯಪಾಲ ಅಜಯ್ ಸಿಂಗ್ ಗಂಭೀರ ವರದಿ ನೀಡಿದ್ದರೂ, ಮುಖ್ಯಮಂತ್ರಿಗಳ ಸಭೆಯಲ್ಲಿ ತರುಣ್ ಗೊಗೋಯಿ ತುಟಿಬಿಚ್ಚದೆ ತೆಪ್ಪಗಿದ್ದರು!

ಇಂತಹ ದೌರ್ಬಲ್ಯವನ್ನು ಬಳಸಿಕೊಳ್ಳುತ್ತಿರುವ ಜಮಾತೆ ಉಲೆಮಾ ಹಿಂದ್‌ನ ರಾಷ್ಟ್ರೀಯ ಅಧ್ಯಕ್ಷ ಜಮಿಯತ್ ಮೌಲಾನಾ ಅಸದ್ ಮದನಿ, ಇನ್ನು ಆರು ತಿಂಗಳೊಳಗೆ ಉದ್ಯೋಗವಲ್ಲದೆ, ಲೋಕಸಭೆ ಹಾಗೂ ವಿಧಾನಸಭೆ ಸ್ಥಾನಗಳಲ್ಲೂ ಮುಸ್ಲಿಮರಿಗೆ ಮೀಸಲು ನೀಡದಿದ್ದರೆ ಸರಕಾರವನ್ನು ಪತನಗೊಳಿಸುವುದಾಗಿ ಗೊಗೋಯಿಗೆ ಬೆದರಿಕೆ ಹಾಕಿದ್ದಾರೆ. ಅಷ್ಟೇ ಅಲ್ಲ. ಬಾಂಗ್ಲಾ ಅತಿಕ್ರಮಣಕಾರರಿಂದಾಗಿ ನಾಗಾಲ್ಯಾಂಡ್, ಅರುಣಾಚಲ ಪ್ರದೇಶ, ಮಿಜೋರಾಮ್ ಮತ್ತು ಸಿಕ್ಕಿಂನ ಧರ್ಮವಾರು ಜನಸಂಖ್ಯೆಯಲ್ಲಿ ತೀವ್ರ ಬದಲಾವಣೆ ಕಂಡು ಬಂದಿದ್ದು ಮುಸ್ಲಿಮರ ಪ್ರಮಾಣ ಶೇ.19ರಿಂದ 25ರವರೆಗೂ ಏರಿದ್ದರೆ, ಹಿಂದೂಗಳು ಅಲ್ಪಸಂಖ್ಯಾತ ಸ್ಥಾನಕ್ಕಿಳಿದಿದ್ದಾರೆ. ಚಿಂತೆಗೀಡಾಗಿರುವ ದಿಲ್ಲಿ ಹೈಕೋರ್ಟ್, ಬಾಂಗ್ಲಾ ಅತಿಕ್ರಮಣಕಾರರನ್ನು ತಡೆಯಲು ಯಾವ ಕ್ರಮ ಕೈಗೊಳ್ಳಲಾಗಿದೆ ಎಂಬ ಬಗ್ಗೆ ಮೇ.18 ರೊಳಗೆ ವರದಿ ನೀಡಬೇಕೆಂದು ಸರಕಾರಕ್ಕೆ ಸೂಚನೆ ನೀಡಿದೆ. ಆತಂಕಕಾರಿ ವಿಚಾರವೆಂದರೆ, ಅಸ್ಸಾಂನ ಉಲ್ಫಾ, ದಿ ನ್ಯಾಷನಲ್ ಡೆಮೋಕ್ರಾಟಿಕ್ ಫ್ರಂಟ್ ಆಫ್ ಬೋಡೋಲ್ಯಾಂಡ್, ಮಣಿಪುರದ ದಿ ಪೀಪಲ್ಸ್ ಲಿಬರೇಶನ್ ಆರ್ಮಿ, ದಿ ಯುನೈಟೆಡ್ ನ್ಯಾಷನಲ್ ಲಿಬರೇಶನ್ ಫ್ರಂಟ್, ದಿ ಮಣಿಪುರ್ ಪೀಪಲ್ಸ್ ಲಿಬರೇಶನ್ ಫ್ರಂಟ್, ದಿ ರೆವಲ್ಯೂಷನರಿ ಪೀಪಲ್ಸ್ ಫ್ರಂಟ್, ಮೇಘಾಲಯದ ದಿ ಅಚಿಕ್ ನ್ಯಾಷನಲ್ ಲಿಬರೇಶನ್ ಕೌನ್ಸಿಲ್, ದಿ ಹಿನ್ನಿವೆಟ್ರೆಪ್ ನ್ಯಾಷನಲ್ ಲಿಬರೇಶನ್ ಕೌನ್ಸಿಲ್, ನಾಗಾಲ್ಯಾಂಡ್‌ನ ದಿ ನ್ಯಾಷನಲ್

ಸೋಷಿಯಲಿಸ್ಟ್ ಕೌನ್ಸಿಲ್ ಆಫ್ ನಾಗಾಲ್ಯಾಂಡ್ ಮತ್ತು ತ್ರಿಪುರಾದ ದಿ ಆಲ್ ತ್ರಿಪುರಾ ಟೈಗರ್ಸ್ ಫೋರ್ಸ್ ಹಾಗೂ ದಿ ಲಿಬರೇಶನ್ ಫ್ರಂಟ್ ಆಫ್ ತ್ರಿಪುರಾದ 195 ಭಯೋತ್ಪಾದಕ ಮತ್ತು ಪ್ರತ್ಯೇಕತಾವಾದಿಗಳ ತರಬೇತಿ ಕೇಂದ್ರಗಳು ಬಾಂಗ್ಲಾದಲ್ಲಿವೆ. ಬಾಂಗ್ಲಾ ಪ್ರಧಾನಿ ಬೇಗಂ ಖಲೀದಾ ಜಿಯಾ ಅವರ ಅಭಯಹಸ್ತ ಈ ಸಂಘಟನೆಗಳಿಗಿದೆ. ಏಪ್ರಿಲ್ 16ರಂದು ಬಾಂಗ್ಲಾಕ್ಕೆ ಭೇಟಿ ನೀಡಿದ್ದ ಅಮೆರಿಕದ ಪೆಸಿಫಿಕ್ ನೌಕಾ ತುಕಡಿಯ ಅಡ್ಮಿರಲ್ ವಿಲಿಯಂ ಫಾಲೋನ್, 'ಹಲವಾರು ಅಂತಾರಾಷ್ಟ್ರೀಯ ಭಯೋತ್ಪಾದಕ ಸಂಘಟನೆಗಳು ಬಾಂಗ್ಲಾದೇಶದಲ್ಲಿ ನೆಲೆ ಹೊಂದಿವೆ. ಬಾಂಗ್ಲಾ ಸರಕಾರದ ಸಕಲ ಪ್ರೋತ್ಸಾಹದೊಂದಿಗೆ ಅಲ್ ಖಾಯಿದಾ ಮತ್ತು ಹರ್ಕತುಲ್ ಜಿಹಾದ್‌ನಂತಹ ಸಂಘಟನೆಗಳು ನೆರೆಯ ರಾಷ್ಟ್ರಗಳಿಗೆ ಭಾರಿ ಪ್ರಮಾಣದ ಶಸ್ತ್ರಾಸ್ತ್ರಗಳನ್ನು ಕಳ್ಳಸಾಗಣೆ ಮಾಡುತ್ತಿವೆ. ಇದಕ್ಕೆ ನಮ್ಮ ಬಳಿ ಸಾಕ್ಷ್ಯಾಧಾರವಿದೆ' ಎಂದು ನೇರವಾಗಿ ಹೇಳಿದ್ದಾರೆ. ಈ ಮಧ್ಯೆ, ಖಲೀದಾ ಜಿಯಾ ಅವರ ಮಿತ್ರಪಕ್ಷವಾದ ಜಮಾತೆ ಇಸ್ಲಾಂನ ಸಂಸದ ದಿಲಾವರ್ ಹುಸೇನ್ ಸೈದಿ ಭಾರತದ ವಿರುದ್ಧ ಧರ್ಮಯುದ್ಧ ಅಥವಾ ಜಿಹಾದ್ ಘೋಷಣೆ ಮಾಡಿದ್ದಾರೆ. ಅವರ ಪ್ರಚೋದನಾ ಕಾರಿ ಭಾಷಣಗಳನ್ನು ಹೊಂದಿರುವ ಸಿ.ಡಿ. ಮತ್ತು ಕ್ಯಾಸೆಟ್‌ಗಳು ನಮ್ಮ ಗಡಿ ರಾಜ್ಯಗಳಲ್ಲಿ ಸುಪ್ರಭಾತಗಳಾಗಿವೆ.

ಬಹುಶಃ ನಾವು ಮರೆತಿರಬಹುದು!?

ಏಪ್ರಿಲ್ 16. ಶನಿವಾರ ಸಾಯಂಕಾಲ ತ್ರಿಪುರಾ ರಾಜಧಾನಿ ಅಗರ್ತಲಾದಿಂದ 8 ಕಿ.ಮೀ. ದೂರದಲ್ಲಿರುವ ಭಾರತ-ಬಾಂಗ್ಲಾ ಗಡಿಯ ಲಂಕಾಮುರಾ ಔಟ್‌ಪೋಸ್ಟ್‌ನಲ್ಲಿ ಸಹಾಯಕ ಸೇನಾಧಿಕಾರಿ ಜೀವನ್ ಕುಮಾರ್ ಮತ್ತು ಕಾನ್‌ಸ್ಟೇಬಲ್ ಕೆ.ಕೆ. ಸುರೇಂದ್ರನ್ ಕರ್ತವ್ಯದ ಮೇಲಿದ್ದರು. ಅದೇ ವೇಳೆ ನಮ್ಮ ಗಡಿ ಭದ್ರತಾ ಪಡೆಯ (ಬಿ.ಎಸ್.ಎಫ್) ಮಹಾ ನಿರ್ದೇಶಕ ಆರ್.ಎಸ್. ಮೋಶಾಹರಿ ಢಾಕಾದಲ್ಲಿ ಬಾಂಗ್ಲಾ ರೈಫಲ್ಸ್(ಬಿಡಿಆರ್)ನ ಮುಖ್ಯಸ್ಥ ಮೇಜರ್ ಜನರಲ್ ಜಹಾಂಗಿರ್ ಆಲಮ್ ಚೌಧುರಿ ಜತೆ ಗಡಿ ನಿರ್ವಹಣೆ ಮತ್ತು ಬಿಡಿಆರ್ ಹಾಗೂ ಬಿಎಸ್‌ಎಫ್ ನಡುವಿನ ಸಹಕಾರದ ಬಗ್ಗೆ ಚರ್ಚೆ ನಡೆಸುತ್ತಿದ್ದರು. ಇತ್ತ ಬಾಂಗ್ಲಾ ರೈಫಲ್ಸ್ ಲಂಕಾಮುರಾ ಔಟ್‌ಪೋಸ್ಟ್ ಮೇಲೆ ಇದ್ದಕ್ಕಿದ್ದಂತೆಯೇ ಅಪ್ರಚೋದಿತ ಗುಂಡಿನ ದಾಳಿ ಆರಂಭಿಸಿತು. ಸಾದಾ ಉಡುಪಿನಲ್ಲಿದ್ದ ಬಾಂಗ್ಲಾದೇಶಿಯರು ಜೀವನ್ ಕುಮಾರ್ ಮತ್ತು ಸುರೇಂದ್ರನ್ ಅವರನ್ನು ಧರಧರನೆ ಎಳೆದುಕೊಂಡು ಹೋದರು. ಮಧ್ಯರಾತ್ರಿ ವೇಳೆ ಗುಂಡು ಹಾರಾಟ ನಿಂತಿತು. ಆ ವೇಳೆಗಾಗಲೇ ಜೀವನ್ ಕುಮಾರ್ ಹೆಣವಾಗಿದ್ದರು. ಹಣೆಗೆ ಗುಂಡಿಟ್ಟು ಕೊಲ್ಲುವ ಮೊದಲು ಚೂರಿಯಿಂದ ಚುಚ್ಚಿ ಚುಚ್ಚಿ ಕ್ರೂರವಾಗಿ ಹಿಂಸಿಸಲಾಗಿತ್ತು. ಸುರೇಂದ್ರನ್ ಅವರ ಅರೆಜೀವ ಉಳಿದಿತ್ತು.

ನಾಲ್ಕು ವರ್ಷಗಳ ಹಿಂದೆ, ಅಂದರೆ 2001, ಏಪ್ರಿಲ್ 18ರಂದು ಮೇಘಾಲಯ ಬಳಿಯ ಗಡಿಯಲ್ಲಿ ಬಾಂಗ್ಲಾ ರೈಫಲ್ಸ್‌ನ ಸೈನಿಕರು 16 ಬಿಎಸ್‌ಎಫ್ ಯೋಧರನ್ನು ಇದೇ ರೀತಿ ಕ್ರೂರವಾಗಿ ಹಿಂಸಿಸಿ ಕೊಲೆಗೈದಿದ್ದರು. ಪ್ರತಿ ಮೂಳೆಗಳೂ ಪುಡಿಯಾಗಿದ್ದವು. ಹಂದಿಯಂತೆ ಕಟ್ಟಿಕೊಂಡು ಹೆಣ ತರಬೇಕಾಗಿ ಬಂದಿತ್ತು. ಅಂದು ಅಟಲ್ ಸರಕಾರ ಅಧಿಕಾರದಲ್ಲಿತ್ತು. ಇಂದು ಮನಮೋಹನ್

ಅಧಿಕಾರದಲ್ಲಿದ್ದಾರೆ. ಭಾರತದ ಪ್ರತಿಕ್ರಿಯೆ ಮಾತ್ರ ಒಂದೇ. ಅದು ನಿಶ್ಚಿಂತ ನಿದ್ರೆ. ಬಾಂಗ್ಲಾ ರಾಯಭಾರಿಯನ್ನು ಕರೆಸಿ ಅತೃಪ್ತಿ ವ್ಯಕ್ತಪಡಿಸಿರಬಹುದು. ಆ ಕಾರ್ಯವನ್ನು ಎಂತಹ ಪುಕ್ಕಲ ರಾಷ್ಟ್ರ ಕೂಡ ಮಾಡಬಲ್ಲದು. ಅಲ್ಲದೆ ನಮ್ಮ ಹೇಡಿತನವನ್ನು ಮರೆತು ಬಾಂಗ್ಲಾವನ್ನು ದೂರುವುದರಲ್ಲಿಯೂ ಯಾವುದೇ ಅರ್ಥವೂ ಇಲ್ಲ. ಏಕೆಂದರೆ ಬಾಂಗ್ಲಾವನ್ನು ಮೂರೂ ಕಡೆಯಿಂದಲೂ ನಮ್ಮ ಭೂಭಾಗಗಳೇ ಆವರಿಸಿವೆ. ಇನ್ನೊಂದೆಡೆ ಬಂಗಾಳ ಕೊಲ್ಲಿಯಿದ್ದರೂ ಅದೂ ಭಾರತದ ನಿಯಂತ್ರಣದಲ್ಲಿದೆ. ಇಂತಹ ಎಲ್ಲ ಅನುಕೂಲಗಳನ್ನು ಹೊಂದಿದ್ದರೂ ಬಾಂಗ್ಲಾಕ್ಕೆ ಚಾಟಿಯೇಟು ನೀಡುವ ಧೈರ್ಯ ನಮಗಿಲ್ಲವೆ? ಅನೂಪ್ ಚೆಟಿಯಾ, ಪರೇಶ್ ಬರುವಾನಂತಹ ಪ್ರತ್ಯೇಕತಾವಾದಿಗಳು ಬಾಂಗ್ಲಾದಲ್ಲಿ ಅಡಗಿ ಕುಳಿತಿರುವುದು ಜಗತ್ತಿಗೇ ಗೊತ್ತಿದೆ. ಇವರನ್ನು ಹಸ್ತಾಂತರ ಮಾಡುವಂತೆ ಬಾಂಗ್ಲಾಕ್ಕೆ ತಾಕೀತು ಮಾಡುವ ತಾಕತ್ತು ನಮಗಿಲ್ಲವೇ? ಬಾಂಗ್ಲಾದೇಶದ ಬಾಲ ಕತ್ತರಿಸಲಾಗದ ಭಾರತಕ್ಕೆ ವಿಶ್ವಸಂಸ್ಥೆಯ ಭದ್ರತಾ ಮಂಡಳಿಯ ಕಾಯಂ ಸದಸ್ಯತ್ವ ಬೇಕೆ?

ಮುಷ್ಟಿಯಷ್ಟಿರುವ ರಾಷ್ಟ್ರವನ್ನೇ ಬೆದರಿಸಲಾಗದ ಭಾರತಕ್ಕೆ ಸೂಪರ್ ಪವರ್ ರಾಷ್ಟ್ರವೆಂಬ ಪಟ್ಟಕಟ್ಟ ಬೇಕೆ? ಹುಲ್ಲು ಕಡ್ಡಿ ಎತ್ತಲೂ ಅಂಜುತ್ತಿರುವ ನಮಗೆ ಅಮೆರಿಕದ ಎಫ್-16 ಮತ್ತು ಎಫ್-18 ಯುದ್ಧ ವಿಮಾನಗಳ ಅಗತ್ಯ ಏದೆಯೇ? 4095 ಕಿ.ಮೀ. ವ್ಯಾಪ್ತಿಯ ಬಾಂಗ್ಲಾ ಗಡಿಯಲ್ಲಿ ಬೇಲಿ ನಿರ್ಮಾಣ ಮಾಡುತ್ತಿರುವ ನಮ್ಮ ಗಡಿ ಭದ್ರತಾ ಪಡೆಗಳ ಮೇಲೆ ಬಾಂಗ್ಲಾ ರೈಫಲ್ಸ್ ನಿತ್ಯವೂ ಗುಂಡಿನ ದಾಳಿ ಮಾಡುತ್ತಿದೆ. ಅದಕ್ಕೆ ತಕ್ಕ ಪ್ರತ್ಯುತ್ತರ ನೀಡುವ ಎದೆಗಾರಿಕೆಯನ್ನೇಕೆ ನಾವು ತೋರುತ್ತಿಲ್ಲ? ಅಲ್ಪಸಂಖ್ಯಾತರ ವೋಟು ಕೈತಪ್ಪಿ ಹೋಗುತ್ತವೆಯೆಂಬ ಭಯವೇ? ಬಹುಶಃ ಇದೇ ಕಾರಣದಿಂದಲೇ, ನಮ್ಮ ಕಮ್ಯುನಿಸ್ಟರಿಗೆ ವೆಸ್ಟ್ ಬೆಂಗಾಲ್‌ಗಿಂತ ಪ್ಯಾಲೆಸ್ತೀನ್‌ನ ವೆಸ್ಟ್ ಬ್ಯಾಂಕ್ ಬಗ್ಗೆಯೇ ಹೆಚ್ಚು ಆಸಕ್ತಿ. ಹಾಗಾಗಿಯೇ ಪ್ರತಿಬಾರಿ ಸಿಪಿಎಂನ ಸಭೆ ನಡೆದಾಗಲೂ ಇಸ್ರೇಲನ್ನು ಖಂಡಿಸಿ ಗೊತ್ತುವಳಿಯೊಂದನ್ನು ಅಂಗೀಕರಿಸುತ್ತಾರೆ. ಬಾಂಗ್ಲಾ ಅತಿಕ್ರಮಣಕಾರರ ಬಗ್ಗೆ ಮಾತೆತ್ತುವುದಿಲ್ಲ. ನಮಗೂ ಶತ್ರು ಎಂದ ಕೂಡಲೇ ನೆನಪಾಗುವುದು ಪಾಕಿಸ್ತಾನ ಮಾತ್ರ. ಬಾಂಗ್ಲಾವೆಂಬ ಕಂಟಕವನ್ನೇ ಮರೆಯುತ್ತೇವೆ. ಇನ್ನು ಜೀವನ್ ಕುಮಾರ್ ಸಾವಿಗೆ ಬಾಂಗ್ಲಾ 'ಸಾರಿ' ಹೇಳಿದೆ ಎಂದು ಗೃಹ ಸಚಿವ ಶಿವರಾಜ್ ಪಾಟೀಲ್ ನಾಚಿಕೆಬಿಟ್ಟು ಹೇಳಿಕೊಂಡಿದ್ದಾರೆ.

ಅಂದು ಬ್ರಿಟನ್ ಪ್ರಧಾನಿ ನೆವಿಲೆ ಚೆಂಬರ್ಲೈನ್, ಹಿಟ್ಲರ್‌ನ ಮನವೊಲಿಸುವ ಸಲುವಾಗಿ ಓಲೈಕೆ ನೀತಿಯನ್ನು ಆರಂಭಿಸಿದರು. ಆದರೂ ಎರಡನೇ ಮಹಾಯುದ್ಧವನ್ನು ತಪ್ಪಿಸಲಾಗಲಿಲ್ಲ. ಆದರೆ ಭಾರತ ಆ ಓಲೈಕೆ ಕಲೆಯಲ್ಲಿ ಪರಿಣತಿ ಸಾಧಿಸಿದೆ. ಏನೇ ಆಗಲಿ, ಗನ್ನರ್ ಮಿರ್ಡಾಲ್ ತಮ್ಮ 'ಏಷ್ಯನ್ ಡ್ರಾಮಾ'ದಲ್ಲಿ ಹೇಳಿದಂತೆ ಭಾರತವೊಂದು Soft State!

ಛೀ!

ಪ್ರಪಂಚದ ಯಾವುದೇ ದೇಶವನ್ನು ಬೇಕಾದರೂ ನೋಡಿ. ಭಯೋತ್ಪಾದಕರೆಂದರೆ ಮುಸ್ಲಿಮರು ಮಾತ್ರ. ಜಗತ್ತಿನೆಲ್ಲೆಡೆ ಭಯೋತ್ಪಾದನೆಗೆ ಇನ್ನೊಂದು ಹೆಸರೇ ಮುಸ್ಲಿಂ ಮೂಲಭೂತವಾದಿಗಳು ಎನ್ನುವಂತಾಗಿದೆ.

ನಾಗರಾಜು ಬಾಬು
ಚಿತ್ರದುರ್ಗ

ಇಡಿ ದೇಶವೇ ಕೊಂಡಾಡುತ್ತಿದೆ, ಹೊಗಳುತ್ತಿದೆ, ಶಹಭಾಸ್ ಎನ್ನುತ್ತಿದೆ, ಅಭಿನಂದನೆಗಳ ಮಹಾಪೂರವೇ ಹರಿದು ಬರುತ್ತಿದೆ. ಅಷ್ಟೇಕೆ, ರಾಷ್ಟ್ರಪತಿ ಅಬ್ದುಲ್ ಕಲಾಂ ಕೂಡ ಮೆಚ್ಚುಗೆ ವ್ಯಕ್ತಪಡಿಸಿದ್ದಾರೆ. ಏಕೆಂದರೆ 'ಇನ್ಫೋಸಿಸ್ ಕಂಪನಿ' ಒಂದು ಶತಕೋಟಿ ಡಾಲರ್ ಆದಾಯ ವನ್ನು ದಾಖಲಿಸುವ ಮೂಲಕ ಅಂತಹ ಸಾಧನೆಗೈದ ದೇಶದ ಮೊದಲ ಕಂಪನಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ಅಜೀಂ ಪ್ರೇಮ್‌ಜಿ ಅವರ ವಿಪ್ರೊ ಕೂಡ ಅದೇ ಸಾಲಿಗೆ ಸೇರಿಕೊಂಡಿದೆ. ಖಂಡಿತಾ ಮಹತ್ತರ ಸಾಧನೆ ಇದು. ಮೆಚ್ಚಲೇಬೇಕು.

ಆದರೆ ಪ್ರಶ್ನೆಯಿಷ್ಟೇ, ದೇಶವೇ ಕೊಂಡಾಡುತ್ತಿರುವ ಈ ಕಂಪನಿಗಳು ದೇಶಕ್ಕೇನು ಕೊಟ್ಟಿವೆ? ಈ ಉತ್ಪ್ರೇಕ್ಷೆ, ಹೊಗಳಿಕೆ ಸರಿಯೇ? ಗೋದ್ರೆಜ್ ಎಂದ ಕೂಡಲೇ ಸೋಪು, ಅಲ್ಮೇರಾ, ಟೈಪ್ ರೈಟರ್ ಮತ್ತು ಬೀಗಗಳು ನಿಮ್ಮ ನೆನಪಿಗೆ ಬರುತ್ತವೆ. ರಿಲಯನ್ಸ್ ಎಂದಾಗ ಮೊಬೈಲ್ ನೆನಪಾಗುತ್ತದೆ. ಟಾಟಾ ಎಂದ ಕೂಡಲೇ ಗುಂಡು ಪಿನ್ನಿನಿಂದ ಲಾರಿ, ಏರೋಪ್ಲೇನ್‌ವರೆಗೂ ಕಣ್ಣಮುಂದೆ ಬರುತ್ತವೆ. ಆದರೆ ಐಟಿ ಕಂಪನಿಗಳ ಬಗ್ಗೆ ಯೋಚಿಸಿ ನೋಡಿ. ಅವು ಗಳಿಸುತ್ತಿರುವ ಲಾಭವಷ್ಟೇ ನೆನಪಾಗುತ್ತದೆ. ಯಾರಿಗೂ ಐಟಿ ಕಂಪನಿಗಳು ಏನು ಮಾಡುತ್ತಿವೆ ಎಂಬುದು ಸರಿ ಯಾಗಿ ತಿಳಿದಿಲ್ಲ. ಹಾಗಾದರೆ ಅವು ಮಾಡುತ್ತಿರುವುದಾದರೂ ಏನು? ಅಮೆರಿಕ, ಜಪಾನ್, ಯುರೋಪ್ ಮತ್ತು ಇನ್ನಿತರ ರಾಷ್ಟ್ರಗಳಲ್ಲಿನ ಬ್ಯಾಂಕುಗಳಿಗೆ ಬೇಕಾದ ಸಾಫ್ಟ್‌ವೇರನ್ನು 'ರಿಪೇರಿ' ಮತ್ತು ಅಗತ್ಯ ಬಂದರೆ ಸಿದ್ಧಪಡಿಸಿ ಕೊಡುತ್ತಿದೆ. 'ಸೂಪರ್ ಮಾರ್ಟ್' ಪ್ರಾರಂಭ ಮಾಡಬೇಕು ಎಂದಿಟ್ಟುಕೊಳ್ಳಿ. ಅದಕ್ಕೆ ಬೇಕಾದ, ಬಿಲ್ಲಿಂಗ್ ಮತ್ತು ಇತರ ಲೆಕ್ಕಪತ್ರಗಳನ್ನು ವ್ಯವಸ್ಥಿತವಾಗಿ ನಿರ್ವಹಿಸುವ ಮಾಣ ಕೆಲಸವನ್ನು (ಸಾಫ್ಟ್‌ವೇರನ್ನು) ಐಟಿ ಕಂಪನಿಗಳು ಮಾಡಿಕೊಡುತ್ತವೆ. ಆದರೆ ನಮ್ಮ ದೇಶದ ಪ್ರತಿಷ್ಠಿತ ತಾಂತ್ರಿಕ ಶಿಕ್ಷಣ ತರಬೇತಿ ಸಂಸ್ಥೆಗಳಿಂದ (ಅದರಲ್ಲೂ ಐಐಟಿಗಳಿಂದ) ಹೊರಬರುವ ಪ್ರತಿಭಾವಂತರನ್ನು ನೇಮಕ ಮಾಡಿಕೊಂಡು ಇಂತಹ ಸಾಮಾನ್ಯ ಕಾರ್ಯವನ್ನು ಮಾಡುವ 'ಐಟಿ ಕೂಲಿ'ಗಳನ್ನಾಗಿ ಪರಿವರ್ತಿಸುತ್ತಿರುವುದು ಸರಿಯೇ? ಕೈತುಂಬಾ ಸಂಬಳ ಮತ್ತು ಸೌಲಭ್ಯವನ್ನು ನೀಡುತ್ತಿರುವುದೇ ಆ ಕಂಪನಿಯ ಹೆಗ್ಗಳಿಕೆಯೇ? ನಮ್ಮ ಐಟಿ ಕಂಪನಿಗಳು ಶತಕೋಟಿ ಡಾಲರ್ ಕಂಪನಿಗಳಾದವು. ಆದರೆ ಶತಕೋಟಿ ಭಾರತೀಯರಿಗೆ ಏನು ತಂದು ಕೊಟ್ಟಿವೆ? ಇನ್ನು ಲಕ್ಷಾಂತರ ರೂ. ವೆಚ್ಚ ಮಾಡಿ, ಉತ್ತಮ ಶಿಕ್ಷಣ ನೀಡಿ ಪ್ರತಿಭಾವಂತರನ್ನು ಸೃಷ್ಟಿಸುತ್ತಿರುವ ಈ ದೇಶಕ್ಕೇನು ದೊರೆಯುತ್ತಿದೆ? ಒಂದು ವೇಳೆ ಈ ಪ್ರತಿಭಾವಂತರು ಇಸ್ರೋದಲ್ಲೋ, ಭಾಭಾ ಅಣುಶಕ್ತಿ ಕೇಂದ್ರ, ಸಿ-ಡಾಕ್, ಡಾಟ್, ಡಿ.ಆರ್. ಡಿ.ಒ.ದಲ್ಲೋ ಸೇವೆ ಸಲ್ಲಿಸಿದ್ದರೆ 1998ರ ಪರಮಾಣು ಬಾಂಬ್ ಪರೀಕ್ಷೆಯ ನಂತರ ನಮ್ಮ ದೇಶದ ಮೇಲೆ ವೈಜ್ಞಾನಿಕ ದಿಗ್ಬಂಧನ ಹೇರಿರುವ ಅಮೆರಿಕಕ್ಕೆ ಸಡ್ಡು ಹೊಡೆಯಬಹುದಿತ್ತು. ಏಕೆಂದರೆ ನಮ್ಮ ಸ್ವದೇಶಿ ಕ್ಷಿಪಣಗಳಿಗೆ, ಯುದ್ಧ ವಿಮಾನಗಳಿಗೆ, ಇನ್ಸಾಟ್ ಉಪಗ್ರಹಗಳಿಗೆ ತೀರಾ ಅನಿವಾರ್ಯವಾಗಿರುವ ಮಹತ್ವದ ಸಾಫ್ಟ್‌ವೇರ್‌ಗಳನ್ನು ಈ ಪ್ರತಿಭಾವಂತರು ಖಂಡಿತಾ ಸಿದ್ಧಪಡಿಸುತ್ತಿದ್ದರು. ಇಲ್ಲವೇ, ಜಗದ್ವಿಖ್ಯಾತ ಐಟಿ ಕಂಪನಿಗಳೇ ತಾಂತ್ರಿಕ ನೆರವು ನೀಡಬಹುದಿತ್ತು. ಆಗ ಸ್ವಾವಲಂಬನೆ ಸಾಧಿಸುವ ಜತೆಗೆ ಆತ್ಮಗೌರವವನ್ನೂ ಹೆಚ್ಚಿಸಿಕೊಳ್ಳಬಹುದಿತ್ತು. ಆದರೆ ದೇಶದ ಘನತೆಯನ್ನು ಎತ್ತಿಹಿಡಿಯುವ

ಸಾಮರ್ಥ್ಯವಿರುವ ಮೇಧಾವಿಗಳಿಂದ ಕಳಪೆ ಚಾಕರಿ ಮಾಡಿಸುತ್ತಿರುವ ಕಂಪನಿಗಳು ನಮ್ಮ ಹೊಗಳಿಕೆಗೆ ಅರ್ಹವೇ?

ಟಾಟಾ ಕಂಪನಿಯನ್ನು, ಅದರ ಸಂಸ್ಥಾಪಕ ಜೆಮ್‌ಷೆಡ್‌ಜಿ ನಸರ್‌ವಾನ್‌ಜಿ ಟಾಟಾ ಅವರನ್ನು ಯಾರೂ ನೆನಪಿಸಿಕೊಳ್ಳುವುದಿಲ್ಲ. ಎಲ್ಲರೂ ಐಟಿ ಕಂಪನಿಗಳ ಹೆಸರನ್ನು ಜಪಿಸುತ್ತಾರೆ, ಹೊಗಳಿ ಅಟ್ಟಕ್ಕೇರಿಸುತ್ತಾರೆ, ದೇಶೋದ್ಧಾರಕ್ಕಾಗಿ ಜನ್ಮವೆತ್ತ ವ್ಯಕ್ತಿಗಳೆಂಬಂತೆ ಬಿಂಬಿಸುತ್ತಾರೆ. ಆದರೆ ಇಂದು ನಮ್ಮ ದೇಶ ಕಂಡ ಅತ್ಯುತ್ತಮ ವಿಜ್ಞಾನಿಗಳನ್ನು ಸೃಷ್ಟಿಸಿದ್ದು ಭಾರತೀಯ ವಿಜ್ಞಾನ ಮಂದಿರ (ಐಐಎಸ್‌ಇ)ವೆಂಬ ಟಾಟಾ ಕಂಪನಿ ಹುಟ್ಟು ಹಾಕಿದ ಸಂಸ್ಥೆ ಎಂಬುದನ್ನು ಮರೆಯದಿರಿ. ಬೆಂಗಳೂರಲ್ಲೇ ಇದೆ! ಕಬ್ಬಿಣವೆಂದರೆ ಜನ ಸೊಟೆ ತಿರುವುತ್ತಿದ್ದ, ಮೂಗುಮುರಿಯುತ್ತಿದ್ದ ಕಾಲದಲ್ಲಿ ಜೆಮ್‌ಷೆಡ್‌ಪುರದಲ್ಲಿ . ಉಕ್ಕು ಕಾರ್ಖಾನೆ ಸ್ಥಾಪಿಸಿದ್ದು ಟಾಟಾ ಕಂಪನಿ. ಇಂದು ಉಕ್ಕು ಉತ್ಪಾದನೆಯಲ್ಲಿ ಭಾರತ ಮುಂಚೂಣಿ ರಾಷ್ಟ್ರಗಳ ಸಾಲಿ ನಲ್ಲಿ ನಿಂತಿದೆ. ಕಾರಣ ಟಾಟಾ ಕಂಪನಿ. ಟಿಸ್ಕೊ ಸಂಸ್ಥೆ ಇಂದು ಲಕ್ಷಾಂತರ ಜನರಿಗೆ ಅನ್ನ, ಉದ್ಯೋಗ ಮತ್ತು ಸಾಮಾಜಿಕ ಭದ್ರತೆ ನೀಡಿದೆ. ಟಾಟಾ ಶಕ್ತಿ ಸಂಶೋಧನೆ, ಟಾಟಾ ಮೂಲಭೂತ ಸಂಶೋಧನಾ ಸಂಸ್ಥೆಗಳು ಶೋಧನೆ ಮತ್ತು ಅಭಿವೃದ್ಧಿ ಕಾರ್ಯದಲ್ಲಿ ತೊಡಗಿವೆ. ಏಕೆಂದರೆ ಆ ಕಂಪನಿಗೆ ಸಾಮಾಜಿಕ ಬದ್ಧತೆ ಇದೆ.

ಫೋನ್ ರಿಂಗ್ ಆದ ಕೂಡಲೇ ರಿಸೀವರ್ ಎತ್ತಿ 'ಹಲೋ' ಅನ್ತೀರಿ! ಕಾರಣ, ಸ್ಯಾಮ್ ಪಿಟ್ರೋಡಾ!! ಟ್ರಂಕ್‌ಕಾಲ್ ಬುಕ್ ಮಾಡಿ ದಿನವಿಡೀ ಫೋನ್ ಮುಂದೆ ಜಪಮಾಡಬೇಕಾದ ಕಾಲದಲ್ಲಿ ನಂಬರ್ ಒತ್ತಿ ಹಲೋ ಎನ್ನುವ ಸೌಲಭ್ಯ ಕಲ್ಪಿಸಿದ ವ್ಯಕ್ತಿ ಆತ. ಎಂಬತ್ತರ ದಶಕದ ಉತ್ತರಾರ್ಧದಲ್ಲಿ ಸಂಪರ್ಕ ವ್ಯವಸ್ಥೆಗೆ ಹೊಸ ಅರ್ಥ, ತಳಹದಿ ತಂದುಕೊಟ್ಟ ಕೀರ್ತಿ ಆತನದ್ದು. ಇನ್ನು ಸರಕಾರಿ ಉದ್ಯೋಗಕ್ಕೆ ಶರಣು ಹೊಡೆದು ಗುಜರಾತ್‌ನ ಆನಂದ್‌ನಲ್ಲಿ ಅಮೂಲ್ ಕಂಪನಿಯನ್ನು ಹುಟ್ಟುಹಾಕಿ 'ವಿಶ್ವದ ಅತಿ ದೊಡ್ಡ ಸಹಕಾರಿ ಕ್ಷೇತ್ರ'ವೆಂಬ ಹೆಗ್ಗಳಿಕೆ ತಂದುಕೊಟ್ಟ ವ್ಯಕ್ತಿ, ಹಾಲಿನ ಕ್ರಾಂತಿಯ ಪಿತಾಮಹ ವರ್ಗೀಸ್ ಕುರಿಯನ್. ಅಮ್ಮನ ಎದೆ ಹಾಲಿಗೆ ಪೈಪೋಟಿ ನೀಡುವ ಮಟ್ಟಿಗೆ ಅಮೂಲ್ ಸಂಸ್ಥೆಯನ್ನು ಕಟ್ಟಿ ಬೆಳೆಸಿದ್ದಾರೆ. ಭತ್ತದ ಹೊಸ ತಳಿ ಸೃಷ್ಟಿಸಿ ರೈತರಿಗೆ ಆರ್ಥಿಕ, ಸಾಮಾಜಿಕ ಭದ್ರತೆ ಒದಗಿಸಿದ್ದು ಎಂ.ಎಸ್. ಸ್ವಾಮಿನಾಥನ್. ಜತೆಗೆ ಪ್ರೊ. ಸತೀಶ್ ಧಾವನ್, ವಿಕ್ರಮ್ ಸಾರಾಭಾಯಿ, ಹೋಮಿ ಭಾಭಾ ನಮ್ಮ ರಾಷ್ಟ್ರದ ವೈಮಾಂತರಿಕ್ಷ ಸಂಶೋಧನೆಗಳ ರೂವಾರಿಗಳು. ಆದರೆ ಇವರಾರೂ ನಮಗೆ ಆದರ್ಶ ವ್ಯಕ್ತಿಗಳಲ್ಲ! ಸ್ವಂತ ಕಂಪನಿ ಉದ್ಧಾರ ಮಾಡಿದವರೇ ನಮಗೆ ರೋಲ್ ಮಾಡೆಲ್‌ಗಳು!

ರಿಲಯನ್ಸ್ ಕಂಪನಿಯನ್ನು ನೀವು ಹೊಗಳಬಹುದು, ಇಲ್ಲವೇ ತೆಗಳಬಹುದು. ಆದರೆ ದೇಶಕ್ಕೇ ಚರಂಡಿ ತೋಡಿ, ಆಪ್ಟಿಕಲ್ ಫೈಬರ್ ಕೇಬಲ್ ಹೂತು, ಬಡಬಗ್ಗರ ಕೈಗೂ ಮೊಬೈಲ್ ಕೊಟ್ಟಿರುವ ಕಾರ್ಯವನ್ನು ಯಾರೇ ಆದರೂ ಮೆಚ್ಚಲೇಬೇಕು. ಲಾಭಗಳಿಸುವ ಉದ್ದೇಶ ಕಂಪನಿಯದ್ದಾಗಿದ್ದರೂ ಅದು ಸಂಪರ್ಕ ಕ್ಷೇತ್ರದಲ್ಲಿನ ಕ್ರಾಂತಿ ಎಂಬುದನ್ನು ಒಪ್ಪಲೇಬೇಕು.

ವಿದ್ಯುತ್ ಉತ್ಪಾದನೆಗಾಗಿ ಮುಂದಿನ ಐದು ವರ್ಷಗಳಲ್ಲಿ 20 ಸಾವಿರ ಕೋಟಿ ರೂ. ಹಣ ಹೂಡಲು ರಿಲಯನ್ಸ್ ಯೋಜನೆಯೊಂದನ್ನು ರೂಪಿಸಿದೆ. ರಿಲಯನ್ಸ್‌ನ ಈ ಮಹತ್ವಾಕಾಂಕ್ಷಿ ಯೋಜನೆ ಮುಂದಿನ ಐದು ವರ್ಷಗಳಲ್ಲಿ ಖಂಡಿತಾ ಕಾರ್ಯರೂಪಕ್ಕೆ ಬರಲಿದೆ. ಆಗ 6 ಶತಕೋಟಿ ಯುನಿಟ್ ವಿದ್ಯುತ್ ಉತ್ಪಾದನೆಯಾಗಿ, ಒಟ್ಟು 1,24,300 ಚದರ ಕಿ.ಮೀ. ವ್ಯಾಪ್ತಿಗೆ ವಿದ್ಯುತ್ ಸರಬರಾಜಾಗುತ್ತದೆ. ಕನಿಷ್ಟ ಎರಡೂವರೆ ಕೋಟಿ ಜನರ ಮನೆಗಳು ಬೆಳಗುತ್ತವೆ. ನಮ್ಮ ಕರ್ನಾಟಕವೂ ಸೇರಿದಂತೆ ಒರಿಸ್ಸಾ, ಮಹಾರಾಷ್ಟ್ರ, ಆಂಧ್ರ, ಕೇರಳ, ದಿಲ್ಲಿಗಳಿಗೆ ದಿನದ 24 ಗಂಟೆಗಳೂ ವಿದ್ಯುತ್ ಪೂರೈಕೆಯಾಗುತ್ತದೆ.

ಆದರೆ ಐಟಿ ಕಂಪನಿಗಳಂತಹ ಶತಕೋಟಿ ಡಾಲರ್ ಆದಾಯದ ನೂರು ಕಂಪನಿಗಳು ಸೃಷ್ಟಿಯಾದರೂ ಹಳ್ಳಿಯಲ್ಲಿರುವ ನಿಮ್ಮ ಮನೆಯಲ್ಲಿ ಸೀಮೆಎಣ್ಣೆ ದೀಪವೇ ಉರಿಯುತ್ತಿರುತ್ತದೆ! ನಮ್ಮ ದೇಶದ ಒಟ್ಟು ಜನಸಂಖ್ಯೆಯಲ್ಲಿ ಶೇ. 54 ರಷ್ಟು ಜನರು 30 ವರ್ಷಕ್ಕೂ ಕಡಿಮೆ ವಯೋಮಾನದವರಾಗಿದ್ದಾರೆ. ಇವರ ಮನಸ್ಸಿನಲ್ಲಿ ಐಟಿ ಕಂಪನಿಗಳಲ್ಲಿ ಕೆಲಸ ಮಾಡುವುದೇ ಅತಿ ದೊಡ್ಡ ಸಾಧನೆ, ಜೀವನ ಸಾರ್ಥಕ್ಯ ಕಾಣುವುದು ಆಗ ಮಾತ್ರ ಎಂಬ ಭಾವನೆ ತುಂಬಿದರೆ ಈ ದೇಶದ ಗತಿಯೇನು? ನಾಳೆ ಬೆಳಗ್ಗೆ ಆರೋಗ್ಯ ಸರಿಯಿಲ್ಲದೆ ಹಾಸಿಗೆ ಹಿಡಿದರೆ ವೈದ್ಯರ ಬಳಿಗೆ ಹೋಗಬೇಕೆ ಹೊರತು, ಐಟಿ ಕಂಪನಿಗಳ ಕದ ತಟ್ಟಲು ಸಾಧ್ಯವಿಲ್ಲ. ನಮ್ಮ ದೇಹದ ಎಲ್ಲ ಅಂಗಾಂಗಗಳೂ ವ್ಯವಸ್ಥಿತವಾಗಿ ಕಾರ್ಯನಿರ್ವಹಿಸುವಂತಹ ಸಾಫ್ಟ್‌ವೇರ್ ರಚಿಸಿಕೊಡಿ ಎಂದು ಐಟಿ ಕಂಪನಿಗಳನ್ನು ಕೇಳಲು ಸಾಧ್ಯವಿಲ್ಲ.

ನಮ್ಮಲ್ಲಿನ ಅತ್ಯಂತ ಪರಿಣತ ಹೃದಯತಜ್ಞರಿಗಿಂತ ಅಮೆರಿಕದಲ್ಲಿನ ದಾದಿಯರು ಮತ್ತು ಆಯಾಗಳಿಗೆ ಅತಿ ಹೆಚ್ಚಿನ ಸಂಬಳ ದೊರೆಯುತ್ತಿದೆ. ಇಂತಹ ಸಂಬಳದ ಮೇಲೆ ಕಣ್ಣಿಟ್ಟು ಭಾರತೀಯ ಕಂಪನಿಯೊಂದು, ಆಮಿಷ ತೋರಿ ನಮ್ಮ ದೇಶದ ವೈದ್ಯರನ್ನೆಲ್ಲ, ಅದರಲ್ಲೂ ಅಖಿಲ ಭಾರತ ವೈದ್ಯಕೀಯ ವಿಜ್ಞಾನ ಸಂಸ್ಥೆಯಿಂದ ಹೊರಬರುತ್ತಿರುವ ಪದವೀಧರರನ್ನು ಅಮೆರಿಕಕ್ಕೆ ದಾದಿ ಮತ್ತು ಆಯಾಗಳ ಕೆಲಸಕ್ಕೆ ಕಳುಹಿಸಿದರೆ ಏನಾಗುತ್ತದೆ? ಐಐಟಿಯಿಂದ ಹೊರಬರುತ್ತಿರುವ ಪ್ರತಿಭಾನ್ವಿತರನ್ನು ಡಾಲರ್ ಆಮಿಷ ತೋರಿ ತನ್ನ ತೆಕ್ಕೆಗೆ ಸೆಳೆದುಕೊಳ್ಳುತ್ತಿರುವ ಐಟಿ ಕಂಪನಿಗಳು ಮಾಡುತ್ತಿರುವುದು ಇದೇ ಕೆಲಸವನ್ನು!

ಮೊದಲು ಹಸಿರುಕ್ರಾಂತಿಯಾಯಿತು. ನಾವು ಆಹಾರ ಸ್ವಾವಲಂಬನೆ ಸಾಧಿಸಿದೆವು. ನಂತರ ಕೈಗಾರಿಕಾ ಕ್ರಾಂತಿಯಾಯಿತು. ಸಾರ್ವಜನಿಕ ಕ್ಷೇತ್ರದ ಉದ್ದಿಮೆಗಳು ಸ್ಥಾಪನೆಯಾಗಿ ಲಕ್ಷಾಂತರ ಜನರಿಗೆ ಉದ್ಯೋಗ ದೊರೆಯಿತು. ಯಂತ್ರೋಪಕರಣಗಳು, ವಿದ್ಯುತ್ ಉಪಕರಣಗಳು, ವಿಮಾನಗಳು ನಮ್ಮ ದೇಶದಲ್ಲೇ ತಯಾರಾದವು. ನಂತರ ಶ್ವೇತ ಕ್ರಾಂತಿಯಾಯಿತು. ಅದರಿಂದ ಯಥೇಚ್ಛವಾಗಿ ಹಾಲು ಉತ್ಪಾದನೆಯಾಯಿತು. ಈಗ ಬಂದಿದೆ, ಮಾಹಿತಿ ತಂತ್ರಜ್ಞಾನ ಕ್ರಾಂತಿ! ಅದರ ಲಾಭವೇನಾಗಿದೆ? ಸರಕಾರಿ ಕಚೇರಿಗೆ ಹೋದರೆ ಫೈಲ್ ಮೂವ್ ಮಾಡಬೇಕೆಂದರೆ

ಗುಮಾಸ್ತನಿಂದ ಉನ್ನತ ಅಧಿಕಾರಿವರೆಗೂ ಲಂಚ ಕೊಡಲೇಬೇಕು. ಇಲ್ಲ ಅಂದರೆ, 'ನಾಳೆ ಬನ್ನಿ' ಅನ್ನೋ ಉತ್ತರ ಸಿದ್ಧವಾಗಿರುತ್ತದೆ.

ನಮ್ಮ ರಾಜ್ಯ ಕೂಡ ಗಣಕೀಕರಣ ಕಾರ್ಯ ಹಮ್ಮಿಕೊಂಡಿದೆ. ಆದರೆ ರಾಜ್ಯದ ಪ್ರತಿಷ್ಠಿತ ಐಟಿ ಕಂಪನಿಗಳು ಕನಿಷ್ಠ ಸಹಕಾರವನ್ನೂ ನೀಡಿಲ್ಲ. ಆದರೆ ಟ್ರಾಫಿಕ್ ಜಾಮ್, ಲೋಡ್ ಶೆಡ್ಡಿಂಗ್ ಬಗ್ಗೆ ಪತ್ರಿಕಾಗೋಷ್ಠಿ ಕರೆದು ಹರಿಹಾಯುತ್ತಾರೆ. ಅದಿರಲಿ, ಅಮೆರಿಕದ ಚಾಕರಿ ಮಾಡಿ, ಅಲ್ಲಿನ ದೈನಂದಿನ ಚಟುವಟಿಕೆಗಳು ಸರಳ ಮತ್ತು ಸುಸೂತ್ರವಾಗಿ ನಡೆಯುವಂತೆ ಮಾಡಲು ಸಹಕಾರ ನೀಡುತ್ತಿರುವ ಐಟಿ ಕಂಪನಿಗಳು ನಮ್ಮ ರಾಜ್ಯಕ್ಕೇನು ನೀಡಿವೆ? ಟ್ರಾಫಿಕ್ ಜಾಮ್ ಬಗ್ಗೆ ಚೀರಾಡುವ ಈ ಕಂಪನಿಗಳು ಫ್ಲೈ ಓವರ್ ಕಟ್ಟಲು ಕಾಸು ನೀಡುತ್ತಿವೆಯೇ?

ಇನ್ನಾದರೂ ಮಾಹಿತಿ ತಂತ್ರಜ್ಞಾನವೆಂಬ ಭ್ರಮೆಯಿಂದ ಹೊರಬನ್ನಿ. ನಮಗೆ ಬೇಕಿರುವುದು ಭದ್ರಾವತಿಯಲ್ಲಿ ಉಕ್ಕು, ಕಾಗದದ ಕಾರ್ಖಾನೆ ಸ್ಥಾಪಿಸಿ ಸಾವಿರಾರು ಜನಕ್ಕೆ ಅನ್ನ ನೀಡಿದ, ಕನ್ನಂಬಾಡಿ ಕಟ್ಟೆ ಕಟ್ಟಿ ಬರಡು ಭೂಮಿಗೆ ಜೀವ ನೀಡಿ ಲಕ್ಷಾಂತರ ರೈತರಿಗೆ ಒಪ್ಪೊತ್ತಿನ ಊಟಕ್ಕೆ ದಾರಿ ಮಾಡಿಕೊಟ್ಟ ದೂರದರ್ಶಿ ವಿಶ್ವೇಶ್ವರಯ್ಯ. ವಿಶ್ವೇಶ್ವರಯ್ಯನವರು ಗಗನಚುಕ್ಕಿ, ಭರಚುಕ್ಕಿ ಯಿಂದ ತಂತಿ ಕಂಬ ಎಳೆದು ಭದ್ರಾವತಿ ಮತ್ತು ಬೆಂಗಳೂರಿಗೆ ವಿದ್ಯುತ್ ತಂದಿದ್ದು ಯಾವುದೇ ಕಂಪನಿ ಉದ್ಧಾರಕ್ಕಲ್ಲ. ದೇಶ ಪ್ರಕಾಶಿಸಲಿ ಎಂದು!

ಪಾಕಿಸ್ತಾನದಲ್ಲಿ ನಡೆಯುತ್ತಿರುವ ಕ್ರಿಕೆಟ್ ಮ್ಯಾಚನ್ನು ನಿಮ್ಮ ಮನೆಯ ಟೀವಿಯಲ್ಲಿ ಇಂದು ನೋಡಲು ಸಾಧ್ಯವಾಗಿದ್ದರೆ ಅದು ಇಸ್ರೋದಲ್ಲಿ ದೇಶಕ್ಕಾಗಿ ದುಡಿಯುತ್ತಿರುವ ಸಾಫ್ಟ್‌ವೇರ್ ಎಂಜನಿಯರ್‌ಗಳಿಂದ, ಐಟಿ ಕಂಪನಿಗಳಲ್ಲಿ ಡಾಲರ್ ಕಿಸೆಗಿಳಿಸುತ್ತಿರುವವರಿಂದಲ್ಲ ಎಂಬು ದನ್ನು ಮರೆಯದಿರಿ.

ಸ್ವಂತ ಉಪಗ್ರಹ ತಯಾರಿಸಿ, ಕಕ್ಷೆಗೆ ಉಡ್ಡಯಣ ಮಾಡುವ ಸಾಮರ್ಥ್ಯವಿರುವ 6 ರಾಷ್ಟ್ರ ಗಳಲ್ಲಿ ಭಾರತವೂ ಒಂದಾಗುವಂತೆ ಮಾಡಿದ ಇಸ್ರೋ, ಕ್ಷಿಪಣಿ ಮತ್ತು ಯುದ್ಧ ವಿಮಾನಗಳನ್ನು ಅಭಿವೃದ್ಧಿಪಡಿಸಿ ಒಂದು ಶತಕೋಟಿ ಭಾರತೀಯರ ಜೀವಕ್ಕೆ ಭದ್ರತೆ ನೀಡುತ್ತಿರುವ ಡಿ.ಆರ್.ಡಿ.ಓ. ದಂತಹ ಸಂಸ್ಥೆಗಳನ್ನು ನಾವು ಬೆನ್ನುತಟ್ಟಬೇಕೆ ಹೊರತು, ಪ್ರತಿಭಾವಂತರಿಂದ ಕಳಪೆ ಕೆಲಸ ಮಾಡಿಸಿ ಕೊಂಡು ಡಾಲರ್‌ನಲ್ಲಿ ಹಣ ಎಣಿಸುತ್ತಿರುವ ಕಂಪನಿಗಳನ್ನಲ್ಲ.

ಏನಂತೀರಿ?

ನಾರಾಯಣಮೂರ್ತಿಯವರಂತಹ ಪ್ರಾಮಾಣಿಕ ವ್ಯಕ್ತಿಯನ್ನು ಟೀಕಿಸಿರುವುದು ಸರಿ ಕಾಣಲಿಲ್ಲ.

ಸುಬ್ಬರಾವ್
ಬೆಂಗಳೂರು



# 27 ಸೋಗು ಹಾಕಿದ ಸೋನಿಯಾ ತ್ಯಾಗಮಯಿ ಆದೆಯಾ?

ಸೋನಿಯಾ ಅಂತರಾತ್ಮದ ಮಾತನಾಡುತ್ತಿದ್ದಾರೆ. ಮಾಧ್ಯಮಗಳು ಆಕೆಯನ್ನು ತ್ಯಾಗಮಯಿ ಎಂದು ಹೊಗಳುತ್ತಿವೆ. ನಾವು ತಲೆದೂಗುತ್ತಿದ್ದೇವೆ. ಅನುಕಂಪದ ಅಲೆಯಲ್ಲಿ ಎಲ್ಲವೂ ಕೊಚ್ಚಿಹೋಗುತ್ತಿದೆ. ಆದರೆ ಕೆಲವೊಮ್ಮೆ ಅನುಕಂಪವೇ ನಮ್ಮ ದೌರ್ಬಲ್ಯವೆನಿಸಿ ಬಿಡುತ್ತದೆ! ಇಂತಹ ದೌರ್ಬಲ್ಯದಿಂದಾಗಿಯೇ ಸೋನಿಯಾ ಸೋಗು ಹಾಕುತ್ತಿದ್ದರೂ ತ್ಯಾಗಮಯಿಯಂತೆ, ಕರುಣಾಮಯಿಯಂತೆ, ಈ ದೇಶದ ಘನತೆಯನ್ನು ಎತ್ತಿಹಿಡಿದ ಮಹಾನ್ ನಾಯಕಿಯಂತೆ ಕಾಣುತ್ತಿದ್ದಾರೆ!

ಅಂತರಾತ್ಮದ ಕರೆ?

ಸೋನಿಯಾ ರಾಷ್ಟ್ರಪತಿ ಭವನಕ್ಕೆ ತೆರಳಿದ್ದು ಮಂಗಳವಾರ ಮಧ್ಯಾಹ್ನ 12.30ಕ್ಕೆ. ಅವರ ಬಳಿ ಮಿತ್ರಪಕ್ಷಗಳ ಬೆಂಬಲಪತ್ರವಿದ್ದವೇ ಹೊರತು, ಇತರ ಪಕ್ಷಗಳ ನಾಯಕರು ಜತೆಯಲ್ಲಿರಲಿಲ್ಲ! ಇನ್ನು, ಸೋನಿಯಾ ಸರಕಾರ ರಚನೆಯ ಹಕ್ಕು ಮಂಡಿಸುವುದು ಮೊದಲೇ ಖಚಿತವಾಗಿದ್ದರಿಂದ ಆ ವೇಳೆಗಾಗಲೇ ರಾಷ್ಟ್ರಪತಿ ಅಬ್ದುಲ್ ಕಲಾಂ ಕಾನೂನು ಪರಿಣತರ ಸಲಹೆಯನ್ನೂ ಪಡೆದುಕೊಂಡಿದ್ದರು. ಇತ್ತ ಮೇ 19ರಂದು ಅಧಿಕಾರದ ಪ್ರಮಾಣ ವಚನ ಸ್ವೀಕಾರ ಸಮಾರಂಭ ನಡೆಯಲಿದೆ ಎಂದು ಎಡಪಕ್ಷಗಳು ಘೋಷಿಸಿಯೇ ಬಿಟ್ಟಿದ್ದವು. ಖುಷಿಯಲ್ಲಿ ತೇಲಿಹೋಗಿದ್ದ ಕಾಂಗ್ರೆಸ್ಸಿಗರು ಅಹುದಹುದೆಂದು ತಲೆಯಾಡಿಸಿದ್ದರು. ಆಶ್ಚರ್ಯವೆಂದರೆ ರಾಷ್ಟ್ರಪತಿ ಭವನದಿಂದ ಹೊರಬಂದ ಸೋನಿಯಾ ಮಾಧ್ಯಮಗಳ ಜತೆ ಮಾತನಾಡದೆ ಹೊರಟೇ ಹೋದರು. ಹಾಗಾದರೆ ರಾಷ್ಟ್ರಪತಿ ಭವನದಲ್ಲಿ ನಡೆದಿದ್ದಾದರೂ ಏನು?

ಸೋನಿಯಾಗಿಂತ ಮೊದಲು ರಾಷ್ಟ್ರಪತಿಯವರನ್ನು ಭೇಟಿಯಾಗಿದ್ದ ಜನತಾ ಪಕ್ಷದ ನಾಯಕ ಸುಬ್ರಮಣ್ಯನ್ ಸ್ವಾಮಿ, ಕೆ. ಗೋವಿಂದಾಚಾರ್ಯ ಮತ್ತು ಸುಷ್ಮಾಸ್ವರಾಜ್, ಸಂವಿಧಾನಾತ್ಮಕ ಸ್ಥಾನವೊಂದನ್ನು ವಿದೇಶಿ ಮೂಲದ ವ್ಯಕ್ತಿಯೊಬ್ಬರು ಅಲಂಕರಿಸುವುದರ ವಿರುದ್ಧ ಮನವಿ ಪತ್ರ ಸಲ್ಲಿಸಿದ್ದರು. ಕಾನೂನುತಜ್ಞರ ಸಲಹೆ ಪಡೆದಿದ್ದ ಅಬ್ದುಲ್ ಕಲಾಂ, ಸರಕಾರ ರಚನೆ ಬಗ್ಗೆ ಚರ್ಚಿಸಲು ಸೋನಿಯಾಗೆ ಆಹ್ವಾನ ನೀಡುವಾಗ, ಆಕೆಯ ನಾಗರಿಕತ್ವ ಮತ್ತು ಕೆಲವು ವಿಚಾರಗಳ ಬಗ್ಗೆ ಸ್ಪಷ್ಟನೆ ಕೇಳಿದ್ದಂತೂ ಸತ್ಯ.

'ಬೇರೆ ದೇಶವೊಂದಕ್ಕೆ ನಿಷ್ಠೆ ಅಥವಾ ಬದ್ಧತೆ ವ್ಯಕ್ತಪಡಿಸಿದ ವ್ಯಕ್ತಿಯನ್ನು ಸಂಸದ ಸ್ಥಾನದಿಂದ ಅನರ್ಹಗೊಳಿಸಬಹುದು' ಎನ್ನುತ್ತದೆ ಸಂವಿಧಾನದ 102ನೇ ವಿಧಿ. ರಾಯ್‌ಬರೇಲಿ ಕ್ಷೇತ್ರದಲ್ಲಿ ಸಲ್ಲಿಸಲಾಗಿರುವ ಅಫಿಡವಿಟ್‌ನಲ್ಲಿ, ಇಟಲಿಯ ಆರ್ಬಸ್ಸಾನೋದಲ್ಲಿ ಪಿತ್ರಾರ್ಜಿತ ಮನೆಯೊಂದನ್ನು ತಾವು ಹೊಂದಿರುವ ಬಗ್ಗೆ ಸೋನಿಯಾ ಉಲ್ಲೇಖಿಸಿದ್ದಾರೆ. ಅಂದರೆ ಸೋನಿಯಾ ಇಟಲಿಯ ಕಾನೂನಿಗೆ ನಿಷ್ಠರಾಗಿದ್ದಾರೆ! ಇನ್ನು ನಾಗರಿಕತ್ವ ಕಾಯಿದೆಯ ಸೆಕ್ಷನ್ 5ರ ಪ್ರಕಾರ, 'ವಿದೇಶಿ ಮೂಲದ ವ್ಯಕ್ತಿಯೊಬ್ಬರಿಗೆ ನಮ್ಮ ದೇಶದಲ್ಲಿ ನೀಡಿರುವ ಹಕ್ಕುಗಳನ್ನು,

ಆ ದೇಶದಲ್ಲಿರುವ ಭಾರತೀಯ ಮೂಲದ ವ್ಯಕ್ತಿಗಳಿಗೂ ನೀಡಬೇಕು'. ಆದರೆ ಭಾರತದಲ್ಲಿ ಜನಿಸಿದವರಿಗೆ ಇಟಲಿಯ ಚುನಾವಣೆಯಲ್ಲಿ ಸ್ಪರ್ಧಿಸುವ ಹಕ್ಕೇ ಇಲ್ಲ! ಜತೆಗೆ ರಾಷ್ಟ್ರಪತಿಯವರಿಗೆ ಸಲ್ಲಿಸಿದ ಮನವಿ ಪತ್ರದಲ್ಲಿ, 'ಭದ್ರತಾ ಪಡೆಗಳು ಮತ್ತು ವಿದೇಶಾಂಗ ಸೇವೆಯಲ್ಲಿರುವ ಅಧಿಕಾರಿಗಳು ವಿದೇಶಿಯರೊಬ್ಬರನ್ನು ವಿವಾಹವಾಗುವುದಕ್ಕೂ ಸರಕಾರದ ಅನುಮತಿ ಪಡೆಯಬೇಕು. ಅಲ್ಲದೆ ತಮ್ಮ ಸ್ಥಾನಕ್ಕೂ ರಾಜೀನಾಮೆ ನೀಡಬೇಕು. ಹಾಗಿರುವಾಗ ನಮ್ಮ ದೇಶದ ಅಣ್ವಸ್ತ್ರಗಳ ಮೇಲಿನ ನಿಯಂತ್ರಣವನ್ನು ವಿದೇಶದಲ್ಲಿ ಜನಿಸಿದ ವ್ಯಕ್ತಿಯೊಬ್ಬರಿಗೆ ಹೇಗೆತಾನೆ ನೀಡಲು ಸಾಧ್ಯ' ಎಂದು ಸುಷ್ಮಾ ಪ್ರಶ್ನಿಸಿದ್ದರು.

ಈ ಮಧ್ಯೆ ಪ್ರಧಾನಿ ಸ್ಥಾನವನ್ನು ಅಲಂಕರಿಸದಂತೆ ಸೋನಿಯಾ ಅವರನ್ನು ನಿರ್ಬಂಧಿಸಬೇಕು ಎಂದು ರಾಷ್ಟ್ರೀಯ ಮುಕ್ತಿ ಮೋರ್ಚಾ ಮೊಕದ್ದಮೆ ದಾಖಲಿಸಿತು. ದಿಲ್ಲಿ ಹೈಕೋರ್ಟ್‌ನ ನ್ಯಾಯಮೂರ್ತಿ ಬಿ.ಸಿ. ಪಟೇಲ್ ಮತ್ತು ಬಿ.ಡಿ. ಅಹಮದ್ ನೇತೃತ್ವದ ವಿಭಾಗೀಯ ಪೀಠ ಮೇ.26ರಂದು ಈ ಅರ್ಜಿಯನ್ನು ವಿಚಾರಣೆಗೆ ಕೈಗೆತ್ತಿಕೊಳ್ಳಲಿದೆ. ಇನ್ನು ಸಮಾಜವಾದಿ ಪಕ್ಷ ನೀಡಿದ ಬೆಂಬಲ ಪತ್ರ ದಲ್ಲಿ ಸೋನಿಯಾ ಅವರನ್ನು ಮೈತ್ರಿಕೂಟ ನಾಯಕಿ ಎಂದು ಉಲ್ಲೇಖಿಸಿಯೇ ಇರಲಿಲ್ಲ. ಇದೆಲ್ಲಕ್ಕಿಂತ ಮುಖ್ಯವಾಗಿ, ವಿದೇಶಿ ಮೂಲದ ಸೋನಿಯಾ ಪ್ರಧಾನಿಯಾಗುವ ವಿರುದ್ಧ ದೇಶಾದ್ಯಂತ ಭಾವನಾತ್ಮಕ ಧ್ರುವೀಕರಣ ಪ್ರಾರಂಭವಾಯಿತು. ಇವು ಕಾಂಗ್ರೆಸ್ಸನ್ನು, ಅದರಲ್ಲೂ ಸೋನಿಯಾ ಅವರನ್ನು ಕಾಡತೊಡಗಿದವು. ಇಂತಹ ಸಂದಿಗ್ಧ ಸಮಯದಲ್ಲಿ ತಮ್ಮ ಆಪ್ತಕೂಟ ನೀಡಿದ ಸಲಹೆ, ಸೋನಿಯಾ ಬಾಯಿಂದ 'ಅಂತ ರಾತ್ಮ'ದ ಕರೆಯಾಗಿ ಹೊರಬಿತ್ತು! 'ನಾನು ವಿನೀತಳಾಗಿ ಈ ಹುದ್ದೆಯನ್ನು ತಿರಸ್ಕರಿಸಲೇಬೇಕು' ಎಂದರು. ದೇಶದ ಘನತೆಯನ್ನು ಎತ್ತಿಹಿಡಿಯಲು ಸೋನಿಯಾ ಮಾಡಿದ 'ತ್ಯಾಗ'ವಿದು ಎಂದು ಮಾಧ್ಯಮಗಳು ವರ್ಣಿಸಿದವು!!

ಆದರೆ ಅದುವರೆಗೂ, ತಾನೇ ಮುಂದಿನ ಪ್ರಧಾನಿ ಎಂದು ಬೀಗುತ್ತಿದ್ದ, ತಯಾರಿ ನಡೆಸುತ್ತಿದ್ದ ಸೋನಿಯಾ, ರಾಷ್ಟ್ರಪತಿ ಭವನದಿಂದ ಹೊರಬಂದ ನಂತರವಷ್ಟೇ ಅಂತರಾತ್ಮದ ಬಗ್ಗೆ, ಅಂತಃಕರಣದ ಕರೆಯ ಬಗ್ಗೆ, ತ್ಯಾಗದ ಬಗ್ಗೆ, 'ಅಧಿಕಾರ ತಮ್ಮ ಗುರಿಯಲ್ಲ' ಎಂಬ ಧ್ಯೇಯದ ಬಗ್ಗೆ ಮಾತ ನಾಡಲಾರಂಭಿಸಿದ್ದೇಕೆ? ಕಾಂಗ್ರೆಸ್ ಸಂಸದೀಯ ಪಕ್ಷದ ನಾಯಕಿಯಾಗಿ ಆಯ್ಕೆಯಾದಾಗ, ಮಿತ್ರ ಪಕ್ಷಗಳ ಬೆಂಬಲ ಪತ್ರವನ್ನು ಪಡೆದುಕೊಳ್ಳುವಾಗ, ಹಕ್ಕುಬಾಧ್ಯತೆ ಮಂಡಿಸಲು ರಾಷ್ಟ್ರಪತಿ ಭವನಕ್ಕೆ ತೆರಳುವಾಗ ಎಲ್ಲಿ ಹೋಗಿತ್ತು ಅಂತರಾತ್ಮ? ರಾಷ್ಟ್ರಪತಿಯವರು ಕೇಳಿದ ಪ್ರಶ್ನೆ ಮತ್ತು ಸ್ಪಷ್ಟನೆಯ ನಂತರ ಅಂತರಾತ್ಮದ ಮಾತೆತ್ತಿದ್ದೇಕೆ? ಆಕೆಯ ಜೀವದ ಬಗ್ಗೆ ಮಕ್ಕಳಾದ ರಾಹುಲ್, ಪ್ರಿಯಾಂಕ ಚಿಂತಿತರಾಗಿರುವುದೇ ಪ್ರಧಾನಿ ಸ್ಥಾನ ತಿರಸ್ಕರಿಸಲು ಕಾರಣ ಎಂದು ಎಡರಂಗದ ಮಹಾನ್ ನಾಯಕ ಸೋಮನಾಥ ಚಟರ್ಜಿ ಕಥೆ ಕಟ್ಟಿದರು! ಕೊನೆಗೆ ಸ್ವತಃ ಕಾಂಗ್ರೆಸ್ ಆ ಕಥೆಯನ್ನು ತಳ್ಳಿಹಾಕಿತು. ಅಂದರೆ ಸೋನಿಯಾ ನಿರ್ಧಾರದ ಹಿಂದಿರುವ ನೈಜ ಕಾರಣ ಮತ್ತು ರಾಷ್ಟ್ರಪತಿ ಭವನದಲ್ಲಿ ನಡೆದದ್ದೇನು ಎಂಬುದು ಪ್ರಮುಖ ಮಿತ್ರಪಕ್ಷವಾದ

ಎಡರಂಗಕ್ಕೇ ತಿಳಿದಿರಲಿಲ್ಲ.

ಈಗ ಹೇಳಿ ಸೋನಿಯಾ.... ಅಂತರಾತ್ಮ ನಿಮ್ಮದೋ ಅಥವಾ ರಾಷ್ಟ್ರಪತಿ ಅಬ್ದುಲ್ ಕಲಾಂ ಅವರದ್ದೋ? ನಿಮ್ಮ ಅಂತರಾತ್ಮಕ್ಕೂ ಅವಕಾಶವಾದಿತನ ಗೊತ್ತೆ? ವಾಜಪೇಯಿಯವರನ್ನು 'ದೇಶದ್ರೋಹಿ' ಎಂದು ಕರೆಯುವಾಗ ನಿಮ್ಮ ಅಂತರಾತ್ಮ, ಆತ್ಮಸಾಕ್ಷಿ ಗಳು ಬುದ್ಧಿ ಹೇಳಲಿಲ್ಲವೇ? ತನ್ನ ಪತಿಯನ್ನು ಕೊಂದವರೆಂದು ನೀವೇ ಹೀಗಳೆದ ಡಿ.ಎಂ.ಕೆ. ಜತೆ ಕೈಜೋಡಿಸುವಾಗ ಅಂತರಾತ್ಮ ಏನು ಮಾಡು ತ್ತಿತ್ತು? 'ಗಲೀ ಗಲಿ ಮೇ ಶೋರ್ ಹೈ.... ರಾಜೀವ್ ಗಾಂಧೀ ಚೋರ್ ಹೈ!' ಎಂದು ಇಡಿ ದೇಶವೇ ನಿಮ್ಮ ಪತಿಯನ್ನು ಮೂದಲಿಸುವಂತೆ ಮಾಡಿದ ವಿ.ಪಿ. ಸಿಂಗ್ ಜತೆ ಸಖ್ಯ ಬೆಳೆಸುವಾಗ ಅಂತರಾತ್ಮ ಹೇಳಿದ್ದಾದರೂ ಏನು? ಆತ್ಮಗೌರವಕ್ಕಿಂತ ಅಧಿಕಾರ ಮುಖ್ಯವಾಗಿತ್ತೆ? ನಿಮ್ಮ ಪತಿಯನ್ನು ವಿ.ಪಿ. ಸಿಂಗ್ ಅವಮಾನಿಸಿದ್ದು, ರಾಜೀವ್ ಸಂಪುಟದಲ್ಲೇ ಮಂತ್ರಿಯಾಗಿದ್ದೂ ಬೆನ್ನಿಗೆ ಚೂರಿ ಇರಿದಿದ್ದು, ಮಹಾಭ್ರಷ್ಟ ಎಂದು ವರ್ಣಿಸಿದ್ದು, ಅದೇ ಭ್ರಷ್ಟಾಚಾರವನ್ನು ಮುಂದಿಟ್ಟುಕೊಂಡು ರಾಜೀವ್ ಪದಚ್ಯುತಿಗೆ ಕಾರಣವಾಗಿದ್ದು ಮರೆತು ಹೋಯಿತೇ? 'ದೇಶ ಆಳಲು ರಾಜೀವ್ ಅನರ್ಹ. ಸೋನಿಯಾ ಮನೆಗೆಲಸಕ್ಕೆ ಮಾತ್ರ ಲಾಯಕ್ಕಾದ ಪತ್ನಿ' ಎಂದು ಜರಿದಿದ್ದ, ಹೀಗಳೆದಿದ್ದಜ್ಯೋತಿ ಬಸು ಜತೆ ಮೈತ್ರಿ ಮಾಡಿಕೊಳ್ಳು ವಾಗ ಅಂತರಾತ್ಮ ಏನೂ ಅನ್ನಲಿಲ್ಲವೇ? ಮುಕ್ತಾರ್ ಅನ್ಸಾರಿ, ಪಪ್ಪು ಯಾದವ್, ಮೊಹ ಮದ್ ಶಹಾಬುದ್ದೀನ್ ಅವರಂತಹ ಮಹಾಪಾಪಿಗಳ, ಕೊಲೆಗಡುಕರ, ಅತ್ಯಾಚಾರಿಗಳ ಬೆಂಬಲ ಪತ್ರದೊಂದಿಗೆ ರಾಷ್ಟ್ರಪತಿಭವನಕ್ಕೆ ತೆರಳುವಾಗ ಅಂತರಾತ್ಮ ಬುದ್ಧಿ ಹೇಳಲಿಲ್ಲವೇ?

ಇತ್ತ ಸೋನಿಯಾ ಅವರನ್ನು ತ್ಯಾಗಮಯಿ ಎಂದು ವರ್ಣಿಸಲಾರಂಭಿಸಿದ ಮಾಧ್ಯಮಗಳು, ಪ್ರಧಾನಿ ಸ್ಥಾನಕ್ಕೆ ಎಂದೂ ಆಸೆ ಪಡದ ಮಹಾತ್ಮ ಗಾಂಧೀಜಿ ಮತ್ತು ಜಯಪ್ರಕಾಶ್ ನಾರಾಯಣ್‌ಗೆ ಹೋಲಿಸಲಾರಂಭಿಸಿದವು! ಪೆನಲೊಪೆ ಕ್ರೂಸ್ ಇಂದು ರಾತ್ರಿ ಯಾರ ಜತೆ ಮಲಗಿದ್ದಳು, ರಸೆಲ್ ಕ್ರೋವ್ ಜತೆ ಸುಖ ಅನುಭವಿಸಿದವರಾರು, ಮರ್ಲಿನ್ ಮನ್ರೋಳ ಒಳ ಉಡುಪುಗಳು ಎಷ್ಟು ಡಾಲರ್‌ಗೆ ಮಾರಾಟವಾದವು ಎಂಬ ಸುದ್ದಿಗಳನ್ನೇ ಪ್ರಕಟಿಸುವ ಕರ್ನಾಟಕದ ನಂಬರ್ 1 ಇಂಗ್ಲಿಷ್ ದಿನಪತ್ರಿಕೆ, 'ಸಂಘಪರಿವಾರಕ್ಕೆ ಸೋನಿಯಾ ಭಾರ ತೀಯತೆಯ ಪಾಠ ಕಲಿಸಿದರು' ಎಂದು ಸಂಪಾ ದಕೀಯ ಬರೆಯಿತು! ವಿವಾಹವಾಗಿದ್ದೇ ಮಹಾಪರಾಧ ಎಂದು ಲಕ್ಷ್ಮೀ ಪಂಡಿತಳಿಂದ 'ಮಿಸ್ ಇಂಡಿಯಾ' ಕಿರೀಟ ಕಿತ್ತುಕೊಂಡ ಈ ಪತ್ರಿಕೆಗೆ ಭಾರತೀಯತೆಯ ಬಗ್ಗೆ ಏನು ಗೊತ್ತು? ಆದರೂ ಸೋನಿಯಾ ಅವರಿಂದ ತ್ಯಾಗದ ಪಾಠ ಕಲಿಯಬೇಕೆಂದು ಭಾರತೀಯರಿಗೆ ಗಿಳಿಪಾಠ ಹೇಳಿ ಕೊಡುತ್ತಿದೆ. ಆದರೆ ಹೆಣ್ಣನ್ನು ಮಾತೆ ಎಂದು ಪೂಜಿಸುವ ಭಾರತೀಯರು, ಅದೇ ಹೆಣ್ಣನ್ನು Sex Machine ಎಂಬಂತೆ ಕಾಣುವ ಇಟಲಿಯಲ್ಲಿ ಜನಿಸಿದಾಕೆಯಿಂದ ಪಾಠ ಕಲಿಯಬೇಕೆ? ಸೆಪ್ಟೆಂಬರ್ 11ರ ಭಯೋತ್ಪಾದಕ ದಾಳಿಯ ನಂತರ ಅಮೆರಿಕದ ಮಾಧ್ಯಮಗಳು ಅಲ್ಲಿನ ಸರ ಕಾರದ ಬೆಂಗಾವಲಿಗೆ ನಿಂತವು. ಆದರೆ ಇಂಡಿ ಯನ್ ಏರ್‌ಲೈನ್ಸ್ ವಿಮಾನವನ್ನು ಕಂದಹಾರ್‌ಗೆ ಅಪಹರಿಸಿದಾಗ ಭಾರತೀಯ ಮಾಧ್ಯಮಗಳು ಸ್ವಂತ ದೇಶದ ಮಾನ ಹರಾಜು ಹಾಕಿದ್ದವು. ಇಂತಹ

ಮಾಧ್ಯಮಗಳು ಸೋನಿಯಾರಿಂದ ಭಾರತೀಯತೆಯನ್ನು ಕಲಿಯಿರಿ ಎಂದು ತಿಳಿ ಹೇಳುತ್ತಿವೆ. ಮುಂದೊಂದು ದಿನ ರಾಹುಲ್ ಗಾಂಧಿಯ ಕೊಲಂಬಿಯಾ ಪ್ರೇಯಸಿ ಜುನ್ನೈತಾಳಿಂದಲೂ ನೀತಿಪಾಠ ಕಲಿಯಬೇಕು ಎನ್ನುತ್ತವೆ! ಇದು ನಮ್ಮ ಮಾಧ್ಯಮಗಳು ನಡೆಸುತ್ತಿರುವ ಬೌದ್ಧಿಕ ವೇಶ್ಯಾವಾಟಿಕೆಯಲ್ಲವೇ? ಬೌದ್ಧಿಕ ಸಂಪತ್ತಿನ ಆಗರವೆಂದೇ ಖ್ಯಾತಿವೆತ್ತಿದ್ದ ಭಾರತದಲ್ಲಿ ಇಂತಹ ಬೌದ್ಧಿಕ ವೇಶ್ಯಾವಾಟಿಕೆ ನಡೆಯುತ್ತಿರುವುದು ಅಸಹ್ಯ ಹುಟ್ಟಿಸುವುದಿಲ್ಲವೇ?

ನಮ್ಮ ಮಾಧ್ಯಮಗಳಿಗೇನಾಗಿದೆ? ಜೀವನ ಪರ್ಯಂತ ಪರಕೀಯರ ಆಡಳಿತದ ವಿರುದ್ಧ ಹೋರಾಡಿದ ಗಾಂಧೀಜಿ ಜತೆ ಸೋನಿಯಾ ಅವರನ್ನು ಹೋಲಿಸುವುದು ಸರಿಯೇ? ಬ್ರಿಟಿಷ್ ಆಡಳಿತದಿಂದ ಭಾರತಕ್ಕೆ ಮುಕ್ತಿ ನೀಡಿದ್ದು ತಮ್ಮ ಪಕ್ಷ ಎಂದು ಕಾಂಗ್ರೆಸಿಗರು ಕಳೆದ 57 ವರ್ಷಗಳಿಂದಲೂ ಮತಯಾಚನೆ ಮಾಡುತ್ತಿದ್ದಾರೆ. ಆದರೆ ಅದೇ ಕಾಂಗ್ರೆಸ್ಸಿಗರು ವಿದೇಶಿ ಮೂಲದ ಸೋನಿಯಾ ಅವರ ಪಾದಕ್ಕೆರಗಿದ್ದಾರೆ. ಇಂತಹ ದೈನೇಸಿತನ ಬೇಕೆ? ಹುಟ್ಟಿದ್ದು, ಬೆಳೆದದ್ದು ಅಮೆರಿಕದಲ್ಲೇ ಆದರೂ, ಮತಾಂತರಗೊಂಡ ಭಾರತೀಯ ಮೂಲದ ಕ್ರೈಸ್ತ ಎಂಬ ಕಾರಣಕ್ಕೆ ಲೂಸಿಯಾನಾ ಮತದಾರರು ಬಾಬಿ ಜಿಂದಾಲ್ ಅವರನ್ನು ಸೋಲಿಸಿದರು. ಆಗ ನಮ್ಮ ಮಾಧ್ಯಮಗಳು ಅಮೆರಿಕ ಜನತೆಯನ್ನೇಕೆ ತೆಗಳಲಿಲ್ಲ? ಅಲ್ಲಿನ ಪ್ರಜಾಪ್ರಭುತ್ವವನ್ನೇಕೆ ಪ್ರಶ್ನಿಸಲಿಲ್ಲ? ವಿದೇಶಿ ಮೂಲದ ವ್ಯಕ್ತಿ ದೇಶದ ಪ್ರಧಾನಿಯಾಗಬಾರದು ಎಂದು ಸಂವಿಧಾನದಲ್ಲಿ ನಿರ್ಬಂಧವೇನೂ ಇಲ್ಲ ಎನ್ನುತ್ತಿವೆ. ನೂರೈವತ್ತು ವರ್ಷ ವಿದೇಶಿಯರ ವಿರುದ್ಧ ಹೋರಾಡಿದ ನಮ್ಮ ಸ್ವಾತಂತ್ರ್ಯ ಹೋರಾಟಗಾರರು, ಮುಂದಿನ ತಲೆಮಾರಿನ ಭಾರತೀಯರು ಸ್ವತಃ ದಾಸ್ಯಕ್ಕೆ ಆಹ್ವಾನ ನೀಡುತ್ತಾರೆ ಎಂದು ದುಃಸ್ವಪ್ನದಲ್ಲೂ ಕಂಡಿರುವುದಿಲ್ಲ. ಒಂದು ವೇಳೆ ಅಂತಹ ಕಲ್ಪನೆ ಅವರಿಗಿದ್ದಿದ್ದರೆ ಖಂಡಿತಾ ಸಂವಿಧಾನದಲ್ಲಿ ನಿರ್ಬಂಧ ಹೇರುತ್ತಿದ್ದರು.

1191ರಲ್ಲಿ ನಡೆದ ಮೊದಲ ತರೈನ್ ಯುದ್ಧದಲ್ಲಿ ಸೋತು ಶರಣಾದ ಮಹಮದ್ ಘೋರಿಗೆ ಪೃಥ್ವಿರಾಜ ಕ್ಷಮಾದಾನ ನೀಡಿದ. ತನ್ನನ್ನು ಕೊಲ್ಲಲು ಬಂದವ ಎಂಬುದನ್ನೇ ಮರೆತ. ಆದರೆ ಎರಡನೇ ತರೈನ್ ಯುದ್ಧದಲ್ಲಿ ತಾನೇ ಸೋತಾಗ ಘೋರಿಯ ಖಡ್ಗಕ್ಕೆ ತಲೆಕೊಡಬೇಕಾಯಿತು! ಒಂದು ವೇಳೆ ಘೋರಿ ಸೋತಾಗ ಆತನಿಗೆ ಕ್ಷಮಾದಾನ ನೀಡದೇ ಇದ್ದಿದ್ದರೆ, ಅನುಕಂಪದ ಅಶ್ರುಧಾರೆಯಲ್ಲಿ ಶತ್ರು ಎಂಬುದನ್ನು ಮರೆಯದೇ ಹೋಗಿದ್ದರೆ ಪೃಥ್ವಿರಾಜನೂ ಸಾಯುತ್ತಿರಲಿಲ್ಲ, ಈ ದೇಶವೂ ಮುಸ್ಲಿಮರ ಆಡಳಿತಕ್ಕೆ ಒಳಪಡುತ್ತಿರಲಿಲ್ಲ! ಅಂದು ಅನುಕಂಪವೇ ಆತನ ದೌರ್ಬಲ್ಯವಾಗಿತ್ತು. ಅದು ನಮ್ಮ ದೌರ್ಬಲ್ಯವೂ ಹೌದು. ಹಾಗಾಗಿಯೇ ಸೋನಿಯಾ ಸೋಗನ್ನು ತ್ಯಾಗವೆಂದು ನಂಬಿ ಅನುಕಂಪ ವ್ಯಕ್ತಪಡಿಸುತ್ತಿದ್ದೇವೆ!

ಸೋನಿಯಾ ಗಾಂಧಿಯವರ ಹೆಸರನ್ನು ಕೇವಲ 'ಸೋನಿಯಾ' ಎಂದೇ ಲೇಖನದುದ್ದಕ್ಕೂ ಉಲ್ಲೇಖಿಸಿರುವುದು ಅಂಕಣಕಾರರ ವೈಷಮ್ಯವನ್ನು ಬಿಂಬಿಸುತ್ತದೆ.

ಮೀನಾಕ್ಷಿ
ಶಿವಮೊಗ್ಗ



# 28 | ಗಾಂಧಿ ಅನ್ನೋ ಹೆಮ್ಮರದ ಕೆಳಗೆ ಹೂತು ಹಾಕುವ ಮುನ್ನ..!

1943ರಲ್ಲಿ ಭಾರತ ರಾಷ್ಟ್ರೀಯ ಸೇನೆಯನ್ನು ಕಟ್ಟಿ, "Give me blood, I will give you freedom" ಎಂಬ ಕರೆಯೊಂದಿಗೆ ಬರ್ಮಾ ಮೂಲಕ ಬ್ರಿಟಿಷರ ಮೇಲೆ ಆಕ್ರಮಣ ಮಾಡಲು ಮುಂದಾದ ಸುಭಾಷ್‌ಚಂದ್ರ ಬೋಸರ ವಿರುದ್ಧ, 'ತಾನೇ ಕತ್ತಿಹಿಡಿದು ಹೋರಾಡುತ್ತೇನೆ' ಎಂದಾಗಲೇ ಬ್ರಿಟಿಷರಿಗಿಂತ ಮೊದಲು ನೆಹರೂ ಅವರನ್ನು ಕತ್ತುಹಿಡಿದು ದೇಶದಿಂದ ಹೊರದಬ್ಬಬೇಕಿತ್ತು! ಆದರೆ ಆ ಕೆಲಸ ಮಾಡಬೇಕಿದ್ದ ಗಾಂಧೀಜಿ, ಬಾಯಿಗೆ ಬೀಗಹಾಕಿಕೊಂಡಿದ್ದರು. ಕನಿಷ್ಠ, ನೆಹರೂ ಅವರನ್ನು ಖಂಡಿಸುವ ಗೋಜಿಗೂ ಹೋಗಲಿಲ್ಲ. ಏಕೆಂದರೆ ನೇತಾಜಿ ಬಗ್ಗೆ ಗಾಂಧೀಜಿಗೂ ಭಯವಿತ್ತು! ಪ್ರಧಾನಿ ಪಟ್ಟ ತಪ್ಪಿಹೋದೀತೆಂಬ ಭಯ ನೆಹರೂಗೆ, ಸ್ವಾತಂತ್ರ್ಯ ಹೋರಾಟದ ಮೇರುನಾಯಕನೆಂಬ ಸ್ಥಾನಕ್ಕೆ ನೇತಾಜಿ ಸವಾಲೆಸೆಯಬಹುದೆಂಬ ಭಯ ಗಾಂಧೀಜಿಗೆ.

ಇಂತಹ ನೆಹರೂ 1947ರಲ್ಲಿ ಪ್ರಧಾನಿಯಾದ ನಂತರ, '1945, ಆಗಸ್ಟ್ 18ರಂದು ತೈವಾನ್ ರಾಜಧಾನಿ ತೈಹೋಕು (ಈಗ ತೈಪೆ) ಬಳಿ ನಡೆದ ವಿಮಾನ ಅಪಘಾತದಲ್ಲಿ ನೇತಾಜಿ ದುರ್ಮರಣವನ್ನಪ್ಪಿದರು' ಎಂದು ಸಂಸತ್ತಿನಲ್ಲಿ ಘೋಷಣೆ ಮಾಡಿ ಅನುಮಾನಗಳಿಗೆ ತೆರೆಯೆಳೆಯಲು ಯತ್ನಿಸಿದರು. ಆದರೆ ನೆಹರೂ ಮಾತನ್ನು ನಂಬಲು ದೇಶವಾಸಿಗಳು ಸಿದ್ಧರಿರಲಿಲ್ಲ. ಒತ್ತಾಯಕ್ಕೆ ಮಣಿದ ನೆಹರೂ, ನೇತಾಜಿ ಕಣ್ಮರೆಯ ಬಗ್ಗೆ ತನಿಖೆ ನಡೆಸಲು 1956ರಲ್ಲಿ ಶಾ ನವಾಜ್ ಖಾನ್ ಆಯೋಗ ರಚಿಸಿದರು. ನಿರೀಕ್ಷಿತ ವರದಿಯೇ ಹೊರಬಿತ್ತು. ನೆಹರೂ 'ಸತ್ಯ'ಕ್ಕೆ ಜಯವಾಯಿತು! ಆದರೆ ವಿಷಯ ತಣ್ಣಗಾಗಲಿಲ್ಲ. ಸಾರ್ವಜನಿಕ ಒತ್ತಡ ಮುಂದುವರಿಯಿತು. 1974ರಲ್ಲಿ ಪ್ರಧಾನಿ ಇಂದಿರಾ ಗಾಂಧಿಯವರು, ನ್ಯಾಯಮೂರ್ತಿ ಜಿ.ಡಿ. ಖೋಸ್ಲಾ ಆಯೋಗವನ್ನು ರಚನೆ ಮಾಡಿದರು. ಸತ್ಯವನ್ನರಸುತ್ತಾ ತೈವಾನ್‌ಗೆ ತೆರಳಿದ ಖೋಸ್ಲಾ 1945, ಆಗಸ್ಟ್ 18ರಂದು ನಡೆದಿದ್ದೇನು ಎಂದು ತಿಳಿದುಕೊಳ್ಳುವಷ್ಟರಲ್ಲಿ, 'ತೈವಾನ್ ಸರಕಾರದ ಜತೆ ಅಧಿಕೃತವಾಗಿ ಯಾವುದೇ ಮಾತುಕತೆಯನ್ನಾಗಲಿ, ಸಂವಾದವನ್ನಾಗಲಿ ನಡೆಸಬಾರದು' ಎಂದು ವಿದೇಶಾಂಗ ಸಚಿವ ಸರ್ದಾರ್ ಸ್ವರಣ್ ಸಿಂಗ್ ಆದೇಶ ನೀಡಿದರು. ಸೂಕ್ಷ್ಮ ಸಂದೇಶವನ್ನು ಅರಿತ ಖೋಸ್ಲಾ, ಸ್ವರಣ್ ಸಿಂಗ್ ಅವರ 'ಅಲಿಖಿತ' ಆದೇಶವನ್ನು ಶಿರಸಾ ಪಾಲಿಸಿದರು. ಸ್ವದೇಶಕ್ಕೆ ಮರಳಿ, ''1945, ಆಗಸ್ಟ್ 18ರಂದು ತೈವಾನ್ ರಾಜಧಾನಿ ತೈಹೋಕು (ಈಗ ತೈಪೆ) ಬಳಿ ನಡೆದ ವಿಮಾನ ಅಪಘಾತದಲ್ಲಿ ನೇತಾಜಿ ದುರ್ಮರಣವನ್ನಪ್ಪಿದರು'' ಎಂಬ ವರದಿಯೊಪ್ಪಿಸಿದರು. ಆದರೆ 1977ರಲ್ಲಿ ಪ್ರಧಾನಿಯಾದ ಮುರಾರ್ಜಿ ದೇಸಾಯಿ, ಖಾನ್ ವರದಿಯನ್ನಾಗಲಿ, ಖೋಸ್ಲಾ ಥಿಯರಿಯನ್ನಾಗಲಿ ಒಪ್ಪಲಿಲ್ಲ. ಸಂಸತ್ತಿನೆದುರೇ ಎರಡೂ ವರದಿಗಳನ್ನು ತಿರಸ್ಕರಿಸಿದರು. ಆದರೂ ಹೊಸದಾಗಿ ಯಾವುದೇ ಆಯೋಗಗಳು ರಚನೆಯಾಗಲಿಲ್ಲ. ಆದರೇನಂತೆ, ಡಾ. ಮಧುಸೂದನ್ ಪಾಲ್, ನಂದಲಾಲ್ ಚಕ್ರವರ್ತಿ, ಹಿಂದೂಸ್ಥಾನ್ ಟೈಮ್ಸ್ ಪತ್ರಿಕೆ ಸೇರಿದಂತೆ ಸುಮಾರು 20ಕ್ಕೂ ಅಧಿಕ ಖಾಸಗಿ ಸತ್ಯಶೋಧನೆ ಮತ್ತು ತನಿಖೆಗಳು ನಡೆದವು. ಈ ಎಲ್ಲ ಸಂಶೋಧನೆಗಳೂ ಖಾನ್ ಮತ್ತು ಖೋಸ್ಲಾ ಆಯೋಗಗಳ ವರದಿಗೆ ತದ್ವಿರುದ್ಧವಾದ ಅಭಿಪ್ರಾಯ ನೀಡಿದವು. ಕೆಲವರು 1960ರ ದಶಕದಲ್ಲಿ ಉತ್ತರ ಪ್ರದೇಶದ ಫೈಜಾಬಾದ್‌ನ ಅಯೋಧ್ಯೆ

ಬಳಿಯಿದ್ದ 'ಗುಮ್ನಾಮಿ ಬಾಬಾ'ನೇ ನೇತಾಜಿ ಎಂದು ಪ್ರತಿಪಾದಿಸಿದರು. ಆದರೆ ಹಿಟ್ಲರ್‌ನಂತಹ ಕ್ರೂರಿಯನ್ನೇ ಎದುರಿಸಿ ಬಂದಿದ್ದ ನೇತಾಜಿ, ತನ್ನ ನೆಲದಲ್ಲೇ ಅಬ್ಬೇಪಾರಿಯಂತೆ ಬದುಕಿ, 1985ರಲ್ಲಿ ಕಣ್ಮರೆಯಾದರು ಎಂಬ ವಾದವನ್ನು ಒಪ್ಪಲು ಸಾಧ್ಯವೇ ಇಲ್ಲ. ಇದೇನೇ ಇದ್ದರೂ, ಎರಡನೇ ಮಹಾಯುದ್ಧ ಅಂತ್ಯಗೊಂಡ ನಂತರವೂ ನೇತಾಜಿ ರಷ್ಯಾ ಜೈಲಿನಲ್ಲಿದ್ದರು ಎಂಬ ಅಭಿಪ್ರಾಯ ಮನ್ನಣೆ ಪಡೆಯುತ್ತದೆ.

ಹಾಗಾದರೆ 1945, ಆಗಸ್ಟ್ 18ರಂದು ನಿಜವಾಗಿಯೂ ನಡೆದಿದ್ದೇನು?

'ತೈಹೋಕು ಬಳಿ ನಡೆದ ವಿಮಾನ ಅಪಘಾತದಲ್ಲಿ ನೇತಾಜಿ ದುರ್ಮರಣವನ್ನಪ್ಪಿದರು' ಎಂದು ರಾಯಿಟರ್ಸ್ ಸುದ್ದಿಸಂಸ್ಥೆ, ಜಪಾನಿ ಸುದ್ದಿಸಂಸ್ಥೆಗಳನ್ನು ಉಲ್ಲೇಖಿಸಿ ವರದಿ ಮಾಡಿದ್ದೇನೋ ಸರಿ. ಆದರೆ ನೇತಾಜಿಯವರ ಮೇಲೆ ಹದ್ದಿನಗಣ್ಣಿಟ್ಟಿದ್ದ ಬ್ರಿಟನ್ ಮತ್ತು ಅಮೆರಿಕ ನೇತೃತ್ವದ ಪಡೆಗಳನ್ನು ದಾರಿ ತಪ್ಪಿಸುವ ಮೂಲಕ ನೇತಾಜಿಯವರನ್ನು ರಕ್ಷಿಸಲು ಜಪಾನ್ ಈ ರೀತಿಯ ಸುದ್ದಿಯನ್ನು ಸೃಷ್ಟಿಸಿರಬಹುದಲ್ಲವೇ? ಕೋಲ್ಕತಾ ಹೈಕೋರ್ಟ್‌ನ ಆದೇಶದ ಮೇರೆಗೆ ಮಾಜಿ ಗೃಹ ಸಚಿವ ಎಲ್.ಕೆ. ಆಡ್ವಾಣಿಯವರು 1999ರಲ್ಲಿ ರಚಿಸಿದ ನ್ಯಾಯಮೂರ್ತಿ ಎಂ.ಕೆ. ಮುಖರ್ಜಿ ಆಯೋಗ, ಇಂತಹ ಸತ್ಯವನ್ನರಸುತ್ತಾ ತೈವಾನ್‌ಗೆ ತೆರಳಿತ್ತು! 'ಮಹಾ ಚೀನಾ' ರಚನೆಯ ನೆಪದಲ್ಲಿ ತೈವಾನನ್ನು ನುಂಗಲು ಹವಣಿಸುತ್ತಿರುವ ಚೀನಾವನ್ನು ಮೆಚ್ಚಿಸುವ ಸಲುವಾಗಿ ಭಾರತ ತೈವಾನ್ ಜತೆ ಯಾವುದೇ ರಾಜತಾಂತ್ರಿಕ ಸಂಬಂಧ ಹೊಂದಿಲ್ಲ. ಹಾಗಾಗಿ ಕಳೆದ ಫೆಬ್ರವರಿಯಲ್ಲಿ ತೈವಾನ್‌ಗೆ ಖಾಸಗಿ ಪ್ರವಾಸ ಕೈಗೊಂಡಿದ್ದ ಮುಖರ್ಜಿ ಅವರಿಗೆ-1945, ಆಗಸ್ಟ್ 14ರಿಂದ ಅಕ್ಟೋಬರ್ 25ರವರೆಗಿನ ಎಲ್ಲ ದಾಖಲೆಗಳನ್ನು ಪರಿಶೀಲಿಸಿದ ತೈವಾನ್‌ನ ಆಂತರಿಕ ಭದ್ರತಾ ಸಚಿವಾಲಯ ಹಾಗೂ ತೈಪೆ ಮೇಯರ್, ''1945, ಆಗಸ್ಟ್ 18ರಂದು ಯಾವುದೇ ವಿಮಾನ ಅಪಘಾತ ಸಂಭವಿಸಿಲ್ಲ'' ಎಂದು ಸ್ಪಷ್ಟವಾಗಿ ತಿಳಿಸಿದ್ದಾರೆ! ಅಂದರೆ 1945ರಲ್ಲಿ ನೇತಾಜಿ ಸಾಯಲಿಲ್ಲ ಎಂದಂತಾಯಿತು!! ಆದರೆ 1945ರ ನಂತರದ ನೇತಾಜಿ ಬದುಕಿನ ಬಗ್ಗೆ ಬೆಳಕು ಚೆಲ್ಲುವ ದಾಖಲೆಗಳು ರಷ್ಯಾದ ಇಂಟಲಿಜೆನ್ಸ್ ಏಜೆನ್ಸಿ ಕೆಜಿಬಿ ಮತ್ತು ಅಧ್ಯಕ್ಷೀಯ ಪತ್ರಾಗಾರದಲ್ಲಿವೆ. ಹಾಗಾಗಿ ಜಾದವ್‌ಪುರ್ ವಿಶ್ವವಿದ್ಯಾಲಯದ ಪ್ರೊಫೆಸರ್ ಪುರಬಿ ರಾಯ್, ಹಲವಾರು ರಷ್ಯನ್ನರು, ಕೆಜಿಬಿ ಏಜೆಂಟರು, ವಿದ್ವಾಂಸರು ಮತ್ತು ಸರಕಾರಿ ಅಧಿಕಾರಿಗಳನ್ನು ಸಂಪರ್ಕಿಸಿದ್ದಾರೆ. ಅವರು, ರಹಸ್ಯ ದಾಖಲೆಗಳನ್ನು ಒದಗಿಸುವಲ್ಲಿ ಮತ್ತು ಇಂಗ್ಲಿಷಿಗೆ ಭಾಷಾಂತರ ಮಾಡುವಲ್ಲಿ ಮುಖರ್ಜಿ ಆಯೋಗಕ್ಕೆ ಸಹಕರಿಸುವುದಾಗಿ ಭರವಸೆಯನ್ನೂ ನೀಡಿದ್ದಾರೆ. ಅಷ್ಟೇ ಅಲ್ಲ, ಸ್ಟಾಲಿನ್ ಆಡಳಿತಾವಧಿಯಲ್ಲಿದ್ದ ಕೆಲವು ರಷ್ಯನ್ನರು ಇನ್ನೂ ಬದುಕಿದ್ದು, ಅವರ ಬಳಿ ನೇತಾಜಿಗೆ ಸಂಬಂಧಿಸಿದ ಪ್ರಾಥಮಿಕ ಮಾಹಿತಿಗಳಿವೆ. ಅವರು ಮೃತರಾದರೆ ಸತ್ಯವನ್ನು ಬೆಳಕಿಗೆ ತರುವುದು ಅಸಾಧ್ಯವಾಗುತ್ತದೆ. ಆದ್ದರಿಂದ ಕೂಡಲೇ ರಷ್ಯಾಕ್ಕೆ ಹೋಗಬೇಕಾಗಿದೆ. ಅಲ್ಲದೆ 1945ರ ನಂತರ ನೇತಾಜಿಯ ಕುರುಹುಗಳು ಕಂಡುಬಂದಿದ್ದ ಸೈಬೀರಿಯಾದ ಒಮ್‌ಸ್ಕ್ ನಗರಕ್ಕೂ ಭೇಟಿ ನೀಡಬೇಕಾಗಿದೆ.

ಈ ಹಿಂದೆ, 1991ರಲ್ಲಿ ಸೋವಿಯತ್ ರಷ್ಯಾ ಛಿದ್ರವಾದ ನಂತರ ಕೆಜಿಬಿಯ ರಹಸ್ಯ ದಾಖಲೆಗಳನ್ನು ವಿದೇಶಿ ಸಂಶೋಧನಾಕಾರರಿಗೆ ಒದಗಿಸಲು ರಷ್ಯಾ ಒಪ್ಪಿತ್ತು. ಆದರೆ ಇಂತಹ ದಾಖಲೆಗಳನ್ನು ಯಾವುದೇ ವಿದ್ವಾಂಸರಾಗಲಿ, ಸಂಶೋಧನಾಕಾರರಾಗಲಿ ತಮ್ಮ ವೈಯಕ್ತಿಕ ಮನವಿ ಅಥವಾ ಸಾಮರ್ಥ್ಯದಿಂದ ಪಡೆಯಲು ಸಾಧ್ಯವಿಲ್ಲ. ಸಂಬಂಧಪಟ್ಟ ಸರಕಾರ ಅಧಿಕೃತವಾಗಿ ರಷ್ಯಾಕ್ಕೆ ಮನವಿ ಸಲ್ಲಿಸಬೇಕು. ಇದನ್ನರಿತ ಪ್ರೊಫೆಸರ್ ರಾಯ್ ಕರೆ ನೀಡಿದರೂ, ಆಗಿನ ಪ್ರಧಾನಿ ನರಸಿಂಹರಾವ್ ಅವರಾಗಲಿ, ವಿದೇಶಾಂಗ ಸಚಿವ ಪ್ರಣವ್ ಮುಖರ್ಜಿಯವರಾಗಲಿ ಓಗೊಟ್ಟಿರಲಿಲ್ಲ. ಪ್ರಣವ್ ಮುಖರ್ಜಿಯವರಂತೂ, ಜಪಾನ್‌ನ ರೆಂಕೋಜಿ ದೇವಾಲಯದಲ್ಲಿರುವ ಚಿತಾಭಸ್ಮ ನೇತಾಜಿಯವರದ್ದೇ ಎಂದು ಪ್ರತಿಪಾದಿಸಿದ್ದರು. ಹಾಲಿ ಕೇಂದ್ರ ಸರಕಾರವೂ ನೇತಾಜಿ ವಿಷಯದಲ್ಲಿ ಗಾಂಧೀಜಿ ಮತ್ತು ನೆಹರೂ ಅವರಂತೆಯೇ ವರ್ತಿಸುತ್ತಿದೆ. ಏಕೆಂದರೆ ಒಂದು ವೇಳೆ ನ್ಯಾಯಮೂರ್ತಿ ಮುಖರ್ಜಿಯವರೇನಾದರೂ ರಷ್ಯಾಕ್ಕೆ ತೆರಳಿದರೆ, ರಹಸ್ಯ ದಾಖಲೆಗಳಲ್ಲಿರುವ ಸತ್ಯವನ್ನು ಬೆಳಕಿಗೆ ತಂದರೆ, ಸಿಂಗಪುರ-ಥಾಯ್ಲೆಂಡ್-ವಿಯೆಟ್ನಾಂಗಳಿಗೆ ಹೋಗಿ ತನಿಖೆ ನಡೆಸಿದರೆ, '1945ರಲ್ಲಿ ನಡೆದ ವಿಮಾನ ಅಪಘಾತದಲ್ಲಿ ನೇತಾಜಿ ಸತ್ತರು' ಎಂದು ನೆಹರೂ ಮನೆತನ ಹೇಳುತ್ತಾ, ನಂಬಿಸುತ್ತಾ ಬಂದಿರುವ ಹಸಿಸುಳ್ಳು ಬಹಿರಂಗವಾಗುತ್ತದೆ. ಆಳುವ ಕಾಂಗ್ರೆಸ್ ತಲ್ಲಣಗೊಂಡಿದೆ. 2004, ನವೆಂಬರ್ 19ರಂದು ಶಿವರಾಜ್ ಪಾಟೀಲ್ ಅವರ ಗೃಹಖಾತೆ ಕಳುಹಿಸಿರುವ ಪತ್ರದಲ್ಲಿ (11034/18/98-ಎನ್‌ಸಿಬಿ-11) ''ಅಂತಿಮ ಗಡುವಿನೊಳಗೆ ವರದಿ ಸಲ್ಲಿಸಬೇಕು. ಸಮಿತಿಗೆ ನೀಡಲಾಗಿರುವ 14-05- 2005ರ ಗಡುವನ್ನು ವಿಸ್ತರಿಸಲು ಸಾಧ್ಯವೇ ಇಲ್ಲ'' ಎಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಇದರರ್ಥವೇನು? ಆತುರವೇಕೆ? ಗಡುವು ಪೂರ್ಣಗೊಳ್ಳಲು ಉಳಿದಿರುವುದು ಕೇವಲ ಒಂದು ತಿಂಗಳು. ಅಲ್ಲದೆ ರಷ್ಯಾದಲ್ಲಿ ಕೊರೆಯುವ ಚಳಿಯಿದೆ. ಮೇ.ವರೆಗೂ ಸೈಬೀರಿಯಾಕ್ಕಂತೂ ಕಾಲಿಡಲು ಸಾಧ್ಯವಿಲ್ಲ. ಸರಕಾರದ ಅನುಮತಿಯಿಲ್ಲದೆ ಸಿಂಗಪುರ, ಥಾಯ್ಲೆಂಡ್ ಮತ್ತು ವಿಯೆಟ್ನಾಂಗಳಿಗೆ ತೆರಳಿ ತನಿಖೆ ನಡೆಸುವುದಂತೂ ಕನಸಿನ ಮಾತು. ಒಟ್ಟಿನಲ್ಲಿ ಸತ್ಯ ಹೊರಬರಬಾರದು. ನೆಹರೂ ಹೇಳಿದ ಸುಳ್ಳನ್ನು ಸತ್ಯವೆಂದು ನಾವೆಲ್ಲ ನಂಬಬೇಕು! ಹೇಗಿದೆ ನೋಡಿ, ಸತ್ಯವನ್ನು ಸಮಾಧಿ ಮಾಡುವ ಪರಿ?

ಅಂದು ಸ್ವರಣ್ ಸಿಂಗ್, ಇಂದು ಶಿವರಾಜ್ ಪಾಟೀಲ್. ಇಬ್ಬರದ್ದೂ ಭಟ್ಟಂಗಿತನವೇ.

ಹಾದಿ-ಬೀದಿಗಳೆಲ್ಲ ಮಹಾತ್ಮಗಾಂಧಿ(ಎಂಜಿ) ರಸ್ತೆಗಳಾಗಿವೆ. ನೆಹರೂ, ಇಂದಿರಾ, ರಾಜೀವ್ ಗಾಂಧಿ ಹೆಸರಂತೂ ದೇಶದುದ್ದಗಲಕ್ಕೂ ಇರುವ ವಿಶ್ವವಿದ್ಯಾಲಯಗಳಲ್ಲಿ ರಾರಾಜಿಸುತ್ತಿವೆ. ವಿಮಾನ ನಿಲ್ದಾಣಗಳೂ ಇಂದಿರಾ, ರಾಜೀವ್ ಹೆಸರು ಪಡೆದಿವೆ. ಗಾಂಧಿ ಶಾಂತಿ ಪ್ರಶಸ್ತಿ, ಅಂತಾರಾಷ್ಟ್ರೀಯ ತಿಳಿವಳಿಕೆಗಾಗಿನ ನೆಹರೂ ಶಾಂತಿ ಪ್ರಶಸ್ತಿ, ಇಂದಿರಾ ಪ್ರಿಯದರ್ಶಿನಿ ಅವಾರ್ಡ್, ರಾಜೀವ್ ಸದ್ಭಾವನಾ ಪ್ರಶಸ್ತಿ, ರಾಜೀವ್ ಖೇಲ್ ರತ್ನ ಪ್ರಶಸ್ತಿ.... ಇಂದಿರಾ ಆವಾಸ್ ಯೋಜನೆ, ನೆಹರೂ ರೋಜ್‌ಗಾರ್ ಯೋಜನೆ, ರಾಜೀವ್ ಗಾಂಧಿ ಗ್ರಾಮೀಣ ಯುವಕರ

ತರಬೇತಿ ಯೋಜನೆ.....ಒಂದೇ-ಎರಡೇ? ಸ್ವಾತಂತ್ರ್ಯ ದೊರೆತಿದ್ದು ಬರೀ ಗಾಂಧೀಜಿ ಮತ್ತು ನೆಹರೂ ಅವರಿಂದಾಗಿಯೇ?

1931, ಮಾರ್ಚ್ 23ರಂದು 23 ವರ್ಷದ ಭಗತ್ ಸಿಂಗ್, ರಾಜಗುರು ಮತ್ತು ಸುಖದೇವ್ ನೇಣಿಗೆ ತಲೆಕೊಟ್ಟರು. ಅವತ್ತು ಅಖಂಡ ಭಾರತವೇ ಕಣ್ಣೀರಿಟ್ಟಿತು. ಇದಾಗಿ ಎರಡು ದಿನಗಳ ಬಳಿಕ, ಕರಾಚಿ ಕಾಂಗ್ರೆಸ್ ಅಧಿವೇಶನದಲ್ಲಿ ಪಾಲ್ಗೊಳ್ಳಲು ಗಾಂಧೀಜಿ ಆಗಮಿಸಿದರು. ಹಾರ ತುರಾಯಿಗೆ ಬದಲಾಗಿ 'ಗಾಂಧೀವಾದ್ ಮುರ್ದಾಬಾದ್. ಗಾಂಧೀ ಗೋಬ್ಯಾಕ್'' ಎಂಬ ಘೋಷಣೆಗಳು ಸ್ವಾಗತ ಕೋರಿದವು. ಏಕೆಂದರೆ ಲಾರ್ಡ್ ಇರ್ವಿಂಗ್ ಜತೆ ನಡೆದ ಮಾತುಕತೆ ವೇಳೆ, ಗಲ್ಲಿಗೇರಿಸಬಾರದು ಎಂದು ಗಾಂಧೀಜಿ ಪಟ್ಟುಹಿಡಿದಿದ್ದರೆ ಭಗತ್ ಸಿಂಗ್ ಪ್ರಾಣ ಉಳಿಸಬಹುದಿತ್ತು! ಆದರೆ ಕೋಟ್ಯಂತರ ದೇಶವಾಸಿಗಳ ಭಾವನೆಗಳಿಗೆ ಗಾಂಧೀಜಿ ಕಿಮ್ಮತ್ತಿನ ಬೆಲೆ ನೀಡದೆ, ಇರ್ವಿಂಗ್ ಜತೆ ಭಗತ್ ಸಿಂಗ್ ವಿಚಾರವನ್ನೇ ಪ್ರಸ್ತಾಪಿಸಿರಲಿಲ್ಲ. ಇಂತಹ ನೆಹರೂ-ಗಾಂಧಿ ಮನೆತನದ ನಿಷ್ಠೆಯನ್ನೇ ಪ್ರಶ್ನಿಸಲು, ಅಸಹ್ಯಪಟ್ಟುಕೊಳ್ಳಲು ಸಾಕಷ್ಟು ಕಾರಣ, ಆಧಾರಗಳಿವೆ. ಸ್ವಾತಂತ್ರ್ಯ ಹೋರಾಟಗಾರರೆಲ್ಲ ತಮ್ಮ ನಾಯಕತ್ವದಡಿಯೇ ಚಳವಳಿ ನಡೆಸಬೇಕು, ತಮ್ಮಂತೆಯೇ ಅಹಿಂಸಾ ಮಾರ್ಗವನ್ನು ಅನುಸರಿಸ ಬೇಕು ಎಂಬಂತೆ ಗಾಂಧೀಜಿ ವರ್ತಿಸುತ್ತಿದ್ದರು. ಗಾಂಧೀಜಿಯ ಇಂತಹ ಸ್ವಾರ್ಥದಿಂದಾಗಿಯೇ, ನೇತಾಜಿ ನೊಂದು ಕಾಂಗ್ರೆಸ್ ತೊರೆದು ಫಾರ್ವರ್ಡ್ ಬ್ಲಾಕ್ ರಚಿಸಿದ್ದು. ಇನ್ನು ನೇತಾಜಿಯವರ ಇಂಡಿಯನ್ ನ್ಯಾಷನಲ್ ಆರ್ಮಿಯ ಯೋಧರನ್ನು ಸ್ವಾತಂತ್ರ್ಯಾನಂತರ ಸೇನೆಗೆ ಸೇರ್ಪಡೆ ಮಾಡಿಕೊಳ್ಳಲು ಒಪ್ಪದ ನೆಹರೂ ಅವರ 'ಗದ್ದುಗೆ ನಿಷ್ಠೆ'ಯ ಬಗ್ಗೆ, ನೇತಾಜಿಗಿಂತ ಮೊದಲು ರಾಜೀವ್ ಗಾಂಧಿಗೆ(1991) ಭಾರತರತ್ನ ಪ್ರಶಸ್ತಿ ನೀಡಲು ಮುಂದಾದ 'ಗಾಂಧೀವಾದಿಗಳ' ಬಗ್ಗೆ ಎಷ್ಟು ಹೇಳಬೇಕು?

ಕನಿಷ್ಠ ನಾವಾದರೂ ಗಾಂಧಿ ಅನ್ನೋ ಹೆಮ್ಮರ ಮತ್ತು ನೆಹರೂ ಅನ್ನೋ ಜಾಲಿ ಗಿಡದ ಕೆಳಗೆ ಉಳಿದ ಸ್ವಾತಂತ್ರ್ಯ ಹೋರಾಟಗಾರರನ್ನು ಹೂತುಹಾಕುವುದು ಬೇಡ.

ಜೈ ಹಿಂದ್!



ಚಾಚಾ ನೆಹರೂ ಎಂಬ ಸ್ತ್ರೀಲೋಲಗೆ ದೇಶದ ಮೇಲೆ ಯಾವ ಪ್ರೀತಿ ಇದ್ದೀತು? ಸುಭಾಷ್‌ಚಂದ್ರ ಬೋಸರ ವಿರುದ್ಧ ಕತ್ತಿ ಎತ್ತುವೆ ಎಂದ ಆತ ಉತ್ತರ ಕುಮಾರನೇ ಸರಿ. ಇಂತಹ ವ್ಯಕ್ತಿಯನ್ನು ಗಾಂಧೀಜಿ ಬೆಂಬಲಿಸಿದ್ದು ಅವಮಾನಕಾರಿ.

ಚಿನ್ಮಯಿ
ಉಡುಪಿ



ಬಹುಶಃ ಭಾರತದಲ್ಲಿ ಮಾತ್ರ ಹೀಗಾಗಲು ಸಾಧ್ಯ!

ಶಾಂತಿ ಮುಕುಂದ್ ಆಸ್ಪತ್ರೆ ರಾಜಧಾನಿ ದಿಲ್ಲಿಯಲ್ಲಿದೆ. 22 ವರ್ಷದ ಕೇರಳದ ನರ್ಸ್ ಸೇವೆ ಸಲ್ಲಿಸುತ್ತಿದ್ದುದು ಇದೇ ಆಸ್ಪತ್ರೆಯಲ್ಲಿ. ಭುರಾ ಎಂಬ ವಾರ್ಡ್ ಬಾಯ್ ಕೂಡ ಅಲ್ಲೇ ಚಾಕರಿ ಮಾಡುತ್ತಿದ್ದ. ಅಂದು 2003, ಸೆಪ್ಟೆಂಬರ್ 7ರ ಮಧ್ಯರಾತ್ರಿ. ನಿದ್ರಿಸುತ್ತಿದ್ದ ನರ್ಸ್‌ಗೆ ಯಾರೋ ಮೈಮುಟ್ಟಿದಂತಾಯಿತು. ಕಣ್ತೆರೆದರೆ ಭುರಾ. ತಪ್ಪಿಸಿಕೊಳ್ಳಲು ಯತ್ನಿಸಿದಾಗ ಕೈಹಾಕಿ ಬಲಗಣ್ಣುಗುಡ್ಡೆಯನ್ನೇ ಹೊರಗೆಳೆದ. ಎಡಗಣ್ಣನ್ನೂ ಗಾಯಗೊಳಿಸಿದ. ಅಷ್ಟಕ್ಕೇ ನಿಲ್ಲಲಿಲ್ಲ. ಶೌಚಾಲಯಕ್ಕೆ ಎಳೆದುಕೊಂಡು ಹೋದ ಭುರಾ, ಚಿಲಕ ಹಾಕಿ ಆಕೆಯ ಮಾನಭಂಗ ಮಾಡಿದ. ಮರುದಿನ ಭಾರಿ ಸುದ್ದಿಯಾಯಿತು. ಭುರಾ ಬಂಧಿತನಾದ. ತಪ್ಪೊಪ್ಪಿಕೊಂಡಿದ್ದೂ ಆಯಿತು. ಕೊನೆಗೆ 2005, ಜನವರಿ 19ರಂದು ದೋಷಾರೋಪಣಾ ಪಟ್ಟಿಯನ್ನೂ ಸಲ್ಲಿಸಲಾಯಿತು. 21 ಜನರು ಸಾಕ್ಷ್ಯ ನುಡಿದರು. ಏಪ್ರಿಲ್ 29ರಂದು ಶಿಕ್ಷೆ ನಿಶ್ಚಯವಾಯಿತು.

2005, ಮೇ 3.

ಶಿಕ್ಷೆಯೇನೆಂಬುದನ್ನು ಹೆಚ್ಚುವರಿ ಸೆಷನ್ಸ್ ನ್ಯಾಯಾಧೀಶ ಜೆ.ಎಂ. ಮಲಿಕ್ ಇನ್ನೇನು ಘೋಷಣೆ ಮಾಡಬೇಕು. ಅಷ್ಟರಲ್ಲಿ ತನ್ನ ವಕೀಲ ಮುಖೇಶ್ ಅಹುಜಾ ಮೂಲಕ ಅರ್ಜಿಯೊಂದನ್ನು ಮುಂದಿಟ್ಟ ಭುರಾ, ಅತ್ಯಾಚಾರಕ್ಕೊಳಗಾಗಿದ್ದ ನರ್ಸ್‌ಳನ್ನು ವಿವಾಹವಾಗುವ ಇಚ್ಛೆ ವ್ಯಕ್ತಪಡಿಸಿದ! ಆಶ್ಚರ್ಯವೆಂದರೆ ನ್ಯಾಯಮೂರ್ತಿ ಮಲಿಕ್ ಶಿಕ್ಷೆಯೇನೆಂಬುದನ್ನು ಘೋಷಿಸುವ ಬದಲು, ನರ್ಸ್ ಮತ್ತು ಆಕೆಯ ಪೋಷಕರನ್ನು ಕರೆಸಿ ಭುರಾನ ವಿವಾಹ ಪ್ರಸ್ತಾಪಕ್ಕೆ ಲಿಖಿತ ಪ್ರತಿಕ್ರಿಯೆ ನೀಡಬೇಕೆಂದು ಸೂಚಿಸಿದರು. ಅಂದರೆ ಭುರಾನನ್ನು ವಿವಾಹವಾಗುತ್ತೀಯಾ ಎಂಬ ಪ್ರಶ್ನೆ!! ಆದರೆ ''ಇದೊಂದು ರೀತಿಯಲ್ಲಿ ಎರಡನೇ ಬಾರಿ ಅತ್ಯಾಚಾರಕ್ಕೊಳಗಾದಂತೆ. ಅವನನ್ನು ವಿವಾಹವಾಗುವುದಕ್ಕಿಂತ ಸಾವನ್ನಪ್ಪುತ್ತೇನೆ'' (It is like being raped for a second time) ಎಂದು ಆಕೆ ಸ್ಪಷ್ಟವಾಗಿ ತಿರಸ್ಕರಿಸಿದಳು. ತೀರ್ಪನ್ನು ಒಂದು ದಿನ ಮುಂದೂಡಿದ್ದ ನ್ಯಾಯಮೂರ್ತಿ ಮಲಿಕ್, ಕೊನೆಗೂ ಮೇ 4ರಂದು ಭುರಾನಿಗೆ ಜೀವಾವಧಿ ಶಿಕ್ಷೆ ವಿಧಿಸಿದ್ದಾರೆ.

ಆದರೆ....ನಮ್ಮ ನ್ಯಾಯಾಲಯಗಳಿಗೇನಾಗಿದೆ?

ಅತ್ಯಾಚಾರದಂತಹ ಕ್ರಿಮಿನಲ್ ಅಪರಾಧವೆಸಗಿದವನ 'ವಿವಾಹ ಕೊಡುಗೆ'ಯ ಹಿಂದಿರುವ ಕೊಳಕು ಉದ್ದೇಶವನ್ನು ಅರ್ಥಮಾಡಿಕೊಳ್ಳುವ ಸಾಮರ್ಥ್ಯವೂ ಇಲ್ಲವೇ? ಶಿಕ್ಷೆಯಿಂದ ತಪ್ಪಿಸಿಕೊಳ್ಳುವ ಅಡ್ಡಮಾರ್ಗ ಇದು ಎಂಬ ಪರಿಜ್ಞಾನವೂ ಇಲ್ಲವೆ? ಒಂದು ಕಣ್ಣನ್ನು ಶಾಶ್ವತವಾಗಿ ಕಳೆದುಕೊಂಡಿರುವ, ಇನ್ನೊಂದು ಕಣ್ಣನ್ನು ಊನ ಮಾಡಿಕೊಂಡಿರುವ, ಮೂರು ಬಾರಿ ಶಸ್ತ್ರಚಿಕಿತ್ಸೆಗೊಳಗಾಗಿರುವ ಆಕೆಯ ಮಾನಸಿಕ ತುಮುಲ, ನೋವು, ವೇದನೆಯನ್ನು ಮರೆತು ಸಮಾಜಘಾತುಕ ವ್ಯಕ್ತಿಯ ವಿವಾಹ ಆಹ್ವಾನವನ್ನು ಒಪ್ಪಿಕೊಳ್ಳುತ್ತೀಯಾ ಎಂದು ಲಿಖಿತ ಉತ್ತರ ಬಯಸಿದ ನ್ಯಾಯಾಲಯದ ವಿಧಾನ ಎಷ್ಟರ ಮಟ್ಟಿಗೆ ಸರಿ? ಏಕೆಂದರೆ ಒಬ್ಬ ವ್ಯಕ್ತಿ ಅತ್ಯಾಚಾರವೆಸಗಿದ್ದಾನೆಂದರೆ ಆತನಲ್ಲಿ ಆಕೆಯ ಭಾವನೆಗಳಿಗೆ ಯಾವುದೇ ಬೆಲೆಯಿಲ್ಲ, ನೈತಿಕತೆಯಂತೂ ಇಲ್ಲವೇ ಇಲ್ಲ, ಸಮಾಜವನ್ನಂತೂ ಲೆಕ್ಕಿಸುವುದಿಲ್ಲ ಎಂದಾಯಿತು. ಅಂದಮೇಲೆ,

ತನ್ನ ಮೇಲೆ ಅತ್ಯಾಚಾರವೆಸಗಿದವನ ಜತೆ ಆಕೆ ಸಂಸಾರ ನಡೆಸಲು ಸಾಧ್ಯವೆ? ತನ್ನ ಭಾವನೆಗಳಿಗೆ ಬೆಲೆ ಕೊಡದವನ, ತನ್ನ ಇಚ್ಛೆಗೆ ವಿರುದ್ಧವಾಗಿ ನಡೆದುಕೊಂಡವನ ಜತೆ ಜೀವನ ನಡೆಸಲು ಆಗುತ್ತದೆಯೇ? ಒಂದು ವೇಳೆ ವಿವಾಹ ಪ್ರಸ್ತಾಪವನ್ನು ಒಪ್ಪಿಕೊಂಡಿದ್ದರೆ ನಿತ್ಯವೂ ಅತ್ಯಾಚಾರಕ್ಕೊಳಗಾಗಬೇಕಿತ್ತಲ್ಲವೇ? ಇಂತಹ ಉತ್ತರ ಬಯಸುವ ಮೂಲಕ ನಮ್ಮ ನ್ಯಾಯಾಲಯಗಳು ಎಂತಹ ಮೇಲ್ಪಂಕ್ತಿ ಹಾಕಿಕೊಡಲು ಯತ್ನಿಸುತ್ತಿವೆ? ಯಾವ ಸಂದೇಶವನ್ನು ನೀಡುತ್ತಿವೆ? ಮೊದಲು ರೇಪ್ ಮಾಡಿ, ನಂತರ ವಿವಾಹವಾಗಬಹುದು ಎಂಬ ತಪ್ಪುಕಲ್ಪನೆ ಸೃಷ್ಟಿಯಾಗಲು ಇದು ದಾರಿ ಮಾಡಿಕೊಡುವುದಿಲ್ಲವೇ? ಅಷ್ಟಕ್ಕೂ ನ್ಯಾಯಾಲಯಗಳೇನು ಮದುವೆ ಛತ್ರ ಗಳೇ? ಅಥವಾ ಒಂದು ವೇಳೆ ಆ ನರ್ಸ್ ಸ್ವಂತ ಮಗಳಾಗಿದ್ದರೆ?

ಇಂತಹ ಒಂದು ಪ್ರಶ್ನೆಯನ್ನು ಅನಿವಾರ್ಯವಾಗಿಯಾದರೂ ಕೇಳಲೇಬೇಕಾಗಿದೆ. ಇಲ್ಲಿ ನಾವೂ ಕೂಡ Holier than thou ಅಂದರೆ 'ಇರುವುದಕ್ಕಿಂತ ಹೆಚ್ಚು ಸಂಭಾವಿತರು' ಎಂದು ಪೋಸು ಕೊಡುವುದು ಬೇಡ. ಹೈಪೋಕ್ರಸಿ ಅಥವಾ ಗೋಮುಖ ವ್ಯಾಘ್ರತನವೂ ಬೇಡ.

ಸೇನಾಧಿಕಾರಿಯೊಬ್ಬರ ಮಗಳಾದ ಗೀತಾ ಚೋಪ್ರಾಗೆ ಆಗ 16 ವರ್ಷ. ಆಕೆಯ ಸಹೋದರ ಸಂಜಯ್ ಚೋಪ್ರಾಗೆ 14 ವರ್ಷ. ಇತ್ತ ಬಿಲ್ಲ ಮತ್ತು ರಂಗ ಎಂಬ ಹೆಸರು ದಿಲ್ಲಿಯಲ್ಲಾಗಲೇ ಕುಖ್ಯಾತಿ ಪಡೆದಿದ್ದವು. ಇಂತಹ ಬಿಲ್ಲ ಮತ್ತು ರಂಗ 1978ರಲ್ಲಿ ಅಪ್ರಾಪ್ತ ವಯಸ್ಸಿನ ಗೀತಾ ಚೋಪ್ರಾಳನ್ನು ಆಕೆಯ ಸೋದರ ಸಂಜಯ್‌ನೆದುರೇ ಲಿಫ್ಟ್‌ನಲ್ಲಿ ಅತ್ಯಾಚಾರವೆಸಗಿ ಕೊಲೆಗೈದರು. ಪ್ರತ್ಯಕ್ಷದರ್ಶಿಯಾಗಿದ್ದ ಸಂಜಯ್ ಕೂಡ ಬಲಿಯಾಗಬೇಕಾಗಿ ಬಂತು. ಆಗ ಮೊರಾರ್ಜಿ ದೇಸಾಯಿ ನೇತೃತ್ವದ ಜನತಾ ಸರಕಾರವಿತ್ತು. ಇಂತಹ ಹೀನ ಕೃತ್ಯ ನಡೆದರೂ ಸರಕಾರ ಸರಿಯಾಗಿ ಸ್ಪಂದಿಸಲಿಲ್ಲ. ಆದರೆ ದಿಲ್ಲಿಗೆ ದಿಲ್ಲಿಯೇ ಬೀದಿಗಿಳಿಯಿತು. ಶಾಲಾ ಕಾಲೇಜುಗಳಿಂದ ಹೊರಬಂದ ವಿದ್ಯಾರ್ಥಿಗಳು ನಿತ್ಯವೂ ಮುಷ್ಕರ ನಡೆಸಲಾರಂಭಿಸಿದರು. ಬೆಚ್ಚಿಬಿದ್ದ ಸರಕಾರ ಕೊನೆಗೂ ಬಿಲ್ಲ ಮತ್ತು ರಂಗನನ್ನು ಬಂಧಿಸಿತು. ಆರೋಪ ದೃಢಪಡಿಸಿ 1982ರಲ್ಲಿ ನೇಣಿಗೂ ಏರಿಸಿತು. ಏಕೆಂದರೆ ಸಾರ್ವಜನಿಕರ ಒತ್ತಡ ಹಾಗಿತ್ತು. ಆದರೆ 2004ರಲ್ಲಿ, ಒಂದೇ ವರ್ಷದಲ್ಲಿ ದಿಲ್ಲಿಯಲ್ಲಿ ಅತ್ಯಾಚಾರ ಸಹಿತ ಒಟ್ಟು 320 ಲೈಂಗಿಕ ದೌರ್ಜನ್ಯಗಳಾಗಿವೆ. ರಾಷ್ಟ್ರಪತಿ ಅಬ್ದುಲ್ ಕಲಾಂ ಅವರ ಅಂಗರಕ್ಷಕರಿಬ್ಬರು ದಿಲ್ಲಿ ಕಾಲೇಜೊಂದರ ವಿದ್ಯಾರ್ಥಿನಿಯನ್ನು ರೇಪ್ ಮಾಡಿದ್ದಾರೆ. ಮೌಲಾನ ಮೆಡಿಕಲ್ ಕಾಲೇಜಿನ ವಿದ್ಯಾರ್ಥಿನಿಯೊಬ್ಬಳು ಹಾಡಹಗಲೇ ಅತ್ಯಾಚಾರಕ್ಕೊಳಗಾಗಿದ್ದಾಳೆ. ಇಷ್ಟಾಗಿಯೂ ವಿದ್ಯಾರ್ಥಿಗಳು ಶಾಲಾ-ಕಾಲೇಜುಗಳಿಂದ ಹೊರಬಂದಿಲ್ಲ. ಪ್ರತಿಭಟನೆ ಮಾಡಿಲ್ಲ. ಮುಷ್ಕರ ಹೂಡಿಲ್ಲ. ಭಯೋತ್ಪಾದಕರ ಮಾನವ ಹಕ್ಕುಗಳ ಬಗ್ಗೆ ಬೊಬ್ಬೆ ಹಾಕುವವರೂ ಬಾಯ್ಬಿಟ್ಟಿಲ್ಲ. ಸಾರ್ವಜನಿಕರೂ ಸುಮ್ಮನಾಗಿದ್ದಾರೆ. ಸಂವೇದನಾಶೀಲತೆಯನ್ನೇ ಕಳೆದುಕೊಂಡವರಂತೆ ನಿರುಮ್ಮಳವಾಗಿದ್ದಾರೆ. ಬಹುಶಃ ಇಂತಹ ಸಂವೇದನಾಶೀಲತೆಯ ಕೊರತೆ ನಮ್ಮ ನ್ಯಾಯಾಲಯಗಳ ಮನೋಭಾವನೆಯಲ್ಲೂ

ವ್ಯಕ್ತವಾಗುತ್ತಿದೆಯೇನೋ!?

ಇಲ್ಲಿ ಯಾರನ್ನು ದೂರಬೇಕು?

ನೀವಿದನ್ನು ಅರ್ಥಕಳೆದುಕೊಂಡಿರುವ ಗೊಡ್ಡು ತತ್ತ್ವ ಎನ್ನಬಹುದು ಅಥವಾ ಓಬೀರಾಯನ ಕಾಲದ ಮನಃಸ್ಥಿತಿ ಎಂದು ಗೇಲಿ ಮಾಡಬಹುದು. ಹಾಸ್ಯದ ವಸ್ತುವಾಗಿಸಿಕೊಳ್ಳಬಹುದು. ಆದರೆ ನಾವೆಂದೂ ಹೆಣ್ಣನ್ನು ಒಂದು ವಸ್ತು ಅಥವಾ object ಎಂಬಂತೆ ಕಂಡವರಲ್ಲ. ಆತ್ಮ ಅಥವಾ soul ಎಂದೇ ಗೌರವಿಸುತ್ತಾ ಬಂದಿದ್ದೇವೆ. ಆದರೆ ಆ ಮಾತನ್ನು ಈಗ ಹೇಳಲು ಕಷ್ಟವಾಗುತ್ತಿದೆ. ಏಕೆಂದರೆ 'ಶೀಲ ಎಂಬುದು ಸಚ್ಚಾರಿತ್ರ್ಯದ ಲಕ್ಷಣವಲ್ಲ, ಆದರೆ ಅವಕಾಶಗಳ ಕೊರತೆ' (Virginity is not dignity, it is lack of opportunity) ಎಂಬ ಮನೋಭಾವನೆ ನಮಗೂ ಅಂಟಿಕೊಳ್ಳುತ್ತಿದೆ. ಸಾಲದೆಂಬಂತೆ Sexual assertiveness ಎಂಬುದು ದಾರಿ ತಪ್ಪಿ, ಸ್ವಾತಂತ್ರ್ಯ ಮತ್ತು ಸ್ವೇಚ್ಛಾಚಾರದ ನಡುವಿನ ತೆಳುಗೆರೆಯನ್ನೇ ಅಳಿಸಿಹಾಕುತ್ತಿದೆ. ಇಲ್ಲಿ ಪೋಷಕರ ಕೊಡುಗೆಯೂ ಸಾಕಷ್ಟಿದೆ. ಏಕೆಂದರೆ ಮಕ್ಕಳನ್ನು ಫ್ರೆಂಡ್ಸ್ ಥರಾ ಟ್ರೀಟ್ ಮಾಡಬೇಕೆಂಬ ಭರದಲ್ಲಿ ಅಥವಾ ತಾವು ಅತ್ಯಂತ ಲಿಬರಲ್ ಎಂದು ತೋರಿಸಿಕೊಳ್ಳುವ ಭ್ರಮೆಯಲ್ಲಿ ಬೇಲಿ ಹಾಕುವುದನ್ನೇ ಮರೆಯುತ್ತಿದ್ದಾರೆ. ಅಂದರೆ ಸ್ವಾತಂತ್ರ್ಯವೆಂಬುದು ಜವಾಬ್ದಾರಿಯ ಜತೆ ಬರುತ್ತದೆ ಎಂಬುದನ್ನು ಮಕ್ಕಳ ಮನದಲ್ಲಿ ಬಿತ್ತಲು, ಕಲಿಸಲು ಯತ್ನಿಸುತ್ತಿಲ್ಲ. ಹೀಗೆ ಜವಾಬ್ದಾರಿಯಿಲ್ಲದ ಮುಕ್ತ ಸ್ವಾತಂತ್ರ್ಯ ಸ್ವೇಚ್ಛಾಚಾರಕ್ಕೆ ಅವಕಾಶ ಕಲ್ಪಿಸುತ್ತಿದೆ. ಅದಕ್ಕೆ ತಕ್ಕಂತೆ, ಬೊಬ್ಬೆಗೆ ಹೆಸರಾದ ನಮ್ಮ ಮಹಿಳಾ ಸಂಘಟನೆಗಳ ಮನೋಭಾವನೆಯನ್ನೂ ಪ್ರಶ್ನಿಸಬೇಕಾಗಿ ಬಂದಿದೆ. 'ಅಪ್ರಾಪ್ತ ಬಾಲಕಿಯ ಮೇಲೆ ಅತ್ಯಾಚಾರ' ಎಂಬ ಸುದ್ದಿ ಕೇಳಿದ ಕೂಡಲೇ ಅವು ಸಿಡಿದೇಳುತ್ತವೆ. ಆದರೆ ವಿದ್ಯೆ ಮತ್ತು ಶಿಸ್ತು ಕಲಿಸುವ ಬದಲು ಕಡ್ಡಾಯವಾಗಿ 'ಮಂಡಿ ಮೇಲೇ' ಇರುವ ಸ್ಕರ್ಟ್ ಧರಿಸಬೇಕೆಂಬ ನಮ್ಮ ಕಾನ್ವೆಂಟ್ ಸಂಸ್ಕೃತಿ ಎಂತಹವನ ಮನಸ್ಸನ್ನೂ ಕಲುಷಿತಗೊಳಿಸುತ್ತದೆ ಎಂಬ ಸಾಮಾನ್ಯ ಸತ್ಯವನ್ನು ಗುರುತಿಸಿ ಮೈಮಾಟ ಪ್ರದರ್ಶಿಸುವ ಡ್ರೆಸ್‌ಕೋಡ್ ಬೇಡವೆಂದು ಪ್ರತಿಭಟಿಸುವುದಿಲ್ಲ! ಇಂತಹ ವಾತಾವರಣದಲ್ಲಿ ಕಲಿತ ಮಕ್ಕಳು ಡಾಕ್ಟರ್, ಎಂಜನಿಯರ್ ಆಗುತ್ತೇನೆ ಎನ್ನುವುದಕ್ಕಿಂತ ಮಾಡೆಲ್ ಆಗಬೇಕೆಂದು ಬಯಸುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲ. 'ನೋಡೋಕೆ ಸಕ್ಕತ್ತಾಗಿದ್ದೀಯಾ. ಒಳ್ಳೆಯ ಫಿಗರ್(ಮೈಕಟ್ಟು) ಮೆಯಿಂಟೈನ್ ಮಾಡಿದ್ದೀಯಾ' ಎಂದು ಯಾರಾದರೂ ಹೇಳಿದ ಕೂಡಲೇ ಉಬ್ಬಿ ಮುಂದಿನ ಸೂಪರ್ ಮಾಡೆಲ್ ಮಿಷೆಲ್ ಫಿಪರ್, ಗಿಸೆಲಿ ಬುಂಡ್‌ಚೆನ್, ಕೇಟ್ ಮೋಸ್ ಅಥವಾ ಆ್ಯಡ್ರಿಯಾನಾ ತಾನೇ ಎಂಬ ಭಾವನೆ ಮನದಲ್ಲಿ ಮೂಡುವುದರಲ್ಲೂ ಅನುಮಾನವಿಲ್ಲ. ಇಂತಹ ಹುಚ್ಚು ಕಲ್ಪನೆಗೆ ದಾರಿ ಮಾಡುತ್ತಿರುವ ಕಾನ್ವೆಂಟ್ ಸ್ಕರ್ಟ್ ಮತ್ತು ಮಾಡೆಲಿಂಗ್ ಸಂಸ್ಕೃತಿಯ ಬಗ್ಗೆ ಯಾವ ಮಹಿಳಾ ಸಂಘಟನೆಗಳೂ ಧ್ವನಿಯೆತ್ತುವುದಿಲ್ಲ. ಆದರೆ ಎರಡು ವರ್ಷಗಳ ಹಿಂದೆ, ಈಗಿನ ನಮ್ಮ ಯುವ ಜನಾಂಗ ಧರಿಸುತ್ತಿರುವ ಮೈಗಂಟಿಕೊಳ್ಳುವ Skimpy ಡ್ರೆಸ್ ಬಗ್ಗೆ ದಿಲ್ಲಿ ಪೊಲೀಸ್ ಕಮೀಷನರ್ ದೂರಿದಾಗ, ಮೈಮೇಲೆ ಭೂತಬಂದವರಂತೆ ವರ್ತಿಸಿದ್ದ ಮಹಿಳಾ ಸಂಘಟನೆಗಳು, ಆತನನ್ನು ಮನುವಿನ ನೂತನ ಅವತಾರವೆಂಬಂತೆ ಟೀಕಿಸಿದ್ದವು, ತೀವ್ರ ವಾಗ್ದಾಳಿ, ದೂಷಣೆ ಮಾಡಿದ್ದವು. ಇದೆಲ್ಲ ಯಾವ ಪುರುಷಾರ್ಥಕ್ಕೆ?

Skimpy ಡ್ರೆಸ್ ಹಾಕಿಕೊಂಡು ಬೀದಿಯಲ್ಲಿ ಅಡ್ಡಾಡುವುದೇ ಮಹಿಳಾ ಸಶಕ್ತೀಕರಣವೇ? ತಮಗಿಷ್ಟ ಬಂದ ಉಡುಪನ್ನು ಧರಿಸುವ ಎಲ್ಲ ಹಕ್ಕು, ಸ್ವಾತಂತ್ರ್ಯ ಖಂಡಿತಾ ಇದೆ. ಆದರೆ ಈಗಿನ ಯುವತಿಯರು ಧರಿಸುತ್ತಿರುವ ಉಡುಪುಗಳು ಎಲ್ಲೋ ಒಂದು ಕಡೆ ತಪ್ಪು ಸಂಕೇತ ನೀಡುತ್ತಿವೆ ಎಂಬುದನ್ನು ಒಪ್ಪಿಕೊಳ್ಳಲು ಅಳುಕೇಕೆ? ಅಷ್ಟಕ್ಕೂ Sexual assertiveness ಅಥವಾ women empowerment ಅಂದರೆ most revealing ಮತ್ತು skimpy dress ಹಾಕಿಕೊಳ್ಳುವುದಾಗಲಿ ಅಥವಾ ಸ್ವೇಚ್ಛಾಚಾರದಲ್ಲಿ ಗಂಡಸರನ್ನು ಸರಿಗಟ್ಟುವುದಾಗಲಿ ಅಲ್ಲ. ಇಷ್ಟು ಸಾಲದೆಂಬಂತೆ, casual sex ಅಂದರೆ, 'ಅವನನ್ನು ನೋಡಿದೆ. ಸ್ಮಾರ್ಟ್ ಇದ್ದಾನೆ. ಚೆನ್ನಾಗಿ ಮಾತನ್ನೂ ಆಡುತ್ತಾನೆ. ಖುಷಿಯೆನಿಸಿತು. ಕೂಡಿಕೊಂಡೆವು' ಎಂಬ ಹೊಸ ಚಾಳಿ ಮಹಾನಗರಗಳಲ್ಲಿ ಹೆಚ್ಚು ಹೆಚ್ಚಾಗಿ ಕಂಡುಬರುತ್ತಿದೆ. ಇದನ್ನು ಏನೆಂದು ಕರೆಯಬೇಕು? ಮಹಿಳಾ ಸಶಕ್ತೀಕರಣ ಅನ್ನಬೇಕೊ ಅಥವಾ sexual assertiveness ಎಂದು ಕರೆಯಬೇಕೋ? ಮಹಿಳೆ ಅನ್ನೋಳು ಅಳುಕು ಬಿಟ್ಟು ಆಟೊ, ಬಸ್ ಡ್ರೈವರ್‌ಗಳಾಗಿ, ವಿಮಾನ ಚಾಲಕಿಯಾಗಿ ಎಲ್ಲ ಕ್ಷೇತ್ರಗಳಲ್ಲೂ ಪುರುಷರಿಗೆ ಸಮಾನವಾಗಿ ನಿಂತುಕೊಳ್ಳುವುದೇ ನಿಜವಾದ ಸಶಕ್ತೀಕರಣ ಎಂಬುದು ನಮಗೇಕೆ ಅರ್ಥವಾಗುತ್ತಿಲ್ಲ?

ಇವಿಷ್ಟೇ ಅಲ್ಲ, ಬೆಂಗಳೂರಿನಲ್ಲಿ ಕುಳಿತು ಅಮೆರಿಕ, ಬ್ರಿಟನ್‌ನ ಚಾಕರಿ ಮಾಡುವ ಬಿಪಿಒ(BPO)ಗಳ ಆಗಮನವಾಗಿದೆ. ಅಪ್ಪ ಕೊಡುತ್ತಿದ್ದ ತಿಂಗಳ 500 ರೂ. ಪಾಕೆಟ್ ಮನಿಗೆ ಹೋಲಿಸಿದರೆ 8-10-12 ಸಾವಿರ ಸಂಬಳ ದೊರೆಯುವ ಈ ರಾತ್ರಿ ಕೆಲಸ ಪ್ರಾರಂಭ ದಲ್ಲಿ ಆಕರ್ಷಕವಾಗಿ ಕಾಣುತ್ತದೆ. ಆದರೆ ಕಾರ್ಯದೊತ್ತಡ 6 ತಿಂಗಳಲ್ಲಿ ನಿಮ್ಮೆಲ್ಲ ಆಸಕ್ತಿ, ಹುಮ್ಮಸ್ಸುಗಳನ್ನು ಹಿಂಡಿ ಹಿಪ್ಪೆಯಾಗಿಸುತ್ತದೆ. ಹಾಗಾಗಿ ಕೆಲಸಕ್ಕೆ ತಿಲಾಂಜಲಿ ಹಾಕುವವರ ಸಂಖ್ಯೆ ಹೆಚ್ಚು. ಇದನ್ನು ಗಮನದಲ್ಲಿಟ್ಟುಕೊಂಡೇ ಕಂಪನಿಗಳು ವೀಕೆಂಡ್ ಪಾರ್ಟಿ ಕಲ್ಚರ್‌ಗಳನ್ನು ಹುಟ್ಟುಹಾಕಿವೆ. ವಾರದ ಕೊನೆಯ ದಿನ, ತಾವೇ ಕಾಸು ಖರ್ಚುಮಾಡಿಕೊಂಡು ಯಾವುದಾದರೂ ರಿಸಾರ್ಟ್‌ಗೋ ಅಥವಾ ರಿಕ್ರಿಯೇಶನಲ್ ಕ್ಲಬ್‌ಗೋ ಕರೆದುಕೊಂಡು ಹೋಗುತ್ತವೆ. ಎಲ್ಲದಕ್ಕೂ ಮುಕ್ತ ಅವಕಾಶ ಕಲ್ಪಿಸುತ್ತವೆ. ಇಂತಹ ಪ್ರವೃತ್ತಿಗಳೇ ಇತ್ತೀಚಿನ ದಿನಗಳಲ್ಲಿ ಅತಿರೇಕಕ್ಕೇರಿರುತ್ತಿರುವ ಕಾನೂನು ಬಾಹಿರ ಗರ್ಭಪಾತಕ್ಕೆ ಕಾರಣ ಎಂಬುದು ಅರ್ಥವಾಗುತ್ತಿಲ್ಲವೆ? ಪಾಶ್ಚಿಮಾತ್ಯ ರಾಷ್ಟ್ರಗಳ ಎಲ್ಲ ಕೊಳಕು ಮತ್ತು ಹುಳುಕುಗಳಿಗೆ ನಾವು ಮಾರುಹೋಗುತ್ತಿದ್ದೇವೆ ಎಂಬ ಮಾತಿನಲ್ಲಿ ತಪ್ಪಿದೆಯೇ?

ನೀವೇ ಹೇಳಿ, ಪರಿಸ್ಥಿತಿ ಹೀಗೆಯೇ ಮುಂದುವರಿದರೆ ನಾವು ತಲುಪುವುದೆಲ್ಲಿಗೆ? ಇಂತಹ ಪರಿಸ್ಥಿತಿಗೆ ನಾವು ಒಗ್ಗಿಕೊಂಡ ನಂತರ ಚಾರಿತ್ರ್ಯ, ಗುಣ, ನಡತೆಗಳು ಗೊಡ್ಡು ಎಂಬ ತಿರಸ್ಕಾರ ಭಾವನೆ ಬರದೇ ಇರುತ್ತದೆಯೇ? ಅತ್ಯಾಚಾರದಂತಹ ಹೀನ ಕೃತ್ಯವನ್ನು ಸಮಾಜ ಗಂಭೀರವಾಗಿ ತೆಗೆದುಕೊಳ್ಳದೇ ಇರುವುದಕ್ಕೆ ಇಂತಹ ಮನೋಭಾವನೆಯೇ ಕಾರಣವಲ್ಲವೆ?

ನೀವೇ ಯೋಚಿಸಿ.

ಮೇ 28, 2005ರಂದು ಪ್ರಕಟವಾದ 'ಒಂದು ವೇಳೆ ಆಕೆ ಮಗಳೇ ಆಗಿದ್ದರೆ' ಲೇಖನ ನಮ್ಮನ್ನು ಚಿಂತನೆಗೆ ಹಚ್ಚಿತು. ಜಡ್ಡುಗಟ್ಟಿದ ನಮ್ಮ ನ್ಯಾಯ ವ್ಯವಸ್ಥೆ ನೂರು ಜನ ತಪ್ಪಿತಸ್ಥರಲ್ಲಿ ಒಬ್ಬರನ್ನು ಮಾತ್ರ ಶಿಕ್ಷೆಗೊಳಪಡಿಸುತ್ತದೆ. ಅದೂ ಹಲವಾರು ವರ್ಷಗಳ ನಂತರ. ಇನ್ನುಳಿದ 99 ಜನ ನ್ಯಾಯಾಲಯದ ಕಣ್ಣಿಗೆ ಮಣ್ಣೆರಚಿ ಹಾಯಾಗಿ ಜೀವಿಸುತ್ತಾರೆ. ತಪ್ಪಿತಸ್ಥರಿಗೆ ಶಿಕ್ಷೆಯಾಗಲಿ ಬಿಡಲಿ ಶೋಷಿತರ ಜೀವನ ನರಕ.

ಸುರೇಖಾ ಪಟ್ರಮೆ
ಬೆಂಗಳೂರು



# 30

# ನಮಗೆ 'ಸಾಕೇತ್'ಗಿಂತ ಸುದರ್ಶನ್ ಮುಖ್ಯವಾಗುವುದೇಕೆ?

''ಜರ್ಮನಿಗೆ ಹೋದರು. ಹಿಟ್ಲರ್‌ನ ಸಹಾಯ ಕೇಳಿದರು. ಬ್ರಿಟನ್‌ನ ಕಣ್ತಪ್ಪಿಸುವ ಸಲುವಾಗಿ ಜರ್ಮನಿಯ ಸಬ್‌ಮರೀನ್‌ನಲ್ಲಿ ಜಪಾನ್‌ಗೆ ತೆರಳಿ, ಆ ರಾಷ್ಟ್ರದ ಸಹಕಾರ ಯಾಚಿಸಿದರು. ಆದರೆ, ನಾಝಿಗಳು ಮತ್ತು ಜಪಾನಿಯರ ಜತೆ ಕೈಜೋಡಿಸಿದ ಸುಭಾಷ್ ಚಂದ್ರ ಬೋಸ್ ಅವರನ್ನೇಕೆ ಈ ಭಾರತೀಯರು ಆರಾಧಿಸುತ್ತಾರೆ? ಹೀರೊ ಮಾಡಿರುವುದೇಕೆ? ''.

ಈ 'ಅರೆಬೆಂದ' ಹೇಳಿಕೆ ನೀಡಿದ್ದು ಮತ್ತಾರೂ ಅಲ್ಲ. ಜನವರಿ 29ರಂದು 'ದಿ ಟೆಲಿಗ್ರಾಫ್' ಪತ್ರಿಕೆ ಕೋಲ್ಕತಾದಲ್ಲಿ ಆಯೋಜಿಸಿದ್ದ ವಿಚಾರ ಸಂಕಿರಣದಲ್ಲಿ ಭಾಗವಹಿಸಲು ಬಂದಿದ್ದ ಖ್ಯಾತ ಸಾಹಿತಿ ಮತ್ತು ನೊಬೆಲ್ ಪ್ರಶಸ್ತಿ ವಿಜೇತ ಗುಂಥರ್ ಗ್ರಾಸ್!

ಇತಿಹಾಸದ ಬಗ್ಗೆ ಅರಿವಿಲ್ಲದೆ, ಕೇವಲ ಸಾಹಿತಿ ಎಂಬ ಒಂದೇ ಕಾರಣಕ್ಕೆ ಎಲ್ಲ ವಿಚಾರಗಳ ಬಗ್ಗೆಯೂ ಮಾತನಾಡಲು ಮುಂದಾದರೆ ಆಗುವ ಅಪಾಯ, ಅನಾಹುತ ಇದೇ. ಇಂಥ 'ಸಾಹಿತಿ'ಗಳು ಕನ್ನಡದಲ್ಲಿ ತುಂಬಿತುಳುಕುತ್ತಿದ್ದಾರೆ. ಇನ್ನು ಚೀನಿ ಮಿಲಿಟರಿ ಕೃತಿಕಾರ Sun Tzuನ 'ಆರ್ಟ್ ಆಫ್ ವಾರ್' ಅಥವಾ 'ಫಿಫ್ತ್ ಕಾಲಂ' ಓದಿಕೊಂಡು, ತಾವು ತಿಳಿದಿರುವುದೇ ದೊಡ್ಡ 'ಸಿದ್ಧಾಂತ' ಎಂದುಕೊಂಡು ಎಕೆ-47 ಕೈಗೆತ್ತಿಕೊಂಡಿರುವ ನಕ್ಸಲೀಯರು, ಅವರನ್ನು ವೈಭವೀಕರಿಸುತ್ತಿರುವ ಬರಹಗಾರರು, ಯೂನಿವರ್ಸಿಟಿಗಳೆಂಬ ವಿದ್ಯಾಕೇಂದ್ರಗಳಲ್ಲಿ ತೂಕಡಿಸಿ ಪಗಾರ ಎಣಿಸುವ 'ಕಮ್ಯುನಿಸ್ಟ್' ಪ್ರೊಫೆಸರ್‌ಗಳಿಗೆ ಇದೆಲ್ಲ ಅರ್ಥವಾಗೊಲ್ಲ ಬಿಡಿ. ಇಂತಹವರಿಂದ ಪ್ರಭಾವಿತರಾಗಿರುವವರು, ಗುಂಥರ್ ಗ್ರಾಸ್ ಹೇಳಿಕೆ ವಿರುದ್ಧ ಪ್ರತಿಭಟಿಸಲು ಸಾಧ್ಯವೆ? ಹಾಗಾಗಿಯೇ, 'ಪ್ರೇಮ್' ಎಂಬ ನಕ್ಸಲ್ 'ಹುತಾತ್ಮ'ನನ್ನು ಅಂತ್ಯಸಂಸ್ಕಾರ ಮಾಡುವುದಕ್ಕೆ, ಮೆರವಣಿಗೆ ಮಾಡುವುದಕ್ಕೆ ಅವಕಾಶ ನೀಡದ ಪೊಲೀಸರು ಮತ್ತು ರಾಜ್ಯ ಸರಕಾರದ ವಿರುದ್ಧ ರಾಜ್ಯದ ಕೆಲ ಕಾಲೇಜ್ ವಿದ್ಯಾರ್ಥಿಗಳು ಕಳೆದ ಬುಧವಾರ ಪ್ರತಿಭಟನೆ ಮಾಡಿದ್ದರಲ್ಲಿ ಯಾವ ಆಶ್ಚರ್ಯವೂ ಇಲ್ಲ.

ಆದರೆ ಈ ದೇಶದ ವಿದ್ಯಾರ್ಥಿಗಳನ್ನು ದಾರಿ ತಪ್ಪಿಸುತ್ತಿರುವುದು ಸಮಾಜಘಾತುಕ ಕಾರ್ಯವಲ್ಲವೆ?

ಹರೇನ್ ಪಾಂಡ್ಯಾ ಗುಜರಾತ್‌ನ ಗೃಹ ಸಚಿವ. 2003, ಮಾರ್ಚ್ 26ರಂದು ಬಿರುಬಿಸಿಲಿನಲ್ಲಿ ಗುಂಡಿಟ್ಟು ಕೊಲ್ಲಲಾಯಿತು. ಸುಳಿವು ಹುಡುಕುತ್ತಾ ಬಂದ ಗುಜರಾತ್ ಪೊಲೀಸರು, ತಲುಪಿದ್ದು ಹೈದರಾಬಾದನ್ನು. ಐಎಸ್ಐ ಜತೆ ಸಂಪರ್ಕ ಹೊಂದಿದ್ದ ಮೌಲಾನಾ ನಾಸಿರುದ್ದೀನ್ ಎಂಬ ಮುಲ್ಲಾನನ್ನು ಬಂಧಿಸಿದ್ದೂ ಆಯಿತು. ಆದರೆ ಕೋಳ ತೊಡಿಸಿ ಕರೆದೊಯ್ಯುವಷ್ಟರಲ್ಲಿ ಆಲ್ ಇಂಡಿಯಾ ಮಜ್ಲಿಸ್ ಇತ್ತೆಹಾದುಲ್ ಮುಸ್ಲಿಮೀನ್ (AIMIM)ನ ಶಾಸಕ ಅಕ್ಬರುದ್ದೀನ್ ಓವೈಸಿ ಮತ್ತು ಸಂಸದ ಸುಲ್ತಾನ್ ಸಲಾವುದ್ದೀನ್ ಓವೈಸಿ ನೇತೃತ್ವದ ಗೂಂಡಾಗಳು ಗುಜರಾತ್ ಪೊಲೀಸರ ಮೇಲೆಯೇ ದಾಳಿ ಮಾಡಿದರು. ಗೋಲಿಬಾರ್ ಮಾಡಬೇಕಾದ

ಅನಿವಾರ್ಯತೆಯುಂಟಾಯಿತು. ಇಷ್ಟೆಲ್ಲಾ ಅಡಚಣೆಗಳ ಹೊರತಾಗಿಯೂ ಮೌಲಾನಾ ನಾಸಿರುದ್ದೀನ್‌ನನ್ನು ಬಂಧಿಸಿ ಕರೆದೊಯ್ಯಲಾಯಿತು. ಆಶ್ಚರ್ಯವೆಂದರೆ, ತಮ್ಮ ನಾಯಕ ರಾಮಕೃಷ್ಣ ಅವರ ನೇತೃತ್ವದಲ್ಲಿ ಭಾರಿ ಪ್ರತಿಭಟನೆ ಮಾಡಿದ ಆಂಧ್ರದ ನಕ್ಸಲೀಯರು, ಮೌಲಾನಾ ನಾಸಿರುದ್ದೀನ್‌ನನ್ನು ಬೇಷರತ್ ಬಿಡುಗಡೆ ಮಾಡಬೇಕೆಂದು ಒತ್ತಾಯಿಸಿದರು. ಪತ್ರಿಕಾ ಹೇಳಿಕೆಯೊಂದನ್ನು ಹೊರಡಿಸಿದ ರಾಮಕೃಷ್ಣ ಅವರು, 'ಗುಜರಾತ್ ಪೊಲೀಸರ ವಿರುದ್ಧವೇ ಕ್ರಿಮಿನಲ್ ಕೇಸು ದಾಖಲಿಸಬೇಕು ಮತ್ತು ಮುಸಲ್ಮಾನರ ಮನೆ ಆವರಣ ಪ್ರವೇಶಿಸದಂತೆ ಪೊಲೀಸರ ಮೇಲೆ ನಿರ್ಬಂಧ ಹೇರಬೇಕೆಂದು' ಸರಕಾರವನ್ನು ಒತ್ತಾಯಿಸಿದರು!

ನಕ್ಸಲೀಯರಿಗೂ, ಮೌಲಾನಾ ನಾಸಿರುದ್ದೀನ್‌ಗೂ ಏನು ಸಂಬಂಧ ಎಂದು ಆಶ್ಚರ್ಯ ಪಡಬೇಡಿ. ಈ ಮಾವೋವಾದಿಗಳು, ಲೆನಿನ್‌ವಾದಿಗಳು, ಸ್ಟಾಲಿನ್‌ವಾದಿಗಳು ಅಥವಾ ನಕ್ಸಲೀಯರು ಪಾಕಿಸ್ತಾನದ ಐಎಸ್‌ಐ ಹಾಗೂ ಗೋಸುಂಬೆ ಚೀನಾದ ಜತೆ ಕೈಜೋಡಿಸುವ ಮೂಲಕ ದೇಶವನ್ನು ಆಂತರಿಕವಾಗಿ ನಾಶಪಡಿಸಲು ಯತ್ನಿಸುತ್ತಿದ್ದಾರೆ ಎಂಬ ಗುಪ್ತಚರ ವರದಿಗಳು ಈಗಾಗಲೇ ಸರಕಾರದ ಬಳಿ ಇವೆ. ಹಾಗಾಗಿಯೇ 'ಮಾವೋವಾದಿಗಳಿಂದ ದೇಶಕ್ಕೇ ಕುತ್ತು ಎದುರಾಗಿದೆ' ಎಂದು ಗೃಹ ಸಚಿವ ಪ್ರಣವ್ ಮುಖರ್ಜಿ ಬೆಂಗಳೂರಿನಲ್ಲಿ ಹೇಳಿಕೆ ನೀಡಿದ್ದಾರೆ.

ಇದು ತಮಾಷೆಯ ವಿಷಯವಲ್ಲ.

2004, ಮೇ 9ರಂದು ಆಂಧ್ರಪ್ರದೇಶದಲ್ಲಿ ಅಧಿಕಾರಕ್ಕೆ ಬಂದ ಮುಖ್ಯಮಂತ್ರಿ ವೈ.ಎಸ್. ರಾಜಶೇಖರ ರೆಡ್ಡಿ, ನಕ್ಸಲೀಯರ ವಿರುದ್ಧದ ಎಲ್ಲ ಕಾರ್ಯಾಚರಣೆಗಳನ್ನೂ ಸ್ಥಗಿತಗೊಳಿಸಿ, ಏಕಪಕ್ಷೀಯ ಕದನ ವಿರಾಮ ಘೋಷಿಸಿದರು. ಏಕೆಂದರೆ ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾವೋವಾದಿ) ಮತ್ತು ಕಮ್ಯುನಿಸ್ಟ್ ಪಾರ್ಟಿ ಆಫ್ ಇಂಡಿಯಾ(ಮಾರ್ಕ್ಸ್‌ವಾದಿ-ಲೆನಿನ್‌ವಾದಿ)ಗಳು ಚುನಾವಣೆ ವೇಳೆ ನೀಡಿದ್ದ ಬೆಂಬಲದ ಋಣ ತೀರಿಸಬೇಕಾದ ಅನಿವಾರ್ಯತೆ ಕಾಂಗ್ರೆಸ್‌ಗಿತ್ತು. ಆದರೆ ನಕ್ಸಲೀಯರು ಸಂಘಟಿತರಾಗಿರುವುದು ಈ ಎರಡೂ ಸಂಘಟನೆಗಳಡಿಯೇ! ಈ ಮಧ್ಯೆ ಕಳೆದ ಅಕ್ಟೋಬರ್‌ನಲ್ಲಿ ನಡೆದ ಸಂಧಾನಕ್ಕೆ ಮುನ್ನ, ''ಮಾತುಕತೆಗೆ ಮುಂದಾಗುವ ಮೂಲಕ ನಾವು ಕದನ ವಿರಾಮ ಘೋಷಿಸುತ್ತಿಲ್ಲ. ಮಾತುಕತೆಗಳು ನಮ್ಮ ಕಾರ್ಯ ತಂತ್ರದ ಒಂದು ಭಾಗವಷ್ಟೇ. ನಕ್ಸಲಿಸಂ ಎಂಬುದು ಪರಿಹಾರವೇ ಹೊರತು, ಸಮಸ್ಯೆಯಲ್ಲ'' ಎಂದು ಹೇಳಿಕೆ ಕೊಟ್ಟರು!

ಇದರರ್ಥವೇನು?

ಕಾನೂನನ್ನು ಕೈಗೆತ್ತಿಕೊಳ್ಳುವುದು, ಪೊಲೀಸರು ಮತ್ತು ಅಮಾಯಕರನ್ನು ಗುಂಡಿಟ್ಟು

ಕೊಲ್ಲುವುದು, ದೌರ್ಜನ್ಯದ ವಿರುದ್ಧ ಧ್ವನಿಯೆತ್ತುವ ನೆಪದಲ್ಲಿ ದೇಶಕ್ಕೇ ಬಾಂಬಿಡುವುದು, ಪರರ ಆಸ್ತಿಯನ್ನು ಕಸಿದುಕೊಳ್ಳುವುದು, ಪ್ರಜಾಪ್ರಭುತ್ವದ ತಿಥಿ ಮಾಡುವುದು 'ಪರಿಹಾರ'ವೇ? ನಕ್ಸಲಿಸಂ ಅಂದರೆ ಇದೇ ಅಲ್ಲವೆ? ಉದಾಹರಣೆ ಬೇಕೆ? ಇಂದು ನೇಪಾಳದ 75 ಜಿಲ್ಲೆಗಳನ್ನು ತಮ್ಮ ನಿಯಂತ್ರಣಕ್ಕೆ ತೆಗೆದುಕೊಂಡಿರುವ ಮಾವೋವಾದಿಗಳು, ಬದಲಿ ಆಡಳಿತ ನಡೆಸುತ್ತಿದ್ದಾರೆ. ಸ್ವತಃ ತೆರಿಗೆ ವಸೂಲಿ ಮಾಡುತ್ತಿದ್ದಾರೆ. ಕೊಡದಿದ್ದರೆ ತಮ್ಮದೇ ಆದ "Kangaroo Court"ನಲ್ಲಿ ವಿಚಾರಣೆ ನಡೆಸಿ ತಲೆ ಕಡಿಯುತ್ತಾರೆ. ಶಾಲಾ-ಕಾಲೇಜುಗಳಿಂದ ವಿದ್ಯಾರ್ಥಿಗಳನ್ನು ಅಪಹರಿಸಿ, ಬಲವಂತವಾಗಿ ಶಸ್ತ್ರಾಸ್ತ್ರ ತರಬೇತಿ ನೀಡುವ ಮೂಲಕ ನೇಪಾಳಿ ಸೇನೆಯ ವಿರುದ್ಧ ಎತ್ತಿಕಟ್ಟುತ್ತಿದ್ದಾರೆ. ಅಪಾಯಕಾರಿ ಸಂಗತಿಯೆಂದರೆ, 6-7 ವರ್ಷದ ಮುಗ್ಧಮಕ್ಕಳನ್ನು ನಕ್ಸಲ್ ಪಡೆಗೆ ಸೇರಿಸಿಕೊಳ್ಳುತ್ತಿದ್ದಾರೆ. ಚಿಂತೆಗೀಡಾಗಿರುವ ಯುನೆಸ್ಕೊ ಮತ್ತು ವಿಶ್ವಸಂಸ್ಥೆಯ ಮಾನವ ಹಕ್ಕು ಆಯೋಗ ಮಾವೋವಾದಿಗಳಿಗೆ ಎಚ್ಚರಿಕೆ ನೀಡಿದೆ. ಪರಿಸ್ಥಿತಿ ಯಾವ ಮಟ್ಟಕ್ಕೆ ತಲುಪಿದೆಯೆಂದರೆ, ಫೆ.1ರಂದು ತುರ್ತುಪರಿಸ್ಥಿತಿ ಘೋಷಿಸಿರುವ ರಾಜ ಜ್ಞಾನೇಂದ್ರ, ಮಾವೋವಾದಿಗಳನ್ನು ಹತ್ತಿಕ್ಕುವಂತೆ ಸೇನೆಗೆ ಆದೇಶ ನೀಡಿದ್ದಾರೆ.

ಹಾಗಂತ ನಾವು ಕೈಕಟ್ಟಿ ಕುಳಿತುಕೊಳ್ಳುವಂತಿಲ್ಲ. ಭಾಷಾ ಚಳವಳಿಗಳನ್ನು, ಪ್ರಾದೇಶಿಕ ಹೋರಾಟಗಳನ್ನು, ಜನಾಂಗೀಯ ಸಮರಗಳನ್ನು, ಕೋಮು ಹಿಂಸಾಚಾರಗಳನ್ನು ಖಂಡಿತಾ ದೇಶ ಕಂಡಿದೆ. ಈ ಯಾವುದೇ ಹೋರಾಟ-ಚಳವಳಿಗಳು ರಾಷ್ಟ್ರದ ಭೌಗೋಳಿಕ ಸಮಗ್ರತೆಗೆ ಎಂದೂ ಕುತ್ತು ತಂದಿರಲಿಲ್ಲ. ಆದರೆ 'ರೆಡ್ ಕಾರಿಡಾರ್' ಅಥವಾ 'ಕಾಂಪ್ಯಾಕ್ಟ್ ರೆಡ್ ಝೋನ್' ಎಂಬ ಹೆಸರಿನಡಿ ದೇಶಾದ್ಯಂತ ಒಗ್ಗೂಡಿರುವ ನಕ್ಸಲೀಯರು, ಪ್ರಜಾತಾಂತ್ರಿಕ ವ್ಯವಸ್ಥೆ ಮತ್ತು ಕಾನೂನಿನ ಪ್ರಭುತ್ವಕ್ಕೇ ಕಂಟಕವಾಗಿದ್ದಾರೆ. ಛೀನಾದಲ್ಲಿ ಉತ್ಪಾದನೆಯಾಗುತ್ತಿರುವ (ಜಗತ್ತಿನಲ್ಲಿ ಅತಿ ಹೆಚ್ಚು) ಎ.ಕೆ-47 ರೈಫಲ್‌ಗಳು ಈಶಾನ್ಯ ಭಾರತದ ಪ್ರತ್ಯೇಕತಾವಾದಿಗಳು ಮತ್ತು ನಕ್ಸಲೀಯರ ಕೈಸೇರುತ್ತಿವೆ. ಹೀಗೆ ಪೊಲೀಸರಿಗಿಂತಲೂ ಸುಧಾರಿತ ಶಸ್ತ್ರಾಸ್ತ್ರಗಳು ಮತ್ತು ಸಂಪರ್ಕ ವ್ಯವಸ್ಥೆ ಹೊಂದಿರುವ ಭಾರತೀಯ ನಕ್ಸಲೀಯರು, ನೇಪಾಳದಿಂದ ಪ್ರಾರಂಭವಾಗಿ ಬಿಹಾರ, ಜಾರ್ಖಂಡ್, ಉತ್ತರ ಪ್ರದೇಶ, ಛತ್ತೀಸ್‌ಗಢ, ಒರಿಸ್ಸಾ, ಪಶ್ಚಿಮ ಬಂಗಾಳ, ಮಧ್ಯಪ್ರದೇಶ, ಪಶ್ಚಿಮ ಮಹಾರಾಷ್ಟ್ರ, ಆಂಧ್ರಪ್ರದೇಶ ಸೇರಿದಂತೆ ಒಟ್ಟು 13 ರಾಜ್ಯಗಳ 156 ಜಿಲ್ಲೆಗಳಲ್ಲಿ ತಲೆಯೆತ್ತಿದ್ದಾರೆ. ಆದರೆ 2003ರಲ್ಲಿ ಒಟ್ಟು 9 ರಾಜ್ಯಗಳ 55 ಜಿಲ್ಲೆಗಳನ್ನು ಮಾತ್ರ 'ನಕ್ಸಲ್ ಪ್ರಭಾವಿತ ಪ್ರದೇಶ'ಗಳೆಂದು ಘೋಷಿಸಲಾಗಿತ್ತು. ಕೇವಲ ಒಂದು ವರ್ಷದಲ್ಲಿ ನಾಯಿಕೊಡೆಗಳಂತೆ 13 ರಾಜ್ಯ, 156 ಜಿಲ್ಲೆಗಳಿಗೆ ಹರಡಿರುವ ನಕ್ಸಲೀಯರು ಮಾಡುತ್ತಿರುವ ಘನಕಾರ್ಯವಾದರೂ ಏನು? ಆಂಧ್ರ ಪ್ರದೇಶವೊಂದರಲ್ಲೇ 500ಕ್ಕೂ ಅಧಿಕ ಪೊಲೀಸರನ್ನು ಗುಂಡಿಟ್ಟು ಕೊಂದಿದ್ದಾರೆ. 2004, ನವೆಂಬರ್ 20ರಂದು ಉತ್ತರ ಪ್ರದೇಶದ ಚಾಂಡೌಲಿ ಜಿಲ್ಲೆಯಲ್ಲಿ ಪೊಲೀಸ್ ವಾಹನ ಸ್ಫೋಟಿಸಿ, 17 ಪೊಲೀಸರನ್ನು ಕೊಲೆಗೈದಿದ್ದಾರೆ. ಜನವರಿ 5ರಂದು ಬಿಹಾರದಲ್ಲಿ ನೆಲಬಾಂಬ್ ಸ್ಫೋಟಿಸಿ, ಒಬ್ಬ ಎಸ್ಪಿ ಸೇರಿದಂತೆ 7 ಜನ ಪೊಲೀಸರನ್ನು ಹತ್ಯೆ ಮಾಡಿದ್ದಾರೆ. ಫೆ.3ರಂದು ನಡೆದ ಮೊದಲ ಹಂತದ ವಿಧಾನ ಸಭೆ ಚುನಾವಣೆ ವೇಳೆ ಜಾರ್ಖಂಡ್‌ನಲ್ಲಿ 6 ಪೊಲೀಸರನ್ನು

ಬಲಿತೆಗೆದುಕೊಂಡಿದ್ದಾರೆ. ಸಾಲದೆಂಬಂತೆ ನಮ್ಮ ಪಾವಗಡದಲ್ಲಿ 6 ಪೊಲೀಸರ ಹತ್ಯೆಯಾಗಿದೆ.

ನಕ್ಸಲರ ಹತ್ಯೆ ಬಗ್ಗೆ ಬಕೆಟ್‌ಗಟ್ಟಲೆ ಕಣ್ಣೀರು ಸುರಿಸುವವರು ಈಗ ಏನು ಹೇಳುತ್ತಾರೆ? ಪೊಲೀಸರ ಜೀವಕ್ಕೆ ಬೆಲೆಯಿಲ್ಲವೆ? ಸಾಮಾಜಿಕ ನ್ಯಾಯಕ್ಕಾಗಿ ಹೋರಾಡುವ ಪರಿ ಇದೇನಾ? ಅಮಾಯಕ ಪೊಲೀಸರ ಮೇಲೆ ಗ್ರನೇಡ್ ಎಸೆಯುವುದು ಸೈದ್ಧಾಂತಿಕ ಹೋರಾಟವೇ? ಅದಿರಲಿ, ನಮ್ಮ ಅಕ್ಕ-ತಂಗಿಯರು ರಸ್ತೆಯಲ್ಲಿ ಸುರಕ್ಷಿತವಾಗಿ, ಗೌರವಯುತವಾಗಿ ಓಡಾಡುತ್ತಿದ್ದರೆ ಅದಕ್ಕೆ ಪೊಲೀಸರೇ ಕಾರಣವಲ್ಲವೆ? ಇಂತಹ ಕಾನೂನು ಪಾಲಕರನ್ನೇ ಕೊಲೆಗೈಯ್ಯುವ ನಕ್ಸಲಿಸಂ ನಮಗೆ ಬೇಕೆ?

ಡಾ. ಎಚ್. ಸುದರ್ಶನ್ ನೆನಪಾಗುತ್ತಿದ್ದಾರೆ.....

1973ರಲ್ಲಿ ವೈದ್ಯ ಪದವಿ ಪಡೆದ ಸುದರ್ಶನ್, ಯಾವುದಾದರೊಂದು ನಗರದಲ್ಲಿ ಕ್ಲಿನಿಕ್ ತೆರೆದು ಕೈತುಂಬಾ ಕಾಸು ಮಾಡಬಹುದಿತ್ತು. ಆದರೆ ಅವರಿಗೆ ಕಾಸಿಗಿಂತ ಸೇವೆಯ ತುಡಿತ ಹೆಚ್ಚಿತ್ತು. ಆಗ ಕಂಡಿದ್ದೇ ಬಿಳಿಗಿರಿ ರಂಗನ ಬೆಟ್ಟ ಅಥವಾ ಬಿ.ಆರ್. ಹಿಲ್ಸ್! 1979ರಲ್ಲಿ ಬಿಳಿಗಿರಿರಂಗನ ಬೆಟ್ಟಕ್ಕೆ ಬಂದಾಗ, ಗಿರಿಜನರಾದ ಸೋಲಿಗರು ಅಳಿವಿನಂಚಿನಲ್ಲಿದ್ದರು. ಆಧುನಿಕ ಕೃಷಿ ಮತ್ತು ಕೈಗಾರಿಕೆಗಳ ಹಾವಳಿಯಿಂದಾಗಿ ಜೀವನಾಡಿಯಾಗಿದ್ದ ಕಾಡೇ ನಶಿಸಲಾರಂಭಿಸಿತ್ತು. ಆದರೆ ಹಲವಾರು ಶತಮಾನಗಳ ಕಾಲ ಕಾಡಲ್ಲಿ ನಿಶ್ಚಿಂತೆಯಿಂದಿದ್ದ ಸೋಲಿಗರ ಮೇಲಾಗುತ್ತಿದ್ದ ಅನ್ಯಾಯದ ವಿರುದ್ಧ ಸುದರ್ಶನ್ ಎಕೆ-47 ಎತ್ತಿಕೊಳ್ಳಲಿಲ್ಲ. ಸೋಲಿಗರನ್ನು ಸಂಘಟಿಸಿ ಪ್ರತಿಭಟನೆಯನ್ನೂ ಮಾಡಲಿಲ್ಲ. ಭಿತ್ತಿಪತ್ರ ಹಿಡಿದು ವಿಧಾನಸೌಧದ ಮುಂದೆ ಧರಣಿ ಕೂರಲಿಲ್ಲ. ವಿವೇಕಾನಂದ ಗಿರಿಜನ ಕೇಂದ್ರವನ್ನು ಸ್ಥಾಪನೆ ಮಾಡಿದರು. ಸೋಲಿಗರ ಜೀವನಶೈಲಿಗನುಗುಣವಾದ ವೃತ್ತಿ ಶಿಕ್ಷಣವನ್ನು ಆರಂಭಿಸಿದರು. ಉದ್ಯೋಗ ಸೃಷ್ಟಿಸಿ ಸ್ವಾವಲಂಬಿಗಳಾಗಲು ಮಾರ್ಗ ತೋರಿದರು. ಶಾಲೆ, ಆಸ್ಪತ್ರೆ ತೆರೆದರು. ಸೋಲಿಗ ಸಮುದಾಯಕ್ಕೆ ಸೇರಿದ ಶೇ. 88ಕ್ಕೂ ಅಧಿಕ ಮಕ್ಕಳು ಇಂದು ಶಾಲೆಯಲ್ಲಿ ನಮ್ಮಂತೆಯೇ ಅಕ್ಷರ ಕಲಿಯುತ್ತಿದ್ದಾರೆ. ಕಾಲೇಜು ಸೇರಿದ್ದಾರೆ. ಮಾಸ್ಟರ್ ಡಿಗ್ರಿ ಪಡೆದಿದ್ದಾರೆ. ರಾಜ್ಯ ಮಟ್ಟದ ಕ್ರೀಡಾಕೂಟದಲ್ಲಿ ಹೆಸರು ಮಾಡಿದ್ದಾರೆ. ಈ ಮಧ್ಯೆ ಸುದರ್ಶನ್ ಅವರು, ಆರಂಭಿಸಿದ ಗಿರಿಜನ ಸಹಕಾರಿ ಸಂಘ 1200 ಜನರಿಗೆ ಉದ್ಯೋಗ ನೀಡಿದೆ. ಪ್ರತಿ ಹಳ್ಳಿಗಳಲ್ಲೂ ಒಂದೊಂದು ಸಂಘಗಳು ಸ್ಥಾಪನೆಯಾಗಿವೆ. ತಮ್ಮ ಹಕ್ಕುಗಳನ್ನು ತಾವೇ ರಕ್ಷಣೆ ಮಾಡಿಕೊಳ್ಳುತ್ತಿದ್ದಾರೆ. ಲ್ಯಾಂಡ್ ಮಾಫಿಯಾಕ್ಕೆ ಕಡಿವಾಣ ಬಿದ್ದಿದೆ.

ಪ್ರಾಮಾಣಿಕ ಕಾಳಜಿಯಿದ್ದವರಿಗೆ ಖಂಡಿತಾ ಯಾವುದೇ 'ಇಸಂ' ಅಥವಾ ಸಿದ್ಧಾಂತಗಳ ಅಗತ್ಯವಿಲ್ಲ. ಈ ಮಾತಿಗೆ ಸುದರ್ಶನ್‌ಗಿಂತ ದೊಡ್ಡ ಸಾಕ್ಷಿ ಬೇಕೆ? ಅವರು ಮನಸ್ಸು ಮಾಡಿದ್ದರೆ ಗಿರಿಜನರನ್ನು ಎತ್ತಿಕಟ್ಟಿ 25 ವರ್ಷಗಳ ಹಿಂದೆಯೇ ಬಿಳಿಗಿರಿ ರಂಗನ ಬೆಟ್ಟದಲ್ಲಿ ನಕ್ಸಲಿಸಂ

ಆರಂಭಿಸಬಹುದಿತ್ತು. ಆದರೆ ತಾವು ಕಲಿತ ವಿದ್ಯೆಯಿಂದ ಸಾವಿರಾರು ಜನರಿಗೆ ಅನ್ನ ನೀಡುವ ಮಾರ್ಗವನ್ನು ಶೋಧಿಸಿದರು. ಆದರೆ ಪಶ್ಚಿಮ ಘಟ್ಟದಲ್ಲಿ 2 ಸಾವಿರಕ್ಕೂ ಕಡಿಮೆ ಇರುವ ಗಿರಿಜನರಿಗೆ ಜವಾಹರಲಾಲ್ ನೆಹರೂ ವಿಶ್ವವಿದ್ಯಾಲಯದಲ್ಲಿ ಕಲಿತ 'ಪ್ರೇಮ್'ನ ವಿದ್ಯೆಯಿಂದ ಯಾವ ಲಾಭವಾಯಿತು? ಒಂದು ವೇಳೆ ನಮ್ಮ ಸುದರ್ಶನ್ ಮತ್ತು 'ಅಪ್ಪಿಕೊ' ಚಳವಳಿಯ ಹರಿಕಾರ ಸುಂದರ್‌ಲಾಲ್ ಬಹುಗುಣ ಕೂಡ ಪ್ರೇಮ್ ಹಾದಿ ತುಳಿದಿದ್ದರೆ....?

ಒಂದು ಕ್ಷಣ ಯೋಚಿಸಿ.



ಜಗತ್ತು ಅವರನ್ನು ಕಡೆ ಬಾರಿ ಜೀವಂತವಾಗಿ ಕಂಡಿದ್ದು 1989, ಮೇ 29ರಂದು. ಅವತ್ತು ಕಣ್ಣಲ್ಲಿ ನೀರು ತುಂಬಿಕೊಂಡಿದ್ದ ಝೂವೋ ಜಿಯಾಂಗ್, ತಾವೊಬ್ಬ ಕಟ್ಟಾ ಕಮ್ಯುನಿಸ್ಟ್ ನಾಯಕನೆಂಬುದನ್ನೇ ಮರೆತಿದ್ದರು. ಇತ್ತ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿದ್ದುಕೊಂಡೇ ಚೀನಾದಲ್ಲಿ ಪ್ರಜಾಪ್ರಭುತ್ವದ ಧ್ವನಿಯೆತ್ತಿದ್ದ ಹು ಯಾವೋಬಂಗ್, ಅಧಿಕಾರ ಕಳೆದುಕೊಂಡು 1989, ಏಪ್ರಿಲ್ 15ರಂದು ಅಕಾಲಿಕ ಮರಣವನ್ನಪ್ಪಿದ್ದರು. ರೊಚ್ಚಿಗೆದ್ದು ತಿಯಾನನ್ ಮನ್ ಸ್ಕ್ವೇರ್‌ಗೆ ಆಗಮಿಸಿದ್ದ ವಿದ್ಯಾರ್ಥಿಗಳ ಸಂಖ್ಯೆ, ಸಂಜೆ ವೇಳೆಗೆ 10 ಸಾವಿರ ದಾಟಿತ್ತು. ಪ್ರಜಾಪ್ರಭುತ್ವದ ಕಹಳೆ ಮೊಳಗಿತ್ತು. ತಿಂಗಳು ಕಳೆದರೂ ಕದಲದ ಪ್ರತಿಭಟನಾಕಾರರ ಬಗ್ಗೆ ಕಮ್ಯುನಿಸ್ಟ್ ನಾಯಕರು ಕೋಪೋದ್ರಿಕ್ತರಾಗಿದ್ದರು. ಮುಂದೆ ಎದುರಾಗಲಿದ್ದ ಅಪಾಯವನ್ನು ಅರಿತಿದ್ದ ಯಾವೋಬಂಗ್ ಅವರ ಉತ್ತರಾಧಿಕಾರಿ ಝೂವೋ ಜಿಯಾಂಗ್, ಆರ್ಡರ್ ಮಾಡುತ್ತಿದ್ದ ತಮ್ಮ ಕೈಗಳನ್ನು ವಿದ್ಯಾರ್ಥಿಗಳ ಮುಂದೆ ಜೋಡಿಸಿ ನಿಂತಿದ್ದರು! ಏಕೆಂದರೆ ಮೇ 29ರ ಹೊತ್ತಿಗೆ ದಶಲಕ್ಷ ಮೀರಿದ್ದ ಪ್ರತಿಭಟನಾಕಾರರ ವಿರುದ್ಧ ಮಿಲಿಟರಿ ಕ್ರಮ ಕೈಗೊಳ್ಳಲು, ಸಹ ಕಮ್ಯುನಿಸ್ಟ್ ನಾಯಕರು ನಿರ್ಧಾರ ಕೈಗೊಂಡಿದ್ದರು. ಸೇನೆಗೆ ಆದೇಶ ನೀಡಲಾಗಿತ್ತು. ಟ್ಯಾಂಕ್‌ಗಳು ತಿಯಾನನ್‌ಮನ್ ಸ್ಕ್ವೇರ್‌ನತ್ತ ತೆರಳಲು ಆರಂಭಿಸಿದ್ದವು. ಇನ್ನು ಕೆಲವೇ ಗಂಟೆಗಳಲ್ಲಿ ಹಿಂಸಾಚಾರ ಭುಗಿಲೇಳಲಿತ್ತು. ಇದನ್ನರಿತಿದ್ದ ಝೂವೋ, ಇತರ ಕಮ್ಯುನಿಸ್ಟ್ ನಾಯಕರಂತೆ ರಾಕ್ಷಸೀ ಕೃತ್ಯದಲ್ಲಿ ಭಾಗಿಯಾಗುವ ಬದಲು ಪ್ರತಿಭಟನಾಕಾರರ ಮನವೊಲಿಸಲು ಮುಂದಾಗಿದ್ದರು. ಆದರೆ 'ಕೂಡಲೇ ಇಲ್ಲಿಂದ ಹೊರಹೋಗಿ' ಎಂದು ಬೇಡಿಕೊಂಡರೂ ಪ್ರತಿಭಟನಾಕಾರರು ಕೇಳಲಿಲ್ಲ. ಜೂನ್ 3ರ ರಾತ್ರಿ ಚೀನಿ ಸೇನೆಯ ಬಂದೂಕುಗಳು ಬಾಯ್ತೆರೆದವು. ಬೆಳಗಾಗುವ ಹೊತ್ತಿಗೆ 10 ಸಾವಿರ ವಿದ್ಯಾರ್ಥಿಗಳು ಮತ್ತು ಪ್ರತಿಭಟನಾಕಾರರು ಹೆಣವಾಗಿದ್ದರು. ಮಹಾಗೋಡೆಯಡಿ ಪ್ರಜಾಪ್ರಭುತ್ವದ ಧ್ವನಿ ಮಣ್ಣಾಗಿತ್ತು.

ಝೂವೋ ಜಿಯಾಂಗ್ ಹುಟ್ಟಿದ್ದು 1919, ಮೇ 17ರಂದು, ಹೆನನ್‌ನಲ್ಲಿ. ಭೂಮಾಲೀಕ ರೊಬ್ಬರ ಮಗನಾಗಿ ಜನಿಸಿದ ಝೂವೋ, ಕೃಷಿ ಭೂಮಿಯಲ್ಲಿ ದುಡಿಯುವ ಕಾರ್ಮಿಕರ ಪರ ನಿಲುವು ತಳೆದಿದ್ದರು. ಹಾಗಾಗಿಯೇ ಕಮ್ಯುನಿಸ್ಟ್ ಪಕ್ಷದತ್ತ ಆಕರ್ಷಣೆಯುಂಟಾಯಿತು. ಭೂಮಾಲೀಕನಾದ ಅಪ್ಪನೊಂದಿಗೆ ಸೈದ್ಧಾಂತಿಕವಾಗಿ ವಿರುದ್ಧ ನಿಲುವು ತಳೆದಿದ್ದ ಝೂವೋ, 13 ವರ್ಷ ತುಂಬುವ ಮೊದಲೇ ಕಮ್ಯುನಿಸ್ಟ್ ಪಕ್ಷದ ಯುವ ಮೋರ್ಚಾ ಸೇರಿದರು. 1937ರಲ್ಲಿ ಬಂಡಾಯ ಆರಂಭವಾಯಿತು. ಆದರೆ ಭೂಸುಧಾರಣೆ ಹೆಸರಲ್ಲಿ ಭೂಮಾಲೀಕರ ವಿರುದ್ಧ ಬಂಡಾಯವೆದ್ದಿದ್ದ ಕಮ್ಯುನಿಸ್ಟರು, ಝೂವೋ ಅವರ ಅಪ್ಪನನ್ನೇ ಕೊಂದು ಹಾಕಿದರು. ಇಂತಹ ವೈಯಕ್ತಿಕ ಆಘಾತದ ಹೊರತಾಗಿಯೂ ತಾವು ನಂಬಿದ್ದ ಸಿದ್ಧಾಂತದ ಜತೆ ಝೂವೋ ರಾಜೀಮಾಡಿಕೊಳ್ಳಲಿಲ್ಲ. ದೀರ್ಘ ಸಂಘರ್ಷದ ನಂತರ 1949ರಲ್ಲಿ ಚೀನಾ ಕಮ್ಯುನಿಸ್ಟರ ತೆಕ್ಕೆ ಸೇರಿತು. ಮುಂಚೂಣಿಯಲ್ಲಿ ನಿಂತು ಹೋರಾಡಿದ ಮಾವೋ ಝೆಡಾಂಗ್ ಚೀನಾದ ಚುಕ್ಕಾಣಿ ಹಿಡಿದರು. ಇತ್ತ 1951ರ ಹೊತ್ತಿಗೆ ಅತ್ಯಂತ ಪ್ರಭಾವಿ ನೇತಾರನಾಗಿ ಹೊರ ಹೊಮ್ಮಿದ್ದ ಝೂವೋ, ಗ್ವಾಂಗ್‌ಡಾಂಗ್ ಪ್ರಾಂತ್ಯದ ಕಾರ್ಯದರ್ಶಿಯಾದರು. ಆ ಮೂಲಕ

ಕಮ್ಯುನಿಸ್ಟ್ ಪಕ್ಷದ ಕೇಂದ್ರೀಯ ಸಮಿತಿಯ ಸದಸ್ಯರಾಗಿ ಸ್ಥಳೀಯ ಮಟ್ಟದಲ್ಲಿ ಕಾರ್ಯನಿರ್ವಹಿಸದೇ ಪ್ರಾಂತ್ಯವೊಂದರ ಚುಕ್ಕಾಣಿ ಹಿಡಿದ ಮೊದಲ ವ್ಯಕ್ತಿಯೆನಿಸಿದರು. ಅದು ಪ್ರತಿಭೆಯ ಪ್ರದರ್ಶನಕ್ಕೆ ವೇದಿಕೆಯಾಯಿತು.

ಈ ಮಧ್ಯೆ, ಮಾವೋ ಝೆಡಾಂಗ್ ಅವರ Great Leap Forward ನೀತಿಗಳಿಂದ ಚೀನಿ ಅರ್ಥವ್ಯವಸ್ಥೆಯ ಮೇಲಾಗಿದ್ದ ಪ್ರತಿಕೂಲ ಪರಿಣಾಮವನ್ನು ತಪ್ಪಿಸುವ ಸಲುವಾಗಿ ಲಿಯೂ ಶಾವೋಕಿ, ಡೆಂಗ್ ಕ್ಷಿಯಾವೋಪಿಂಗ್ ಮುಂತಾದ ಇತರ ಚೀನಿ ನಾಯಕರು ಉದಾರ ಆರ್ಥಿಕ ನೀತಿಗಳತ್ತ ಒಲವು ತೋರಿದರು. ಆದರೆ ಕೃತಿಯಲ್ಲಿ ತೋರಿದ ಝೂವೋ, ಕೃಷಿ ಸುಧಾರಣೆಗಳನ್ನು ಜಾರಿಗೆ ತಂದರು. ಅದರಲ್ಲಿ ಯಶಸ್ವಿಯೂ ಆದರು. ಆದರೆ ಕ್ರಾಂತಿಯ ಗುಂಗಿನಲ್ಲೇ ಇದ್ದ ಸಂಪ್ರದಾಯವಾದಿ ಅಧ್ಯಕ್ಷ ಮಾವೋಗೆ ಇರುಸು-ಮುರುಸುಂಟಾಯಿತು. ಝೂವೋ ದ್ವೇಷ ಕಟ್ಟಿಕೊಳ್ಳಬೇಕಾಗಿ ಬಂತು. ಈ ನಡುವೆ, ಕಮ್ಯುನಿಸ್ಟ್ ಪಕ್ಷದಲ್ಲಿ ಪ್ರಭಾವ ಹೆಚ್ಚಿಸಿಕೊಳ್ಳುತ್ತಿದ್ದ ಲಿಯೂ ಶಾವೋಕಿ, ಡೆಂಗ್ ಕ್ಷಿಯಾವೋಪಿಂಗ್ ಅವರಿಂದ ತಮ್ಮ ಸ್ಥಾನಕ್ಕೇ ಅಪಾಯ ವುಂಟಾಗಿದೆ ಎಂದು ಭಾವಿಸಿದ ಮಾವೋ, Cultural Revolution ಹೆಸರಿನಲ್ಲಿ ವಿರೋಧಿಗಳನ್ನು ಹತ್ತಿಕ್ಕಲು ಮುಂದಾದರು. ಜತೆಗೆ ವಿರೋಧಿಗಳ ಬಾಯಿಮುಚ್ಚಿಸಲು, ಯುದ್ಧದ ಮೂಲಕ ತಮ್ಮ ಸ್ಥಾನವನ್ನು ಭದ್ರಪಡಿಸಿಕೊಳ್ಳಲು 1962ರಲ್ಲಿ ಭಾರತದ ಮೇಲೆ ಅನಗತ್ಯವಾಗಿ ಆಕ್ರಮಣವನ್ನೂ ಮಾಡಿದರು. ಅಲ್ಲದೆ 'ರೆಡ್ ಗಾರ್ಡ್' ಹೆಸರಿನಲ್ಲಿ ಯುವಕರನ್ನು ಒಗ್ಗೂಡಿಸಿ, ಕಮ್ಯುನಿಸ್ಟ್ ಪಕ್ಷದಲ್ಲೇ ಇದ್ದ ಉದಾರವಾದಿ ಬುದ್ಧಿಜೀವಿಗಳು ಮತ್ತು ಸುಶಿಕ್ಷಿತ ವರ್ಗದ ವಿರುದ್ಧ ಛೂಬಿಟ್ಟರು. ಅದಕ್ಕೆ ಬಲಿಯಾದವರಲ್ಲಿ ಡೆಂಗ್ ಕ್ಷಿಯಾವೋಪಿಂಗ್ ಮತ್ತು ಝೂವೋ ಪ್ರಮುಖರು. 1965ರಲ್ಲಿ ಕಲ್ಚರಲ್ ರೆವಲ್ಯೂಶನ್ ಪ್ರಾರಂಭವಾದ ಕೂಡಲೇ ಬಂಡವಾಳಶಾಹಿ ನಿಲುವು ತಳೆದಿರುವ ಆರೋಪದ ಮೇಲೆ ಝೂವೋ ಅವರನ್ನು ಗ್ವಂಗ್‌ಡಾಂಗ್‌ನ ಮುಖ್ಯಸ್ಥ ಸ್ಥಾನದಿಂದ ಕಿತ್ತೊಗೆಯಲಾಯಿತು.

ಆದರೆ Cultural Revolutionನ ಕಟ್ಟಾ ಪ್ರತಿಪಾದಕರಾಗಿದ್ದ ಸೇನಾ ಮುಖ್ಯಸ್ಥ ಲಿನ್ ಬಿಯಾವೋ ಅವರು, ಮಾವೋ ಉತ್ತರಾಧಿಕಾರಿ ಎಂಬ ಮಾತು ಕೇಳಿಬರಲಾರಂಭಿಸಿದ್ದೇ ತಡ ರೆಡ್‌ಗಾರ್ಡ್‌ನಲ್ಲೇ ಭಿನ್ನಾಭಿಪ್ರಾಯವುಂಟಾಯಿತು. ದ್ವೇಷವನ್ನು ಪೋಷಿಸಿಕೊಂಡು ಬಂದಿದ್ದ ಪ್ರಧಾನಿ ಝೌ ಎನ್‌ಲೈ, ಮಾವೋ ಅವರ ಕಿವಿ ಕುಟುಕಿದರು. ಅದೇ ಸಂದರ್ಭದಲ್ಲಿ, ಅಂದರೆ 1968ರಲ್ಲಿ ಜೆಕಸ್ಲೊವಾಕಿಯಾ ಮೇಲೆ ಆಕ್ರಮಣ ಮಾಡಿದ್ದ ಸೋವಿಯತ್ ರಷ್ಯಾ ಮತ್ತು ಚೀನಾ ನಡುವೆ ಕೂಡ ಗಡಿ ವಿವಾದವುಂಟಾಯಿತು. ಲಿನ್ ಬಿಯಾವೋ ಕೊಲೆಯಾದರು. ಮಾವೋ ಹಾಸಿಗೆ ಹಿಡಿದರು. ಅಲ್ಲಿಗೆ ರಾಜಕೀಯ ಅಜ್ಞಾತವಾಸದಲ್ಲಿದ್ದ ಝೂವೋ ಮತ್ತು ಡೆಂಗ್ ಕ್ಷಿಯಾವೊಪಿಂಗ್ ಅವರ ಪುನರಾಗಮನಕ್ಕೆ ಹಾದಿ ಸುಗಮವಾಯಿತು. ಝೂವೋ ಬಗ್ಗೆ ಒಲವು ಹೊಂದಿದ್ದ ಝೌ ಎನ್‌ಲೈ, 1973ರಲ್ಲಿ ಚೀನಾದ ಅತಿದೊಡ್ಡ ಮತ್ತು ಜನಭರಿತ ಪ್ರಾಂತ್ಯವಾದ ಸಿಚುವಾನ್‌ನ ಆಡಳಿತಾಧಿಕಾರಿಯಾಗಿ ನೇಮಕ ಮಾಡಿದರು. ಆದರೆ ಮಾವೋ ಅವರ Great Leap Forward ಮತ್ತು Cultural Revolutionನಿಂದಾಗಿ ಸಿಚುವಾನ್ ಆರ್ಥಿಕ ದಿವಾಳಿಯ

ಸುಳಿಗೆ ಸಿಲುಕಿತ್ತು. ಆದರೂ ಚುಕ್ಕಾಣಿ ಹಿಡಿದ ಝೂವೋ, ಮಾರುಕಟ್ಟೆ ಸುಧಾರಣೆಗಳನ್ನು ಜಾರಿಗೆ ತಂದರು. ಕೇವಲ ಮೂರು ವರ್ಷಗಳಲ್ಲಿ ಸಿಚುವಾನ್‌ನ ಕೈಗಾರಿಕಾ ಉತ್ಪಾದನೆ ಶೇ.81ರಷ್ಟು ಹೆಚ್ಚಾದರೆ, ಕೃಷಿ ಉತ್ಪನ್ನ ಶೇ.25 ರಷ್ಟು ಹೆಚ್ಚಳ ಕಂಡಿತು. 'ಹಸಿದಿದ್ದರೆ ಝೂವೋ ಹೆಸರು ಹೇಳಿ' ಎಂದು ಜನ ಮಾತಾಡಿಕೊಳ್ಳುವಷ್ಟು ಪ್ರಸಿದ್ಧರಾದರು. ಈ ನಡುವೆ 1976ರಲ್ಲಿ ಮಾವೋ ಕಣ್ಣುಮುಚ್ಚಿದರು, 1977ರಲ್ಲಿ ಡೆಂಗ್ ಅಧ್ಯಕ್ಷರಾದರು. ಆರ್ಥಿಕ ಸಂಕಷ್ಟದ ಸುಳಿಗೆ ಸಿಲುಕಿದ್ದ ಚೀನಾಕ್ಕೆ ಸಿಚುವಾನ್‌ನಲ್ಲಿ ಸಾಬೀತಾಗಿದ್ದ ಝೂವೋ ಅವರ ಆರ್ಥಿಕ ನೀತಿಗಳೇ ಮದ್ದು ಎಂದರಿತ ಡೆಂಗ್, 1977ರಲ್ಲಿ ಝೂವೋ ಅವರನ್ನು ಪಾಲಿಟ್ ಬ್ಯೂರೋದ ಸದಸ್ಯರಾಗಿ ಮಾಡಿದರು. ಡೆಂಗ್ ಮುಂದಾಳತ್ವದಲ್ಲಿ 1979ರಲ್ಲಿ ಚೀನಾದಲ್ಲಿ ಆರ್ಥಿಕ ಉದಾರೀಕರಣ ನೀತಿಗಳನ್ನು ಜಾರಿಗೆ ತರಲಾಯಿತು. ಭಿಕ್ಷೆ ಬೇಡುವ ಸ್ಥಿತಿಗೆ ತಲುಪಿದ್ದ ಚೀನಾ,  ವಿಶ್ವದ ಆರ್ಥಿಕ ಶಕ್ತಿಯಾಗಿ ಹೊರಹೊಮ್ಮಲಾರಂಭಿಸಿತು. ಇಂತಹ ಸಾಧನೆಯ ಹಿಂದಿದ್ದ ಸೇವೆಯನ್ನು ಗುರುತಿಸಿದ ಡೆಂಗ್, ಝೂವೋ ಅವರನ್ನು 1980ರಲ್ಲಿ ಪ್ರಧಾನಿಯಾಗಿ, 1987ರಲ್ಲಿ ಕಮ್ಯುನಿಸ್ಟ್ ಪಕ್ಷದ ಪ್ರಧಾನ ಕಾರ್ಯದರ್ಶಿಯಾಗಿ ನೇಮಕ ಮಾಡುವ ಮೂಲಕ ತಮ್ಮ ಉತ್ತರಾಧಿಕಾರಿಯಾಗುವ ಅವಕಾಶ ಕಲ್ಪಿಸಿದರು.

ಆದರೆ ಝೂವೋ ಕಟ್ಟಾ ಕಮ್ಯುನಿಸ್ಟನಾಗಿರಲಿಲ್ಲ! ಅಧ್ಯಕ್ಷ ಮಿಖಾಯಿಲ್ ಗೋರ್ಬಚೇವ್ ಸೋವಿಯತ್ ಒಕ್ಕೂಟದಲ್ಲಿ, 1985ರಲ್ಲಿ ಜಾರಿಗೆ ತಂದಿದ್ದ Glasnost [openness] ನೀತಿಗಳನ್ನು ಚೀನಾದಲ್ಲೂ ಅಳವಡಿಸಿಕೊಳ್ಳಬೇಕೆಂಬ ನಿಲುವು ಹೊಂದಿದ್ದರು. ಅಂದರೆ ಆರ್ಥಿಕ ಸಶಕ್ತೀಕರಣದ ಜತೆಗೆ ಪ್ರಜಾತಾಂತ್ರಿಕ ಪ್ರಕ್ರಿಯೆಯೂ ಪ್ರಾರಂಭವಾಗಬೇಕು ಎಂಬ ನಿಲುವು ಝೂವೋ ಅವರದ್ದಾಗಿತ್ತು. ಇಂತಹ ನಿಲುವಿನಿಂದಾಗಿಯೇ, ಚೀನಾದ ಮುಂದಿನ ಅಧ್ಯಕ್ಷನಾಗುವ ಅವಕಾಶವನ್ನೇ ಪಣಕ್ಕಿಟ್ಟು ಅಂದು ತಿಯಾನನ್‌ಮನ್ ಸ್ಕ್ವೇರ್‌ಗೆ ಬಂದಿದ್ದರು. ಪ್ರತಿಭಟನಾಕಾರರಿಗೆ ಬಂದೂಕಿನಿಂದ ಉತ್ತರ ಕೊಡಬೇಕೆಂಬ ಪ್ರಧಾನಿ ಲೀ ಪೆಂಗ್ ಮಾತನ್ನು ಧಿಕ್ಕರಿಸಿ, ವಿದ್ಯಾರ್ಥಿಗಳ ಬಗ್ಗೆ ಅನುಕಂಪ ವ್ಯಕ್ತಪಡಿಸಿದ್ದರು. 'ತನ್ನ ಬಳಿ ಸೇನೆಯಿದೆ ಎಂದ ಡೆಂಗ್‌ಗೆ, ನನ್ನ ಬೆಂಗಾವಲಿಗೆ ವಿದ್ಯಾರ್ಥಿಗಳಿದ್ದಾರೆ' ಎಂದು ಮಾರುತ್ತರ ನೀಡಿದ್ದರು. ಆದರೆ ಪ್ರತಿಯಾಗಿ ದೊರೆತದ್ದಾದರೂ ಏನು? 10 ಸಾವಿರ ವಿದ್ಯಾರ್ಥಿಗಳ ಹತ್ಯೆ. ಝೂವೋ ಪದಚ್ಯುತಿ ಹಾಗೂ ಗೃಹಬಂಧನ. ಮತ್ತೆ ಜಗತ್ತು ಝೂವೋ ಅವರನ್ನು ಕಂಡಿದ್ದು ಜನವರಿ 17ರಂದು, ಹೆಣವಾಗಿ. ಇವತ್ತು ಚೀನಾ ವಿಶ್ವದ ಸೂಪರ್ ಪವರ್ ರಾಷ್ಟ್ರವಾಗಿ ಹೊರಹೊಮ್ಮುತ್ತಿದ್ದರೆ, ಅದರ ಅರ್ಥವ್ಯವಸ್ಥೆ ವಾರ್ಷಿಕ ಶೇ. 8-9ರ ದರದಲ್ಲಿ ಅಭಿವೃದ್ಧಿ ಹೊಂದುತ್ತಿದ್ದರೆ ಅದಕ್ಕೆ ಕಾರಣರಾದ ಝೂವೋ ಜಿಯಾಂಗ್‌ಗೆ ಸಕಲ ಸರಕಾರಿ ಮರ್ಯಾದೆಯೊಂದಿಗೆ ಅಂತಿಮ ಗೌರವ ಸಲ್ಲಿಸುವುದಕ್ಕೂ ಕಮ್ಯುನಿಸ್ಟರು ಒಪ್ಪುತ್ತಿಲ್ಲ. ಸತ್ತು ಹತ್ತು ದಿನಗಳಾದರೂ ಅಂತ್ಯಕ್ರಿಯೆಯೇ ನಡೆದಿಲ್ಲ!

ಇದು ಸರಿಯೆ?

ಸೋವಿಯತ್‌ನಂತೆ ಆರ್ಥಿಕ ಹಾಗೂ ರಾಜಕೀಯ ವ್ಯವಸ್ಥೆಯ ಪುನರ್‌ರಚನೆಯ

ಉದ್ದೇಶ ಹೊಂದಿದ್ದ Glasnost ಮತ್ತು perestroikaದ ಬಗ್ಗೆ ಝೂವೋ ಕೂಡ ಒಲವು ಹೊಂದಿದ್ದರೂ ಮಿಖಾಯಿಲ್ ಗೋರ್ಬಚೇವ್ ಅವರಂತೆ ಖಂಡಿತಾ ಮೂರ್ಖರಾಗಿರಲಿಲ್ಲ! ಅಂದರೆ ಆರ್ಥಿಕ ಸಶಕ್ತೀಕರಣಕ್ಕಿಂತ ಮೊದಲೇ ಕಮ್ಯುನಿಸ್ಟ್ ವ್ಯವಸ್ಥೆಯನ್ನು ಒಡೆಯಲು ಗೋರ್ಬಚೇವ್ ಪ್ರಯತ್ನಿಸಿದರು. ಹೀಗೆ ಸ್ಟಾಲಿನ್, ಲೆನಿನ್ ನೀತಿಗೆ ಒಗ್ಗಿದ್ದ ರಾಷ್ಟ್ರವನ್ನು ಏಕಾಏಕಿ ಬದಲಿಸಲು ಪ್ರಯತ್ನಿಸಿದಾಗ, ಸೋವಿಯತ್ ಒಕ್ಕೂಟವೇ ಛಿದ್ರವಾಯಿತು. ಆದರೆ ಕಮ್ಯುನಿಸ್ಟ್ ಪಕ್ಷದ ಕೇಂದ್ರಿಯ ಸಮಿತಿಗೆ ಆಯ್ಕೆಯಾಗುವ ಗ್ರಾಮ ಮಟ್ಟದ ಸದಸ್ಯರನ್ನು ಚುನಾವಣೆಯ ಮೂಲಕ ಆರಿಸಬೇಕೆಂದು 1986ರಲ್ಲೇ ಕರೆ ನೀಡಿದ್ದ ಝೂವೋ, ಆರ್ಥಿಕ ಸಶಕ್ತೀಕರಣ ಮತ್ತು ಪ್ರಜಾತಾಂತ್ರಿಕ ವ್ಯವಸ್ಥೆಯ ಅಳವಡಿಕೆಗಳೆರಡು ಒಟ್ಟೊಟ್ಟಿಗೆ ಸಾಗಬೇಕು ಎಂಬ ನಿಲುವು ಹೊಂದಿದ್ದರು. ಏಕೆಂದರೆ ಜನರಿಗೆ ಮೊದಲು ಅನ್ನ ನೀಡಬೇಕು. ಆನಂತರವಷ್ಟೇ ವ್ಯವಸ್ಥೆಯನ್ನು ಬದಲಾಯಿಸಲು ಪ್ರಯತ್ನಿಸಬೇಕು ಎಂಬ ಅರಿವು ಅವರಿಗಿತ್ತು. ಇತರ ಚೀನಿ ನಾಯಕರು ಝೂವೋ ನಿಲುವನ್ನು ಒಪ್ಪಲು, ಅಳವಡಿಸಿಕೊಳ್ಳಲು ಹಿಂದೇಟು ಹಾಕುತ್ತಿರಬಹುದು. ಆದರೆ ಆರ್ಥಿಕ ಸುಧಾರಣೆಗಳು ಮತ್ತು ಅದರಿಂದ ಹೆಚ್ಚಾಗುತ್ತಿರುವ ಜೀವನಮಟ್ಟ ಹಾಗೂ ಕೈಯಲ್ಲಿ ಓಡಾಡುತ್ತಿರುವ ಕಾಸು, ಇಂದಲ್ಲ ನಾಳೆ ಪ್ರಜಾಪ್ರಭುತ್ವದ ಧ್ವನಿಯನ್ನು ಬಲಗೊಳಿಸುತ್ತದೆ. ಆಗ ಝೂವೋ ಕನಸು ಖಂಡಿತಾ ಸಾಕಾರಗೊಳ್ಳುತ್ತದೆ.

ಇಂತಹ ದೂರದೃಷ್ಟಿಯನ್ನು ಹೊಂದಿದ್ದ ಮಹಾನ್ ನಾಯಕನನ್ನು ಸತ್ತ ನಂತರವೂ ಅವಮಾನಿಸಲು ಯತ್ನಿಸುತ್ತಿರುವ ಕಮ್ಯುನಿಸ್ಟರು ಕೃತಘ್ನರಲ್ಲವೆ?

ಪ್ರತಾಪ್ ಸಿಂಹ ತಮ್ಮ ಅಂಕಣದಲ್ಲಿ ಅಂತಾರಾಷ್ಟ್ರೀಯ ವಿಷಯಗಳು, ಸಮಸ್ಯೆಗಳು ಮತ್ತು ಮುಂದುವರಿದ ದೇಶಗಳ ಇಬ್ಬಗೆ ನೀತಿಗಳನ್ನು ತುಂಬ ಸ್ಪಷ್ಟವಾಗಿ, ಸರಳವಾಗಿ ತಿಳಿಸುತ್ತಿದ್ದಾರೆ. ಅವರಿಗೆ ಅಭಿನಂದನೆಗಳು ಹಾಗೂ ಈ ಅಂಕಣವನ್ನು ಪ್ರಕಟಿಸುತ್ತಿರುವ 'ವಿಜಯ ಕರ್ನಾಟಕ' ಪತ್ರಿಕೆಗೆ ಧನ್ಯವಾದಗಳು.

ಅರುಣ್ ಆರ್. ಬಾದಾಮಿ
ದಾವಣಗೆರೆ

ಅಮ್ಮ ಅನ್ನೋಳೆ ಹಾಗೆ. ನಮ್ಮ ಕಣ್ಣೆದುರಿಗೆ ಯಾವತ್ತೂ ಅವಳು ಬೆಳೆದು ದೊಡ್ಡವಳಾಗಲ್ಲ! ಅವಳೇನೇ ಕಿರಿಕಿರಿ ಮಾಡಿದರೂ, ಚಿರಿಪಿರಿ ಎಂದರೂ, ಪಟೀರ್ ಅಂತಾ ಹೊಡೆದರೂ ಶತ್ರು ಅನಿಸುವುದಿಲ್ಲ. ಎಷ್ಟೇ ಬೋಧನೆ ಮಾಡಿದರೂ ಫಿಲಾಸಫರ್ ಆಗುವುದಿಲ್ಲ. ಹೋಗು ಬಾ ಅನ್ನೋ ಲೆವೆಲ್ಲಲ್ಲೇ ಇರುತ್ತಾಳೆ. ಹಾಗಾಗಿಯೇ ನಾವೆಷ್ಟೇ ಬೆಳೆದು ದೊಡ್ಡವರಾದರೂ ಅಮ್ಮ ಮಾತ್ರ ಮನಸ್ಸಿಗೆ ಹತ್ತಿರವಾಗಿಯೇ ಇರುತ್ತಾಳೆ. ಕೂದಲು ಬೆಳ್ಳಗಾದರೂ, ಚರ್ಮ ಸುಕ್ಕುಗಟ್ಟಿದರೂ ನಮ್ಮ ಮಟ್ಟಿಗೆ ಅವಳೆಂದೂ ಅಜ್ಜಿಯಾಗುವುದಿಲ್ಲ. ಅವಳೂ ಕೂಡ, ನಾವೆಷ್ಟೇ ಮನ ನೋಯಿಸಿದರೂ, ಕೀಳಾಗಿ ಮಾತಾಡಿದರೂ, ತೋಳುಗಳು ತ್ರಾಣ ಕಳೆದುಕೊಂಡಾಗ ಅಸಡ್ಡೆ ತೋರಿದರೂ ಅಕ್ಕ-ಪಕ್ಕದವರೆದುರು ಏನೂ ಆಗಿಲ್ಲವೆಂಬಂತೆ ನಗು ಬೀರುತ್ತಾಳೆ. ನೋವನ್ನು ತೋರಿಸಿಕೊಳ್ಳುವುದೂ ಇಲ್ಲ, ಬೇರೆಯವರ ಜತೆ ಅಳಲು ತೋಡಿಕೊಂಡು ಮಕ್ಕಳ ಬಣ್ಣ ಬಯಲು ಮಾಡುವುದೂ ಇಲ್ಲ. ಹೆತ್ತು-ಹೊತ್ತು ಸಾಕಿದ್ದಲ್ಲದೆ, ನೋವನ್ನು ನುಂಗಿಕೊಂಡು ಮಕ್ಕಳ ಮರ್ಯಾದೆಯನ್ನೂ ಕಾಪಾಡುತ್ತಾಳೆ.

ಕೆಲ ಅಮ್ಮಂದಿರಂತೂ ಇನ್ನೂ ವಿಶಿಷ್ಟ!

ಆತ್ಮೀಯ ಶ್ರೀಮತಿ ಗಾಡ್ಗೀಳ್,

2005, ಫೆಬ್ರವರಿ 28ರಂದು ನೀವು ಕಳುಹಿಸಿರುವ ಪತ್ರ ಕೈಸೇರಿತು. ನಿಮ್ಮ ಮಗ ಫ್ಲೈಟ್ ಲೆಫ್ಟಿನೆಂಟ್ ಅಭಿಜಿತ್ ಗಾಡ್ಗೀಳ್ ಅವರನ್ನು ಬಲಿ ತೆಗೆದುಕೊಂಡ ಮಿಗ್-21 ದುರಂತದ ಬಗ್ಗೆ ಡೈರೆಕ್ಟರ್ ಜನರಲ್ ಕೂಡ ನನಗೆ ಮಾಹಿತಿ ನೀಡಿದರು. ಭಾರತೀಯ ವಾಯುಪಡೆಯ ಬಗ್ಗೆ ನೀವು ಮತ್ತು ನಿಮ್ಮ ಪತಿ ನಿವೃತ್ತ ವಿಂಗ್ ಕಮಾಂಡರ್ ಗಾಡ್ಗೀಳ್‌ಗಿರುವ ಅಪಾರ ಗೌರವವನ್ನು ಖಂಡಿತ ನಾವು ಒಪ್ಪಿಕೊಳ್ಳುತ್ತೇವೆ. ಇಂತಹ ನಿಮ್ಮ ಗೌರವ ಮತ್ತು ಪ್ರೀತಿಯೇ ಮಗ ಅಭಿಜಿತ್‌ನನ್ನು ಫೈಟರ್ ಪೈಲಟ್ ಆಗುವಂತೆ ಪ್ರೋತ್ಸಾಹಿಸಿದ್ದು. ಅಭಿಜಿತ್ ಭಾರತೀಯ ವಾಯುಪಡೆಯೆಂಬ ಕುಟುಂಬದ ಸದಸ್ಯನಾಗಿದ್ದ. ಆತನ ಅಗಲಿಕೆ ಬಗ್ಗೆ ನಮಗೂ ಅತೀವ ನೋವಿದೆ.

ಇಷ್ಟಾಗಿಯೂ 2003, ಮಾರ್ಚ್‌ನಲ್ಲಿ 'ವೈಷಮ್ಯಯುತ ಪ್ರಚಾರಾಂದೋಲನದ ಮೂಲಕ ವಾಯುಪಡೆಯ ಆತ್ಮಸ್ಥೈರ್ಯವನ್ನೇ ಉಡುಗಿಸುವ ಪ್ರಯತ್ನ ಮಾಡುತ್ತಿದ್ದೀರಿ' ಎಂದು ಏರ್ ಮಾರ್ಷಲ್ ಅಶೋಕ್ ಗೋಯೆಲ್ ಬರೆದ ಪತ್ರದಿಂದಾಗಿ ನಿಮ್ಮ ಮನಸ್ಸಿಗಾಗಿರುವ ಘಾಸಿ, ನೋವಿನ ಅರಿವೂ ನನಗಿದೆ.

ಅದಕ್ಕೆ ನಾನು ವಿಷಾದಿಸುತ್ತೇನೆ ಮತ್ತು ಆ ಪತ್ರವನ್ನು ಅಧಿಕೃತ ದಾಖಲೆಯಿಂದ ತೆಗೆದುಹಾಕಲಾಗುವುದು. ಅಲ್ಲದೆ, ದೃಷ್ಟಿ ದೋಷದಿಂದಾದ ತಾಂತ್ರಿಕ ಸಮಸ್ಯೆಯಿಂದಾಗಿ ಮಿಗ್-21 ವಿಮಾನ ಪತನಗೊಂಡಿತೇ ಹೊರತು ನಿಮ್ಮ ಮಗನ ತಪ್ಪೇನು ಇಲ್ಲ ಎಂಬುದು

ತನಿಖೆಯಿಂದ ಪತ್ತೆಯಾಗಿದೆ. ಅಭಿಜಿತ್ ವಾಯುಪಡೆಯ ಪರಿಣತ ಪೈಲಟ್ ಆಗಿದ್ದ. ಆತನ ಸ್ಥಾನವನ್ನು ಬೇರಾರಿಂದಲೂ ತುಂಬುವುದು ಕಷ್ಟ.

ವಾಯುಪಡೆಯ ಪರವಾಗಿ ಮತ್ತು ವೈಯಕ್ತಿಕವಾಗಿ ನನ್ನ ಸಂತಾಪವನ್ನು ವ್ಯಕ್ತಪಡಿಸಲು ಬಯಸುತ್ತೇನೆ. ಅಲ್ಲದೆ ನಿಮ್ಮ ಹಾಗೂ ವಿಂಗ್ ಕಮಾಂಡರ್ ಗಾಡ್ಗೀಳ್ ಅವರ ನೋವಿಗೆ ಸ್ಪಂದಿಸುವುದು ನಮ್ಮ ಜವಾಬ್ದಾರಿ.

ದಿನಾಂಕ: 23-03-2005 ಗೌರವಗಳೊಂದಿಗೆ

-ಎಸ್.ಪಿ. ತ್ಯಾಗಿ
ಏರ್ ಚೀಫ್ ಮಾರ್ಷಲ್

ಇಂತಹ ಕ್ಷಮಾಪಣಾ ಪತ್ರವನ್ನು ಭಾರತೀಯ ವಾಯುಪಡೆ ಹಿಂದೆಂದೂ ಬರೆದಿರಲಿಲ್ಲ. ಎಂತಹ ತಪ್ಪಾಗಿದ್ದರೂ ತಪ್ಪೊಪ್ಪಿಕೊಂಡಿರಲಿಲ್ಲ!

2001, ಸೆಪ್ಟೆಂಬರ್ 17ರಂದು ರಾಜಸ್ಥಾನದಲ್ಲಿ ನೆಲಕ್ಕಪ್ಪಳಿಸಿದ ಮಿಗ್-21 ವಿಮಾನ ಫ್ಲೈಟ್ ಲೆಫ್ಟಿನೆಂಟ್ ಅಭಿಜಿತ್ ಗಾಡ್ಗೀಳ್‌ನನ್ನು ಬಲಿ ತೆಗೆದುಕೊಂಡಿತ್ತು. 29ನೇ ವರ್ಷಕ್ಕೆ ಮೃತ್ಯುವಶನಾಗಿದ್ದ. ಖ್ಯಾತ ಫೈಟರ್ ಪೈಲಟ್ ಆಗಬೇಕೆಂಬ ಕನಸು ಅಕಾಲಿಕ ಅಂತ್ಯ ಕಂಡಿತ್ತು. ಆದರೆ ಅತೀವ ವೇದನೆಯ ನಡುವೆಯೂ ಅಮ್ಮ ಕವಿತಾ ಗಾಡ್ಗೀಳ್ ಮನಸ್ಸು ಪ್ರಕ್ಷುಬ್ಧಗೊಂಡಿತ್ತು. ಏಕೆಂದರೆ ಮಿಗ್ ವಿಮಾನದ ಪತನಕ್ಕೆ ತಾಂತ್ರಿಕ ದೋಷವಲ್ಲ, ಬದಲಿಗೆ ಪೈಲಟ್‌ನ ಬೇಜವಾಬ್ದಾರಿಯೇ ಕಾರಣ ಎಂದು ಭಾರತೀಯ ವಾಯುಪಡೆ ಸಬೂಬು ನೀಡಿತ್ತು. ಆದರೆ ತನ್ನ ಮಗನಿಗೆ ಅಸಮರ್ಥನೆಂಬ ಹಣೆಪಟ್ಟಿ ಕಟ್ಟುವ ಯತ್ನವನ್ನು ಕವಿತಾ ಸಹಿಸದಾದರು.

2002, ಡಿಸೆಂಬರ್ 21ರಂದು 'ಅಭಿಜಿತ್ ಏರ್ ಸೇಫ್ಟಿ ಫೌಂಡೇಶನ್' ಸ್ಥಾಪಿಸಿದ ಕವಿತಾ, 1970ರಿಂದೀಚೆಗೆ ನಡೆದಿರುವ 360 ಮಿಗ್-21 ವಿಮಾನ ದುರಂತದಿಂದಾಗಿ ಸಾವಿಗೀಡಾದ 157 ಪೈಲಟ್‌ಗಳ ಪರವಾಗಿ ಹೋರಾಟ ಆರಂಭಿಸಿದರು. ಪ್ರತಿ ಕಚೇರಿಯ ಕದ ತಟ್ಟಿದರು. ಕೊನೆಗೆ ರಾಷ್ಟ್ರಪತಿ ಅಬ್ದುಲ್ ಕಲಾಂ ಬಳಿಗೂ ಹೋದರು. ಹೀಗೆ ಮೂರು ವರ್ಷಗಳ ಸತತ ಪ್ರಯತ್ನ. ನಿರಂತರ ಹೋರಾಟ. ಬೆನ್ನಲ್ಲೇ ವಾಯುಪಡೆಯಿಂದ ಅವಮಾನಕಾರಿ ಪತ್ರ. ಆದರೂ ಪ್ರಯತ್ನ ಬಿಡಲಿಲ್ಲ. ಕಟಿಬದ್ಧ ಹೋರಾಟ ಕೊನೆಗೂ ಫಲ ಕೊಟ್ಟಿದೆ. ತಪ್ಪೊಪ್ಪಿಕೊಂಡಿರುವ ಏರ್ ಚೀಫ್ ಮಾರ್ಷಲ್ ತ್ಯಾಗಿ, ವಾಯುಪಡೆಯ ಪರವಾಗಿ ಮಾರ್ಚ್ 23ರಂದು ಕ್ಷಮೆ ಕೇಳಿದ್ದಾರೆ. ಆದರೆ ಇಂತಹ ಒಂದು ಪತ್ರಕ್ಕಾಗಿ, ಅದಕ್ಕಿಂತ ಮಿಗಿಲಾಗಿ ತನ್ನ ಮಗ ಅಸಮರ್ಥನಲ್ಲ ಎಂದು ಸಾಬೀತುಪಡಿಸುವುದಕ್ಕಾಗಿ ಅಮ್ಮ ಕವಿತಾ ಗಾಡ್ಗೀಳ್ ಪಟ್ಟ ಶ್ರಮ ಅಷ್ಟಿಷ್ಟಲ್ಲ.

ಅಮ್ಮಂದಿರೇ ಹಾಗೆ. ಹೆತ್ತು-ಹೊತ್ತು, ಸಾಕಿ-ಸಲಹಿದ್ದಲ್ಲದೆ ಮಕ್ಕಳ ಮಾನ ಕಾಪಾಡಲೂ ಜೀವ ತೇಯುತ್ತಾರೆ. ಬಹುಶಃ ಅದಕ್ಕೆ ಇರಬೇಕು 'ತಾನು ಎಲ್ಲೆಡೆಯಲ್ಲೂ ಇರಲು ಸಾಧ್ಯವಿಲ್ಲ ಎಂದು ದೇವರು ಅಮ್ಮನನ್ನು ಸೃಷ್ಟಿಸಿದ್ದು'! ಎಷ್ಟೇ ಆಗಲಿ, ಎನ್.ಎಸ್. ಲಕ್ಷ್ಮೀ ನಾರಾಯಣ ಭಟ್ಟರು ಹೇಳುವಂತೆ...

ಅಮ್ಮ ಎಂಬ ಮಾತಿಗಿಂತ
ಬೇರೆ ಮಂತ್ರ ಏನಿದೆ?
ಅದು ನೀಡುವ ಶಾಂತಿ-ಕಾಂತಿ
ಯಾವ ತಾರೆ ರವಿಗಿದೆ?

ಅಪ್ಪನ ಜತೆ ನಾವೆಷ್ಟೇ ಆಪ್ತರಾಗಿರಬಹುದು. ಅಕ್ಕರೆಯ ಸಲುಗೆಯೂ ಸಿಗಬಹುದು. ಸ್ನೇಹಿತನಂತೆ ನೋಡಿಕೊಳ್ಳಲೂ ಬಹುದು. ಹಾಗಂತ ಅಪ್ಪನ ಹೆಗಲ ಮೇಲೆ ಕೈಹಾಕಲು ಆಗುವುದಿಲ್ಲ. ನಾವು ದೊಡ್ಡವರಾದಂತೆ ಎಲ್ಲೋ ಒಂದು ಕಡೆ ಅಂತರ ಸೃಷ್ಟಿಯಾ ಗಲಾರಂಭಿಸುತ್ತದೆ. ಆದರೆ ಅಮ್ಮ ಹಾಗಲ್ಲ. ಅವಳು ದೊಡ್ಡವಳೂ ಆಗಲ್ಲ, ದೂರವೂ ಹೋಗಲ್ಲ. ಆದರೂ ಒಂದು ರೀತಿಯ ಭಯ ಕಾಡುತ್ತಿದೆ. ಏಕೆಂದರೆ ಈಗಿನ ಮೆಟರಿಯಲಿಸ್ಟಿಕ್ ಅಥವಾ ಭೌತಿಕ ಜೀವನದಲ್ಲಿ ಅಮ್ಮ ಇರಬಹುದು ಅಥವಾ ಅಪ್ಪ ಆಗಿರಬಹುದು. ಈ ಸಂಬಂಧದ ಕೊಂಡಿಗಳು ಸಡಿಲವಾಗುತ್ತಿವೆಯೇನೋ ಎಂಬ ಚಿಂತೆ ಪ್ರಾರಂಭವಾಗುತ್ತಿದೆ. ಇಪ್ಪತ್ತು ವರ್ಷಗಳ ಹಿಂದೆ 'ವೃದ್ಧರ ಕುರಿತಾದ ಮೊದಲ ಅಂತಾರಾಷ್ಟ್ರೀಯ ಶೃಂಗ' ವಿಯೆನ್ನಾದಲ್ಲಿ ಆಯೋಜನೆಯಾಗಿತ್ತು. ವೃದ್ಧಾಪ್ಯವೆಂಬುದೇ ಒಂದು ಹೊರೆಯೆಂಬ ಭಾವನೆ ಸೃಷ್ಟಿಯಾಗು ವುದನ್ನು ತಡೆಯಲು ಜಗತ್ತಿನ ರಾಷ್ಟ್ರಗಳು ಕ್ರಿಯಾ ಯೋಜನೆಯನ್ನೂ ರೂಪಿಸಿದ್ದವು. ಅಂದು ಭಾರತ ನಿರುಮ್ಮಳವಾಗಿತ್ತು. ಏಕೆಂದರೆ ನಮ್ಮ ಪರಂಪರೆ, ಸಂಸ್ಕೃತಿ ವಯೋಮಾನಕ್ಕೆ ಯಾವತ್ತೂ ಗೌರವ ನೀಡುತ್ತಾ ಬಂದಿವೆ. ಆದರೆ ಅದೇ ಮಾತನ್ನು ಇಪ್ಪತ್ತು ವರ್ಷಗಳ ನಂತರ ಹೇಳುವುದು ಕಷ್ಟವಾಗುತ್ತಿದೆ. ನಾವು ನಡೆದುಕೊಳ್ಳುತ್ತಿರುವ ರೀತಿ ಹಾಗಿದೆ. ಪಾಶ್ಚಿಮಾತ್ಯ ರಾಷ್ಟ್ರಗಳಲ್ಲಿ ಮಾತ್ರ ಕೇಳಿಬರುತ್ತಿದ್ದ 'ಓಲ್ಡ್ ಏಜ್ ಹೋಮ್' ಅಥವಾ ವೃದ್ಧಾಶ್ರಮಗಳು ಭಾರತದಲ್ಲಿಂದು ಒಂದು ಸಾವಿರ ಸಂಖ್ಯೆಯನ್ನು ದಾಟಿವೆ! ಏಕೆಂದರೆ ಅಮ್ಮ ಅನ್ನೋ ಪ್ರೀತಿಯಾಗಲಿ ಅಥವಾ ಅಪ್ಪ ಅನ್ನೋ ಗೌರವವಾಗಲಿ ಎಲ್ಲೋ ಒಂದು ಕಡೆ ಕ್ಷೀಣಿಸಲಾರಂಭಿಸಿವೆ. ತ್ರಾಣ ಕಳೆದುಕೊಂಡ ಅಮ್ಮ ಅನಗತ್ಯ ಹೊರೆಯಾಗಿ, ಥಳುಕು ಬಳುಕಿನ ಲೋಕದಲ್ಲಿ ಶುದ್ಧ 'ಬುದ್ದು' ಆಗಿ ಕಾಣುತ್ತಿದ್ದಾಳೆ. ನಾವು ಕಲಿಯುತ್ತಿರುವ ವಿದ್ಯೆ ಅಂಥದ್ದು. ಅದು ದುಡ್ಡು ಮಾಡುವ ಮಾರ್ಗ ಶೋಧನೆಯಾಗಿದೆಯೇ ಹೊರತು, ಮೌಲ್ಯಗಳನ್ನು ಬೆಳೆಸುವಲ್ಲಿ ವಿಫಲವಾಗುತ್ತಿದೆ. ಗುರು ಕೂಡ ಅರ್ಥಕಳೆದುಕೊಳ್ಳು ತ್ತಿದ್ದಾನೆ. ಜತೆಗೆ ಮೈಕ್ರೋ ಫ್ಯಾಮಿಲಿ ಅಥವಾ ಗಂಡ-ಹೆಂಡತಿ-ಮಗು ಮಾತ್ರವೆಂಬ ಕುಟುಂಬ ಕಲ್ಪನೆ ಸಂಬಂಧಗಳನ್ನು ಬಲಿ ತೆಗೆದುಕೊಳ್ಳುತ್ತಿದೆ.

ಇನ್ನು ಬ್ರೈನ್ ಡ್ರೈನ್ ಹೆಸರಿನಲ್ಲಿ ಅಮೇರಿಕವನ್ನೋ, ಬ್ರಿಟನನ್ನೋ ಅಥವಾ ಆಸ್ಟ್ರೇಲಿಯಾವನ್ನೋ ಅರಸುತ್ತಾ ಸಾಗುವ ಮಕ್ಕಳ ಧೋರಣೆ ಪ್ರೀತಿ ಮತ್ತು ಸಂಬಂಧಗಳೇ ಡ್ರೈ ಅಥವಾ ಬರಿದಾಗುವಂತೆ ಮಾಡುತ್ತಿದೆ. ವರ್ಷಕ್ಕೋ ಅಥವಾ ಎರಡು ವರ್ಷಕ್ಕೊ, ಬೇಸರ ಕಳೆಯಲು ಭಾರತಕ್ಕೆ ಪ್ಯಾಕೇಜ್ ಟೂರ್‌ನಂತೆ ಬರುವ ಮಕ್ಕಳು ಸ್ವಲ್ಪ ಬಿಡುವು ಮಾಡಿಕೊಂಡು ಹೆತ್ತವರನ್ನು ಕಂಡು ಹೋಗುತ್ತಾರೆ. ಒಟ್ಟಿನಲ್ಲಿ, ಅಮ್ಮ-ಅಪ್ಪನನ್ನೂ ಕಮಾಡಿಟ ಅಥವಾ ಸರಕಿನಂತೆ ನೋಡುವ, ಉಪಯೋಗಕ್ಕೆ ಬರುತ್ತಾರೆಯೇ ಎಂಬ ಲೆಕ್ಕಾಚಾರ ಹಾಕುವ ಕಾಲ ಬಂದಿರುವುದಂತೂ ನಿಜ.

ಇಲ್ಲಿ ಪೋಷಕರ ಪಾತ್ರವೂ ಇದೆ. ಅಡಗೂಲಜ್ಜಿ ಕಥೆ ಕೇಳಿಕೊಂಡು ಅಜ್ಜಿ ಜತೆ ಬೆಳೆಯಬೇಕಾದ ಕಾಲದಲ್ಲಿ ಮಕ್ಕಳನ್ನು ಬೇಬಿ ಸಿಟ್ಟಿಂಗ್ ಎಂಬ ಶಾಲಾಪೂರ್ವ ಪ್ರಯೋಗಾಲಯ ಗಳಿಗೆ ದಬ್ಬುತ್ತಾರೆ. ಹೀಗೆ ಸ್ಪರ್ಧಾತ್ಮಕ ಜಗತ್ತನ್ನು ಎದುರಿಸಲು ಮಕ್ಕಳನ್ನು ಅಣಿಗೊಳಿಸುತ್ತಾರೆಯೇ ಹೊರತು, ಜೀವನ ಪಾಠವನ್ನು ಕಲಿಸುವುದಕ್ಕಾಗಲಿ, ಮೌಲ್ಯಗಳನ್ನು ಮನದಲ್ಲಿ ಬಿತ್ತುವುದಕ್ಕಾಗಲಿ ಪ್ರಯತ್ನಿಸುವುದಿಲ್ಲ. ಸಕಲ ಸವಲತ್ತು ಗಳನ್ನು ಒದಗಿಸುವುದೇ ಪೋಷಕರ ಆದ್ಯ ಕರ್ತವ್ಯವೆಂಬಂತೆ ವರ್ತಿಸುತ್ತಾರೆ. ಇಂತಹ ವಾತಾವರಣದಲ್ಲಿ ಬೆಳೆದ ಮಕ್ಕಳಿಂದ ಅಮ್ಮ-ಅಪ್ಪ ಅನ್ನೋ ಪ್ರೀತಿಯನ್ನು ನಿರೀಕ್ಷಿಸುವುದಾದರೂ ಹೇಗೆ? ಇವತ್ತಿನ ಹುಡುಗಿಯರು ಅಷ್ಟೇ. ಅವರು ಸಮರ್ಥ ಅಮ್ಮಂದಿರಾಗುತ್ತಿದ್ದಾರಾ ಎಂದು ಪ್ರಶ್ನಿಸಿಕೊಳ್ಳುವಂತಾಗಿದೆ. ಏಕೆಂದರೆ ಈಗಲೇ ಜಂಜಾಟವೇಕೆ ಅಥವಾ ಸ್ವಲ್ಪ ದಿನ ಖುಷಿಯಾಗಿರೋಣ ಅಂತಾ ಅಮ್ಮನಾಗುವುದನ್ನೇ ಪೋಸ್ಟ್‌ಪೋನ್ ಮಾಡುವ ಪ್ರವೃತ್ತಿ ಕಂಡು ಬರುತ್ತಿದೆ. ಇನ್ನು ಡಿಂಕ್ಸ್(ಡಬಲ್ ಇನ್‌ಕಮ್ ನೋ ಕಿಡ್ಸ್) ಅಥವಾ 'ಲಿವ್ ಇನ್ ರಿಲೇಶನ್‌ಶಿಪ್'ನಂತಹ ಮೈ ಮಾತ್ರ ಹಂಚಿಕೊಳ್ಳುವ ನೂತನ ಸಂಬಂಧಗಳು ತಾಯಿ, ತಾಯ್ತನಗಳು ಅರ್ಥ ಕಳೆದುಕೊಳ್ಳುವಂತೆ ಮಾಡಿವೆ. ಹಾಗಾಗಿಯೇ ಲಕ್ಷ್ಮೀನಾರಾಯಣ ಭಟ್ಟರ....

ತಾಯೆ ನಿನ್ನ ಮಡಿಲಲ್ಲಿ
ಕಣ್ಣ ತೆರೆದ ಕ್ಷಣದಲ್ಲಿ
ಸೂತ್ರವೊಂದು ಬಿಗಿಯಿತಮ್ಮ
ಸಂಬಂಧದ ನೆಪದಲಿ....

ಎಂಬುದು ಬರೀ ಕವಿತೆಯಾಗಿ ಕಾಣುತ್ತಿದೆ. ನಿತ್ಯವೂ ನೆನಪಿಸಿಕೊಳ್ಳಬೇಕಾದ ಅಮ್ಮನ ಸ್ಥಾನ ಮತ್ತು ಮಕ್ಕಳ ಪ್ರೀತಿ ಪ್ರತಿ ವರ್ಷಕೊಮ್ಮೆ, ಮೇ ಎರಡನೇ ಭಾನುವಾರ ಗ್ರೀಟಿಂಗ್ ಕಾರ್ಡ್ ತಂದು, ಬೊಕೆ ಕೊಟ್ಟು 'ಹ್ಯಾಪಿ ಮದರ್ಸ್ ಡೇ' ಎಂದು ವಿಶ್ ಮಾಡುವಂತಹ ಹುಚ್ಚು ಆಚರಣೆಗಷ್ಟೇ ಸೀಮಿತವಾಗಿದೆ. ಇಲ್ಲಿ ಮಕ್ಕಳನ್ನು ದೂರಬೇಕೋ ಅಥವಾ ಅಪ್ಪ-ಅಮ್ಮಂದಿರನ್ನೋ?

ಇದೇನೇ ಇದ್ದರೂ, 'ಕುಪುತ್ರೋ ಜಾಯೇತ ಕ್ವಚಿದಪಿ ಕುಮಾತಾ ನ ಭವತಿ' ಅಂದರೆ, 'ಹುಟ್ಟಬಹುದಲ್ಲ ಕೆಟ್ಟ ಮಗುವು, ಇರಬಹುದೇ ಕೆಟ್ಟತಾಯಿ' ಎಂಬ ಶಂಕರಾಚಾರ್ಯರ ಮಾತನ್ನು ಸುಳ್ಳಾಗಿಸುವುದು ಬೇಡ.

ಪ್ರತಾಪ್ ಸಿಂಹ

# ಬೆತ್ತಲೆ ಜಗತ್ತು



ನನಗೆ ರಾಜಕೀಯ ಹಾಗೂ ಸ್ತ್ರೀಯರ ಸ್ಥಾನಮಾನಗಳ ಕುರಿತ ನಿಮ್ಮ ಲೇಖನಗಳು ಬಹಳ ಇಷ್ಟ...

ಮುಕ್ತಾ ಕೆ.ಎಂ. ರಾವ್, ಕಳಸ

'ಭಾಷಾಂಧರು ನಾವಲ್ಲ, ಭಾಷಾಭಿಮಾನವೂ ನಮಗಿಲ್ಲ' ಲೇಖನ ಪ್ರತಿಕ್ಷಣವೂ ಓದುಗನ ಅಂತರಾಳವನ್ನು ಕೆದಕುತ್ತದೆ.

ಚಿತ್ರಾ ಕರ್ಕೇರಾ, ಉಜಿರೆ

ಒಂದೊಂದು ಬರಹವೂ ಎಷ್ಟೊಂದು ಅಭಿಮಾನ ಹುಟ್ಟಿಸುತ್ತೆ, ಬಹುಪಾಲು ವಿಚಾರಗಳು ದೇಶದ ಬಗ್ಗೆ ಚಿಂತನೆಗೆ ಹಚ್ಚುತ್ತವೆ.

ಅಂಬಿಕಾ, ಹಾಸನ

ತಮ್ಮ ಲೇಖನಗಳು ರಾಷ್ಟ್ರಾಭಿಮಾನವನ್ನು ಬಡಿದೆಬ್ಬಿಸುತ್ತಿದೆ. ಎಗ್ಗಿಲ್ಲದೇ ಬರೆಯುವ ತಮ್ಮ ಶೈಲಿ ನಿಜಕ್ಕೂ ಸ್ತುತ್ಯಾರ್ಹ.

ಅನಿಲ್, ಕಿರಣ್, ಬಿಜಾಪೂರ

ವಿಷಯ ಸಂಗ್ರಹ ಹಾಗೂ ದಿಟ್ಟತನ ಮೆಚ್ಚಿಗೆಯಾಗುತ್ತಿದೆ. ಬರಹಗಾರರು ಯುವಪೀಳಿಗೆಗೆ ಮಾರ್ಗದರ್ಶಕರಾಗಿದ್ದಾರೆ.

ಡಿ. ಕೃಷ್ಣೇಗೌಡ, ಮೂಡಿಗೆರೆ

ಮೌನ ಮುರಿಸುವ ಕತ್ತಲೆಯ ಹೊದಿಕೆ ಯಥಾಸ್ಥಿತಿ ಮನವರಿಕೆ ಮಾಡಿಕೊಳ್ಳಲು ತಡೆಯಾಗಿ ನಿಂತಿದೆ. ತಮಗೆ ಕಂಡಂತೇ ಇತರರಿಗೂ ಕಾಣಬೇಕೆಂಬ ಹಠ ಇವರಿಗೆ ಇದ್ದಂತಿದೆ.

ಕೇಶವ ಶೆಟ್ಟಿ ಕೆ., ಆದೂರು





ಸಾಹಿತ್ಯ ಪ್ರಕಾಶನ
ಹುಬ್ಬಳ್ಳಿ : 580 020

ಬೆಲೆ : ರೂ. ೧೨೦/-